**ಪದ್ಮಮಹಾಪುರಣದ ಭೂಮಿಖಂಡದಲ್ಲಿ ಮೂರನೆಯ ಭಾಗದ**

# ವಿಷಯಾನುಕ್ರಮಣಿಕೆ.




ಪುಟ ಸಂಖ್ಯೆ

**ಎಂಭತ್ತೈದನೆಯ ಅಧ್ಯಾಯ—**

ಗುರುತೀರ್ಥದ ವರ್ಣನೆ. ಚ್ಯವನನ ಚರಿತ್ರೆ. ಚ್ಯವನನು ತೀರ್ಥ ಯಾತ್ರೆ ಮಾಡುತ್ತ ನರ್ಮದೆಯ ಬಳಿಯಿರುವ ಓಂಕಾರೇಶ್ವರನ ಬಳಿಗೆ ಬಂದು ಅಲ್ಲಿ ಆಲದಮರದ ಕೆಳಗೆ ಕೂತುಕೊಳ್ಳುವುದು. ಅಲ್ಲಿ ಕುಂಜಲನೆಂಬ ಗಿಣಿಯು ನಾಲ್ಕು ಮಕ್ಕಳೊಡನೆ ಮಾತ ನಾಡಿದುದು. ಅದರಲ್ಲಿ ಮೊದಲನೆಯ ಮಗನ ಪ್ರಶ್ನೆಗೆ ಉತ್ತರ ಕೊಡುತ್ತಾ ಪ್ಲಕ್ಷದ್ವೀಪದ ದಿವೋದಾಸನ ಮಗಳಾದ ದಿವ್ಯಾ ದೇವಿಯ ಮದುವೆಯ ಸಮಯದಲ್ಲಿ ನೂರ ಇಪ್ಪತ್ತೊಂದು ಜನ ಗಂಡದಿರ ಸಾಯುವಿಕೆಯ ವರ್ಣನೆ. 1-14

**ಎಂಭತ್ತಾರನೆಯ ಅಧ್ಯಾಯ—**

ಕುಂಜಲನು ಆ ದಿವ್ಯಾದೇವಿಯು ಪೂರ್ವದಲ್ಲಿ ಮಾಡಿದ ಪಾಪದ ವರ್ಣನೆ. ರಾಜಪುತ್ರಿಯಾಗುವ, ಸಿದ್ಧನ ಸೇವೆಯ ಪುಣ್ಯಫಲದ ವರ್ಣನೆ. ದಿವ್ಯಾದೇವಿಯ ಈ ಪಾಪನಾಶಕ್ಕೆ ಬೇಕಾದ ಭಗವ ದ್ಧ್ಯಾನ ವರ್ಣನೆಯು. 15-32

**ಎಂಭತ್ತೇಳನೆಯ ಅಧ್ಯಾಯ—**

ಅಶೂನ್ಯಶಯನವ್ರತದ ವರ್ಣನೆ. 33-39

**ಎಂಭತ್ತೆಂಟನೆಯ ಅಧ್ಯಾಯ—**

ತಂದೆಯ ಅಪ್ಪಣೆಯಂತೆ ಉಜ್ಜ್ವಲನೆಂಬ ಮಗನು ಪ್ಲಕ್ಷದ್ವೀಪಕ್ಕೆ ಹೋಗಿ, ದಿವ್ಯಾದೇವಿಗೆ ತನ್ನ ತಂದೆಯು ಹೇಳಿದ ಸ್ತೋತ್ರವನ್ನು ಹೇಳಿಕೊಡುವುದು. ಆ ರೀತಿಯಿಂದ ದಿವ್ಯಾದೇವಿಯು ವ್ರತ

ಪುಟ ಸಂಖ್ಯೆ

ವನ್ನು ಮಾಡಿ ಸ್ತೋತ್ರವನ್ನು ಮಾಡುವುದರಿಂದ ಪಾಪನಾಶ ವಾಗಿ ಭಗವಂತನ ಅನುಗ್ರಹದಿಂದ ದಿವ್ಯಲೋಕವು ಸಿಕ್ಕುವುದು. 40-49

**ಎಂಭತೊಂಭತ್ತನೆಯ ಅಧ್ಯಾಯ—**

ಎರಡನೆಯ ಮಗನಾದ ಸಮುಜ್ವಲನನ್ನು ಪ್ರಶ್ನಿಸಿ ಅವನ ಮಾತಿಗೆ ಉತ್ತರ ಕೊಡುತ್ತ, ಸಮುಜ್ವಲನು ನರ್ಮದೆಯ ದಡದಲ್ಲಿ ವ್ಯಾಧರ ವಿಷಯವನ್ನೂ ಕಪ್ಪು ಹಂಸಗಳ ವರ್ಣನೆಯನ್ನೂ ಮಾಡುವುದು. 50-59

**ತೊಂಭತ್ತನೆಯ ಅಧ್ಯಾಯ—**

ಕುಂಜಲನು ತೀರ್ಥಗಳನ್ನು ವರ್ಣಿಸುವುದು. ಇಂದ್ರನು ಎಲ್ಲಾ ತೀರ್ಥಗಳನ್ನು ಸೇರಿಸಿ ಪ್ರಯಾಗವೇ ಮೊದಲಾದ ನಾಲ್ಕು ತೀರ್ಥಗಳನ್ನು ಪ್ರಶಂಸಿಸುವುದು. 60-68

**ತೊಂಭತ್ತೊಂದನೆಯ ಅಧ್ಯಾಯ—**

ಬ್ರಹ್ಮಹತ್ಯೆ, ಅಗಮ್ಯಾಗಮನದ ದೋಷವನ್ನು ಹೊಂದಿರುವ ಇಂದ್ರನಿಗೆ ಮಾಲವ ದೇಶದಲ್ಲಿ ದೇವತೆಗಳು ಸ್ನಾನಮಾಡಿಸಿ, ಗಂಗೆಯೇ ಮೊದಲಾದ ತೀರ್ಥಗಳಲ್ಲಿ ಸ್ನಾನಮಾಡಿಸಿ ಶುದ್ಧಿಯಾದ ಮೇಲೆ ಮಾಲವ ದೇಶಕ್ಕೂ, ನಾಲ್ಕು ತೀರ್ಥಗಳಿಗೂ ವರವನ್ನು ಕೊಡುವಿಕೆ, ವಿದುರಕ್ಷತ್ರಿಯ, ಚಂದ್ರಶರ್ಮ, ವೇದಶರ್ಮ, ವಂಜುಲ ವೈಶ್ಯರು ಮಹಾಪಾತಕಿಗಳು ಒಂದುಕಡೆ ಇದ್ದುಕೊಂಡು, ಜೊತೆಯಲ್ಲಿ ಕಾಳಂಜರಗಿರಿಗೆ ಹೋಗುವುದು. 69-76

**ತೊಂಭತ್ತೆರಡನೆಯ ಅಧ್ಯಾಯ—**

ಅಲ್ಲಿ ಒಬ್ಬ ಸಿದ್ಧನ ಉಪದೇಶದಂತೆ ಈ ನಾಲ್ಕು ಜನರೂ ವಾರಾಣಸಿಗೆ ಹೋಗಿ ಸ್ನಾನಮಾಡುವುದರಿಂದ ಮೋಕ್ಷ ಬರುವ ವರ್ಣನೆ. ಅವರು ಸ್ನಾನಮಾಡಿದುದರಿಂದ ಆ ತೀರ್ಥಗಳಿಗೆ ಪಾಪವು ಬಂದು ಅವು ಕಪ್ಪಾಗುವುದು. ಅವು ಹಂಸರೂಪದಿಂದ ತಮ್ಮ

ಪುಟ ಸಂಖ್ಯೆ

ಪಾಪವನ್ನು ಕಳೆದುಕೊಳ್ಳಲು ತೀರ್ಥಗಳಿಗೆ ಹೋಗುವುದು. ಅದರ ಸಂಪರ್ಕದಿಂದ ಎಲ್ಲವೂ ಕಪ್ಪಾಗುವುದು. ಅವೆಲ್ಲವೂ ಸೇರಿ ಹಂಸರೂಪಿನಿಂದ ಸುತ್ತುವುದು. ಅವೆಲ್ಲವೂ ರೇವಾಕುಬ್ಜೆಯ ಸಂಗಮದಲ್ಲಿ ಸ್ನಾನಮಾಡುವುದರಿಂದ ಪಾಪವನ್ನು ಕಳೆದುಕೊಳ್ಳುವಿಕೆ. ಮಹಾಪಾಪಗಳು ಅಲ್ಲಿ ಸ್ನಾನಮಾಡುವುದರಿಂದ ನಾಶವಾಗುವಿಕೆ. ಈ ಸಂಗಮಮಹಿಮೆಯು. 77-83

ತೊಂಭತ್ತಮೂರನೆಯ ಅಧ್ಯಾಯ—

ಮೂರನೆಯ ಮಗನಾದ ವಿಜ್ವಲನು ತನ್ನ ವಿಷಯವನ್ನು ಹೇಳುವಾಗ ಆನಂದ ಕಾನನದಲ್ಲಿ ಒಬ್ಬ ಮಹಾಪುರುಷನು ಹೆಂಡತಿಯೊಡನೆ ಬಂದು ಸರೋವರದ ದಡದಲ್ಲಿರುವ ತಮ್ಮತಮ್ಮ ಹೆಣಗಳನ್ನು ತಿಂದು ಹೋಗುವುದು. ಅವರು ಹೆಣಗಳನ್ನು ತಿನ್ನುತ್ತಿರುವಾಗ ಇಬ್ಬರು ಹೆಂಗಸರು ಅದನ್ನು ನೋಡಿ ನಗುವುದು. 84-91

ತೊಂಭತ್ತನಾಲ್ಕನೆಯ ಅಧ್ಯಾಯ—

ಕುಂಜಲನ ಉತ್ತರ. ಕರ್ಮವು ದೊಡ್ಡದೆಂದು ಹೇಳುವಿಕೆ. ಚೋಳದೇಶದ ಬಾಹುರಾಜನ ಚರಿತ್ರೆ. ಸುಬಾಹುವಿಗೆ ಜೈಮಿನಿಯು ಧರ್ಮವನ್ನು ಉಪದೇಶಿಸುವುದು. ದಾನಧರ್ಮಗಳನ್ನು ಹೇಳುವುದು. 92-103

ತೊಂಭತ್ತೈದನೆಯ ಅಧ್ಯಾಯ—

ಜೈಮಿನಿಯು ಸ್ವರ್ಗವನ್ನು ವರ್ಣಿಸುತ್ತಾ ದಾನವು ಶ್ರೇಷ್ಠವೆಂದು ಹೇಳುವುದು. 104-110

ತೊಂಭತ್ತಾರನೆಯ ಅಧ್ಯಾಯ—

ನರಕಕ್ಕೆ ಹೋಗುವವರ ಮತ್ತು ಸ್ವರ್ಗಕ್ಕೆ ಹೋಗುವವರ ವರ್ಣನೆಯು. 111-121

ಪುಟ ಸಂಖ್ಯೆ

**ತೊಂಭತ್ತೇಳನೆಯ ಅಧ್ಯಾಯ—**

ಸುಬಾಹುವು ಹೆಂಡತಿಯೊಡನೆ ತಪಸ್ಸುಮಾಡಿ ವೈಕುಂಠಕ್ಕೆ ಹೋದರೂ ದಾನಮಾಡದಿದ್ದುದರಿಂದ ವಿಷ್ಣುವು ಕಾಣಿಸದಿರುವುದು. ಇಬ್ಬರಿಗೂ ಹಸಿವಾಗುವಿಕೆ, ವಾಮದೇವ ಋಷಿಯಿಂದ ತಮ್ಮ ವಿಷಯವನ್ನು ತಿಳಿದುಕೊಂಡು ತಮ್ಮ ದೇಹವನ್ನೇ ತಿನ್ನುತ್ತಾ ಕಾಲನಿರೀಕ್ಷಣೆ ಮಾಡುತ್ತಿರುವುದು. ದಾನಗಳ ಫಲವರ್ಣನೆ, ಸುಬಾಹುವು ಹೆಂಡತಿಯೊಡನೆ ತಮ್ಮತಮ್ಮ ಹೆಣಗಳನ್ನು ತಿನ್ನುವಿಕೆ, ಪ್ರಜ್ಞಾಶ್ರದ್ಧೆಗಳೆಂಬ ಹೆಂಗಸರು ಅವರನ್ನು ನೋಡಿ ನಗುವುದು. 122-142

**ತೊಂಭತ್ತೆಂಟನೆಯ ಅಧ್ಯಾಯ—**

ಕುಂಜಲನು ಹೇಳಿಕೊಟ್ಟ ವಾಸುದೇವ ಸ್ತೋತ್ರವನ್ನು ವಿಜ್ವಲನು ಸುಬಾಹುವಿಗೂ ಅವನ ಹೆಂಡತಿಗೂ ಹೇಳುವುದು. ಅವರು ಆ ಸ್ತೋತ್ರವನ್ನು ಕೇಳುವುದು. 143-160

**ತೊಂಭತ್ತೊಂಭತ್ತನೆಯ ಅಧ್ಯಾಯ—**

ವಾಸುದೇವ ಸ್ತೋತ್ರದಿಂದ ಆ ಸುಬಾಹುದಂಪತಿಗಳಿಗೆ ಹಸಿವು ಬಾಯಾರಿಕೆಗಳು ಹೋಗಿ, ವಿಷ್ಣುವಿನ ದರ್ಶನ ಸಿಕ್ಕಿ ವೈಕುಂಠ ಪ್ರಾಪ್ತಿಯಾಗುವಿಕೆ. ಆ ಸ್ತೋತ್ರದ ಫಲವರ್ಣನೆಯು. 161-170

**ನೂರನೆಯ ಅಧ್ಯಾಯ—**

ವಿಜ್ವಲನು ಮತ್ತೆ ಬಂದು ವಿಷ್ಣುಸ್ತೋತ್ರದ ಮಹಿಮೆಯನ್ನು ಹೇಳುವುದು. ವೇನನು ವಿಷ್ಣುವನ್ನು ಹೊಗಳುವುದು. 171-173

**ನೂರ ಒಂದನೆಯ ಅಧ್ಯಾಯ—**

ಕುಂಜಲನು ತನ್ನ ಕಥೆಯನ್ನು ಹೇಳುವಾಗ ಕೈಲಾಸಪರ್ವತದಲ್ಲಿ ಗಂಗೆಯ ತೀರದಲ್ಲಿ ಅಳುತ್ತಿರುವ ಹೆಂಗಸಿನ ಕಣ್ಣೀರಿನಿಂದ ಹುಟ್ಟಿದ ಪದ್ಮಗಳನ್ನು ತಂದು ಮುನಿವೇಷವನ್ನು ಧರಿಸಿರುವ ಒಬ್ಬನು ಶಿವನನ್ನು ಪೂಜಿಸುವುದು. 174-184

ಪುಟ ಸಂಖ್ಯೆ

ನೂರ ಎರಡನೆಯ ಅಧ್ಯಾಯ--

ಪಾರ್ವತಿಯ ಇಚ್ಛೆಯನ್ನು ಪೂರ್ತಿಮಾಡಲು ಶಿವನು ಅವಳೊಡನೆ ನಂದನವನದಲ್ಲಿ ಕಲ್ಪವೃಕ್ಷದ ಕೆಳಗೆ ಕೂತಿರುವುದು. ಪಾರ್ವತಿಗೆ ಶಿವನು ಕಲ್ಪವೃಕ್ಷದ ಗುಣವನ್ನು ವರ್ಣಿಸುವುದು. ಆಗ ಪಾರ್ವತಿಯು ಚಿಂತಿಸಿದೊಡನೆಯೇ ಉತ್ತಮವಾದ ಹೆಂಗಸೊಬ್ಬಳು ಬರುವುದು. ಪಾರ್ವತಿಯು ಆಕೆಗೆ ಅಶೋಕಸುಂದರಿ ಎಂದು ಹೆಸರಿಡುವುದು. ಆಕೆಗೆ ನಹುಷನ ಹೆಂಡತಿಯಾಗೆಂದು ವರ ಕೊಡುವುದು. 185-200

ನೂರ ಮೂರನೆಯ ಅಧ್ಯಾಯ—

ಹುಂಡನೆಂಬ ದೈತ್ಯನು ಆ ಅಶೋಕ ಸುಂದರಿಯನ್ನು ನೋಡಿ ಮೋಹಗೊಂಡು, ಪತಿವ್ರತೆಯ ವೇಷವನ್ನು ಹಾಕಿಕೊಂಡು ವಂಚಿಸಿ ತನ್ನ ಮನೆಗೆ ಕರೆದುಕೊಂಡು ಹೋಗುವುದು. ಅಶೋಕ ಸುಂದರಿಯು ಆ ಹುಂಡನ ನಾಶಕ್ಕೋಸ್ಕರ ದತ್ತಾತ್ರೇಯನನ್ನು ಸೇವಿಸುವುದು. ಆ ದತ್ತಾತ್ರೇಯನಿಂದ ವರಪ್ರಾಪ್ತಿಯ ವರ್ಣನೆ, 201-226

ನೂರ ನಾಲ್ಕನೆಯ ಅಧ್ಯಾಯ—

ಆಯುರಾಜನಿಗೆ ಇಂದುಮತಿಯಲ್ಲಿ ಗರ್ಭಪ್ರಾಪ್ತಿ. ಗರ್ಭಿಣಿಯಾದ ಇಂದುಮತಿಗೆ ಒಳ್ಳೆಯ ಸ್ವಪ್ನಕಾಣುವುದು. ಅದರ ಶುಭಫಲವನ್ನು ಶೌನಕನು ತಿಳಿಸುವುದು. 227-231

ನೂರ ಐದನೆಯ ಅಧ್ಯಾಯ–

ಇಂದುಮತಿಯು ಹೆತ್ತೊಡನೆಯೇ ಆ ಮಗುವಾದ ನಹುಷನನ್ನು ಹುಂಡದೈತ್ಯನು ಕದ್ದು ತರುವುದು. ಅಲ್ಲಿ ಅಡಿಗೆಯವನೂ ಸೇವಕಿಯೂ ಮಾತನಾಡಿಕೊಂಡು ಆ ಮಗುವನ್ನು ಕೊಲ್ಲದೆ ರಾತ್ರಿಯಲ್ಲಿಯೇ ವಸಿಷ್ಠಾಶ್ರಮಕ್ಕೆ ಆ ಮಗುವನ್ನು ತಂದು ಪರ್ಣಶಾಲೆಯ ಮುಂದೆ ಇಡುವುದು. ಆ ಮಗುವನ್ನು ಬೆಳಗ್ಗೆ ವಸಿಷ್ಠನು

ಪುಟ ಸಂಖ್ಯೆ

ತೆಗೆದುಕೊಂಡು ನಹುಷನೆಂದು ಹೆಸರಿಡುವುದು. ವಸಿಷ್ಠನು ಅವನಿಗೆ ವಿದ್ಯೆ ಕಲಿಸುವುದು. 232-243

**ನೂರ ಆರನೆಯ ಅಧ್ಯಾಯ—**

ಮಗನನ್ನು ಕದ್ದುಕೊಂಡು ಹೋದುದರಿಂದ ಆಯುದಂಪತಿಗಳು ದುಃಖ ಪಡುವುದು. 244-248

**ನೂರ ಏಳನೆಯ ಅಧ್ಯಾಯ—**

ನಾರದನು ಬಂದು ನಹುಷನ ವೃತ್ತಾಂತವನ್ನು ಹೇಳಿ ಅವರನ್ನು ಸಮಾಧಾನ ಪಡಿಸುವುದು. 249-252

**ನೂರ ಎಂಟನೆಯ ಅಧ್ಯಾಯ—**

ವಸಿಷ್ಠನ ಅಪ್ಪಣೆಯಂತೆ ನಹುಷನು ಹುಂಡನನ್ನು ಕೊಲ್ಲಲು ಪ್ರಯತ್ನಿಸುವುದು. 253-259

**ನೂರ ಒಂಭತ್ತನೆಯ ಅಧ್ಯಾಯ—**

ನಹುಷಮಗುವನ್ನು ತಂದು ಕೊಂದೆನೆಂದು ಅಶೋಕಸುಂದರಿಗೆ ಹುಂಡನು ಹೇಳುವುದು, ಅವಳ ದುಃಖ ವರ್ಣನೆ, ವಿದ್ವದನೆಂಬ ಕಿನ್ನರನು ಸಮಾಧಾನಪಡಿಸುವುದು. 260-272

**ನೂರ ಹತ್ತನೆಯ ಅಧ್ಯಾಯ—**

ನಹುಷನು ವಸಿಷ್ಠಾದಿಗಳ ಆಶೀರ್ವಾದವನ್ನು ಪಡೆದು, ಇಂದ್ರನ ರಥವನ್ನು ಹತ್ತಿ ದೇವತೆಗಳು ಕೊಟ್ಟ ಆಯುಧಗಳನ್ನು ಹಿಡಿದು, ಹುಂಡನ ಮೇಲೆ ನುಗ್ಗುವುದು. 273-277

**ನೂರ ಹನ್ನೊಂದನೆಯ ಅಧ್ಯಾಯ—**

ದಾರಿಯುದ್ದಕ್ಕೂ ಅವನಿಗೆ ಉಪಚಾರಗಳು. 278-281

**ನೂರ ಹನ್ನೆರಡನೆಯ ಅಧ್ಯಾಯ—**

ಗಂಧರ್ವರು ನಹುಷನನ್ನು ಕುರಿತು ಹಾಡಲು, ಅದನ್ನು ಕೇಳಿ ಅಶೋಕಸುಂದರಿಯ ತಪಸ್ಸು ಚಲಿಸುವುದು. 282-283

ಪುಟ ಸಂಖ್ಯೆ

**ನೂರ ಹದಿಮೂರನೆಯ ಅಧ್ಯಾಯ—**

ರಂಭಾ ಎಂಬ ಸಖಿಯೊಡನೆ ಅಶೋಕಸುಂದರಿಯು ನಹುಷನ ಬಳಿಗೆ ಹೋಗುವುದು. ನಹುಷನು ಹುಂಡವಧಾ ಪ್ರತಿಜ್ಞೆಮಾಡಿದು ದನ್ನು ಕೇಳಿ ಆಕೆಯು ಸಂತೋಷಿಸುವುದು. 284-293

**ನೂರ ಹದಿನಾಲ್ಕನೆಯ ಅಧ್ಯಾಯ—**

ನಹುಷನೊಡನೆ ಯುದ್ಧಕ್ಕೆ ಹುಂಡನು ಸೇನೆಯೊಡನೆ ಬರುವುದು. 294-300

**ನೂರ ಹದಿನೈದನೆಯ ಅಧ್ಯಾಯ—**

ನಹುಷನು ಹುಂಡ ಸೈನಿಕರನ್ನೂ ಹುಂಡನನ್ನೂ ಕೊಲ್ಲುವುದು. 301-310

**ನೂರ ಹದಿನಾರನೆಯ ಅಧ್ಯಾಯ—**

ನಹುಷನು ಅಶೋಕಸುಂದರಿಯನ್ನು ಕರೆದುಕೊಂಡು ವಸಿಷ್ಠನ ಆಶ್ರಮಕ್ಕೆ ಬರುವುದು. ವಸಿಷ್ಠನು ಅವರಿಗೆ ಮದುವೆಮಾಡಿ ತಂದೆಯ ಮನೆಗೆ ಕಳುಹಿಸುವುದು. ತಾಯಿತಂದೆಗಳ ಸಂತೋಷ. 311-317

**ನೂರ ಹದಿನೇಳನೆಯ ಅಧ್ಯಾಯ—**

ಇಂದ್ರಾದಿಗಳು ನಾಗಪುರದಲ್ಲಿ ನಹುಷನನ್ನು ಅಭಿಷೇಕಿಸುವುದು. ಅಂಗರಾಜ ಇಂದುಮತಿಯರು ವಿಷ್ಣುಲೋಕಕ್ಕೆ ಹೋಗುವುದು. 318-324

**ನೂರ ಹದಿನೆಂಟನೆಯ ಅಧ್ಯಾಯ—**

ಅಶ್ರುಬಿಂದು ಕಮಲದ ವರ್ಣನೆಯಲ್ಲಿ ಹುಂಡ ಪುತ್ರನಾದ ವಿಹುಂಡನ ಕಥೆಯುವರ್ಣನೆ. ವಿಹುಂಡನು ತಂದೆಯ ವಧೆಯಿಂದ ಕೋಪ ಗೊಂಡು ಎಲ್ಲರನ್ನೂ ತೊಂದರೆ ಪಡಿಸುತ್ತಿರುವುದು. ದೇವತೆ ಗಳು ಮೊರೆಯಿಡಲು ವಿಷ್ಣುವು ಮೋಹಿನೀ ರೂಪವನ್ನು ಹೊಂದಿ ಹುಂಡನನ್ನು ಮೋಹಿಸುವುದು. ಏಳು ಕೋಟಿ ಹೂಗಳನ್ನು ತಂದು ಶಿವಪೂಜೆಯನ್ನು ಮಾಡು, ಅನಂತರ ನಿನ್ನ ಹೆಂಡತಿಯಾ ಗುತ್ತೇನೆ ಎಂದು ವಿಹುಂಡನಿಗೆ ಮಾತುಕೊಡುವುದು. ವಿಹುಂ

ಪುಟ ಸಂಖ್ಯೆ

ಡನು ಶುಕ್ರನಿಂದ ವಾಸನೆಯಾದ ಹೂವು ಹುಟ್ಟಿದುದನ್ನು ತಿಳಿದು, ಅದನ್ನು ತರುವ ಪ್ರಯತ್ನದ ವರ್ಣನೆ. 325-332

ನೂರ ಹತ್ತೊಂಭತ್ತನೆಯ ಅಧ್ಯಾಯ—

ಸಮುದ್ರಮಥನದಲ್ಲಿ ಕಾಮೋದೆಯು ಹುಟ್ಟಿದ ವರ್ಣನೆ. ವಿಷ್ಣುವಿನ ಮಾತಿನಂತೆ ನಾರದನು ಬಂದು ಕಾಮೋದ ಕುಸುಮವು ತಾನಾಗಿಯೇ ನಿನ್ನ ಕೈಗೆ ಬರುವಂತೆ ಮಾಡುತ್ತೇನೆ ಎಂದು ಹೇಳಿ ವಿಹುಂಡನನ್ನು ಸುಮ್ಮನಿರಿಸುವುದು. 333-340

ನೂರ ಇಪ್ಪತ್ತನೆಯ ಅಧ್ಯಾಯ—

ನಾರದನು ಕಾಮೋದಪುರಕ್ಕೆ ಹೋಗಿ ಕಾಮೋದೆಯೊಡನೆ ಮಾತನಾಡುತ್ತಿರುವಾಗ ಸ್ವಪ್ನವಾಗುವ ವರ್ಣನೆ. 341-350

ನೂರ ಇಪ್ಪತ್ತೊಂದನೆಯ ಅಧ್ಯಾಯ—

ವಿಷ್ಣುವಿಗೆ ಭೃಗುವಿನ ಶಾಪದಿಂದ ದಶಾವತಾರದ ಕ್ಲೇಶದ ವರ್ಣನೆ. ನಾರದನು ಕಾಮೋದೆಗೆ ದುಃಖಬರುವಂತೆ ಮಾಡುವುದು. ದುಃಖದ ಕಣ್ಣೀರಿನಿಂದ ವಾಸನೆಯಿಲ್ಲದ ಹೂಗಳು ಹುಟ್ಟುವುದು. ಆ ನಿರ್ಗಂಧ ಹೂಗಳಿಂದ ವಿಹುಂಡನು ಶಿವನನ್ನು ಪೂಜಿಸುವುದು. ಬ್ರಾಹ್ಮಣವೇಷವನ್ನು ಹಾಕಿಕೊಂಡಿರುವ ದೇವಿಯು ಹುಂಕಾರಮಾತ್ರದಿಂದ ವಿಹುಂಡನನ್ನು ಕೊಲ್ಲುವುದು. 351-361

ನೂರ ಇಪ್ಪತ್ತೆರಡನೆಯ ಅಧ್ಯಾಯ—

ಕುಂಜಲಚ್ಯವನರು ಮಾತನಾಡುವಾಗ ಕುಂಜಲನು ತನ್ನ ವಿಷಯವನ್ನು ಹೇಳಿಕೊಳ್ಳುವುದು. ವಿದ್ಯಾಧರನ ಮೂರನೆಯ ಮಗನಾದ, ಮೂರ್ಖನಾದ ಧರ್ಮಶರ್ಮನ ಬಳಿಗೆ ಒಬ್ಬ ಸಿದ್ಧನು ಬರುವುದು. 362-370

ನೂರ ಇಪ್ಪತ್ತಮೂರನೆಯ ಅಧ್ಯಾಯ—

ಆ ಸಿದ್ಧನಿಂದ ಜ್ಞಾನಿಯಾಗುವುದು. ಗಿಳಿಯಾಗಿ ಹುಟ್ಟಲು ಕಾರಣ.

ಪುಟ ಸಂಖ್ಯೆ


ಗುರುತೀರ್ಥದ ವರ್ಣನೆ. ವೇನನಿಗೆ ವಿಷ್ಣು ಇದನ್ನು ಹೇಳಿ ಅಂತರ್ಧಾನನಾಗುವುದು. 371-382

**ನೂರ ಇಪ್ಪತ್ತನಾಲ್ಕನೆಯ ಅಧ್ಯಾಯ—**

ವೇನನು ಪೃಥುವನ್ನು ಹೊಗಳುವುದು. ಪೃಥುವು ಪ್ರಜೆಗಳನ್ನು ಕಾಪಾಡುವುದು. 383-388

**ನೂರ ಇಪ್ಪತ್ತೈದನೆಯ ಅಧ್ಯಾಯ—**

ವೇನನು ಅಶ್ವಮೇಧಾದಿ ಯಜ್ಞಗಳನ್ನು ಮಾಡಿ ವಿಷ್ಣುಲೋಕವನ್ನು ಹೊಂದುವುದು. ಪದ್ಮಪುರಾಣದ ಹೇಳುವಿಕೆ, ಕೇಳುವಿಕೆಗಳನ್ನು ವಿಧಿಪೂರ್ವಕ ಮಾಡುವ ವರ್ಣನೆ. 389-398


ಇಲ್ಲಿಗೆ ಪದ್ಮಪುರಾಣದ ಭೂಮಿಖಂಡದ ವಿಷಯಾನುಕ್ರಮಣಿಕೆಯು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಾಶೀತಿತಮೋಽಧ್ಯಾಯಃ

॥ ವೇನ ಉವಾಚ ॥

ಭಗವನ್ದೇವದೇವೇಶ ಪ್ರಸಾದಾಚ್ಚ ಮಮ ತ್ವಯಾ ।
ಭಾರ್ಯಾತೀರ್ಥಂ ಸಮಾಖ್ಯಾತಂ ಪಿತೃತೀರ್ಥಮನುತ್ತಮಂ ॥ ೧ ॥

ಮಾತೃತೀರ್ಥಂ ಹೃಷೀಕೇಶ ಬಹುಪುಣ್ಯಪ್ರದಾಯಕಂ ।
ಪ್ರಸಾದಸುಮುಖೋ ಭೂತ್ವಾ ಗುರುತೀರ್ಥಂ ವದಸ್ವ ಮೇ ॥ ೨ ॥

॥ ವಿಷ್ಣುರುವಾಚ ॥

ಕಥಯಿಷ್ಯಾಮ್ಯಹಂ ರಾಜನ್ ಗುರುತೀರ್ಥಮನುತ್ತಮಂ ।
ಸರ್ವಪಾಪಹರಂ ಪ್ರೋಕ್ತಂ ಶಿಷ್ಯಾಣಾಂ ಗತಿದಾಯಕಂ ॥ ೩ ॥

---

## ಎಂಭತ್ತೈದನೆಯ ಅಧ್ಯಾಯವು

೧-೨. ವೇನನು ಹೇಳಿದನು:—ಎಲೈ ಸ್ವಾಮಿಯೇ, ನೀನು ನನ್ನ ಮೇಲೆ ಅನುಗ್ರಹಮಾಡಿ ಭಾರ್ಯಾ, ಪಿತೃ, ಮಾತೃ, ತೀರ್ಥಗಳನ್ನು ಹೇಳಿರುವೆ. ಈಗ ದಯ ವಿಟ್ಟು ಗುರುತೀರ್ಥವನ್ನು ಹೇಳು ಎಂದು ಕೇಳಿದನು.

೩. ವಿಷ್ಣುವು ಹೇಳಿದನು:—ಎಲೈ ರಾಜನೇ, ಹಾಗೆಯೇ ಆಗಲಿ. ಈಗ ಸರ್ವಪಾಪಹರವೂ, ಶಿಷ್ಯನಿಗೆ ಗತಿದಾಯಕವೂ ಆದ ಗುರುತೀರ್ಥವನ್ನು ಹೇಳುತ್ತೇನೆ, ಕೇಳು.

ಶಿಷ್ಯಾಣಾಂ ಹಿ ಪರಂ ಪುಣ್ಯಂ ಧರ್ಮರೂಪಂ ಸನಾತನಂ ।
ಏವಂ ತೀರ್ಥಂ ಪರಂ ಜ್ಞಾನಂ ಪ್ರತ್ಯಕ್ಷಫಲದಾಯಕಂ ॥ ೪ ॥

ಯಸ್ಯ ಪ್ರಸಾದಾದ್ರಾಜೇಂದ್ರ ಇಹೈವ ಫಲಮಶ್ನುತೇ ।
ಪರಲೋಕಸುಖಂ ಭುಂಕ್ತೇ ಯಶಃಕೀರ್ತಿಮವಾಪ್ನುಯಾತ್ ॥ ೫ ॥

ಪ್ರಸಾದಾತ್ತಸ್ಯ ರಾಜೇಂದ್ರ ಗುರೋಶ್ಚೈವ ಮಹಾತ್ಮನಃ ।
ಪ್ರತ್ಯಕ್ಷಂ ದೃಶ್ಯತೇ ಶಿಷ್ಯೈಸ್ತ್ರೈಲೋಕ್ಯಂ ಸಚರಾಚರಂ ॥ ೬ ॥

ವ್ಯವಹಾರಂ ಚ ಲೋಕಾನಾಮಾಚಾರಂ ನೃಪನಂದನ ।
ವಿಜ್ಞಾನಂ ವಿಂದತೇ ಶಿಷ್ಯೋ ಮೋಕ್ಷಂ ಚೈವ ಪ್ರಯಾತಿ ಚ ॥ ೭ ॥

ಸರ್ವೇಷಾಮೇವ ಲೋಕಾನಾಂ ಯಥಾ ಸೂರ್ಯಃ ಪ್ರಕಾಶಕಃ ।
ಗುರುಃ ಪ್ರಕಾಶಕಸ್ತದ್ವಚ್ಛಿಷ್ಯಾಣಾಂ ಬುದ್ಧಿದಾನತಃ ॥ ೮ ॥

---

೪. ಆ ಗುರುತೀರ್ಥವೆನ್ನುವುದು ಶಿಷ್ಯರಾದವರಿಗೆ ಬಹು ಪುಣ್ಯಪ್ರದವಾದುದು. ಸನಾತನವಾದ ಆ ತೀರ್ಥವು ಧರ್ಮವನ್ನೂ ಜ್ಞಾನವನ್ನೂ ವೃದ್ಧಿಪಡಿಸಿ ಪ್ರತ್ಯಕ್ಷ ಫಲವನ್ನೇ ಉಂಟುಮಾಡುವುದು.

೫. ಶಿಷ್ಯನು ಗುರುವಿನ ಪ್ರಸಾದದಿಂದ ಇಲ್ಲೇ ಫಲವನ್ನು ಅನುಭವಿಸುತ್ತಾನೆ. ಪರಲೋಕದಲ್ಲಿ ಸುಖವನ್ನೂ, ಈ ಲೋಕದಲ್ಲಿ ಯಶಸ್ಸು ಕೀರ್ತಿಗಳನ್ನೂ ಹೊಂದುತ್ತಾನೆ.

೬. ಗುರುವಿನ ಅನುಗ್ರಹದಿಂದ ಮೂರು ಲೋಕದಲ್ಲಿ ನಡೆಯುವ ವಿದ್ಯಮಾನಗಳೆಲ್ಲವೂ ಪ್ರತ್ಯಕ್ಷವಾಗಿಯೇ ಕಾಣುತ್ತದೆ.

೭. ಲೋಕದ ವ್ಯವಹಾರ, ಆಚಾರ, ವಿಜ್ಞಾನ, ಮೋಕ್ಷಗಳನ್ನು ಶಿಷ್ಯನು ತಿಳಿಯುತ್ತಾನೆ.

೮. ಸೂರ್ಯನು ಲೋಕಕ್ಕೆಲ್ಲಾ ಹೇಗೆ ಪ್ರಕಾಶಕನೋ ಹಾಗೆ ಗುರುವು ಶಿಷ್ಯನಿಗೆ ಬುದ್ಧಿಕೊಡುವ ಜ್ಞಾನಪ್ರಕಾಶಕನು.

**ರಾತ್ರಾವೇವ ಪ್ರಕಾಶೇಚ್ಚ ಸೋಮೋ ರಾಜಾ ನೃಪೋತ್ತಮ ।**
**ತೇಜಸಾ ನಾಶಯೇತ್ಸರ್ವಮಂಧಕಾರಂ ಚರಾಚರಂ ॥ ೯ ॥**

**ಗೃಹಂ ಪ್ರಕಾಶಯೇದ್ದೀಪಃ ಸಮೂಹಂ ನೃಪಸತ್ತಮ ।**
**ಅಜ್ಞಾನತಮಸಾ ವ್ಯಾಪ್ತಂ ಶಿಷ್ಯಮುದ್ಯೋತಯೇದ್ಗುರುಃ ॥ ೧೦ ॥**

**ದಿವಾ ಪ್ರಕಾಶಕಸ್ಸೂರ್ಯಃ ಶಶೀ ರಾತ್ರೌ ಪ್ರಕಾಶತೇ ॥ ೧೧ ॥**

**ಗೃಹಪ್ರಕಾಶಕೋ ದೀಪಸ್ತಮೋನಾಶಕರಸ್ಸದಾ ।**
**ರಾತ್ರೌ ದಿವಾ ಗೃಹಸ್ಯಾಂತೇ ಗುರುಶ್ಶಿಷ್ಯಂ ಸದೈವ ಹಿ ॥ ೧೨ ॥**

**ಅಜ್ಞಾನಾಖ್ಯಂ ತಮಸ್ತಸ್ಯ ಗುರುಸ್ಸರ್ವಂ ಪ್ರಣಾಶಯೇತ್ ।**
**ತಸ್ಮಾದ್ಗುರುಃ ಪರಂ ತೀರ್ಥಂ ಶಿಷ್ಯಾಣಾಮವನೀಪತೇ ॥ ೧೩ ॥**

**ಏವಂ ಜ್ಞಾತ್ವಾ ತತಃ ಶಿಷ್ಯಃ ಸರ್ವಭಾವೈಃ ಪ್ರಸಾದಯೇತ್ ।**
**ಗುರುಂ ಪುಣ್ಯಮಯಂ ಜ್ಞಾತ್ವಾ ತ್ರಿವಿಧೇನಾಪಿಕರ್ಮಣಾ ॥ ೧೪ ॥**

---

೯-೧೨. ಚಂದ್ರನು ರಾತ್ರಿಯಲ್ಲಿ ಮಾತ್ರ ಪ್ರಕಾಶಿಸುತ್ತಾನೆ. ತನ್ನ ತೇಜಸ್ಸಿನಿಂದ ಅಂಧಕಾರವನ್ನು ನಾಶಮಾಡುತ್ತಾನೆ. ದೀಪವು ಮನೆಯನ್ನು ಮಾತ್ರ ಪ್ರಕಾಶಿಸುತ್ತದೆ. ಮತ್ತು ಪದಾರ್ಥಗಳ ಗುಂಪನ್ನು ತೋರಿಸುತ್ತದೆ. ಅಜ್ಞಾನವೆಂಬ ಕತ್ತಲೆಯಿಂದ ಕೂಡಿದ ಶಿಷ್ಯನನ್ನು ಗುರುವು ಪ್ರಕಾಶಿಸುತ್ತಾನೆ. ಹಗಲಿನಲ್ಲಿ ಸೂರ್ಯನು ಪ್ರಕಾಶಕನು. ರಾತ್ರಿಯಲ್ಲಿ ಚಂದ್ರನು ಪ್ರಕಾಶಕನು. ಮನೆಯು ದೀಪದಿಂದ ಪ್ರಕಾಶವಾಗುತ್ತದೆ. ಕತ್ತಲೆಯನ್ನು ನಾಶಮಾಡುತ್ತದೆ. ಗುರುವಾದರೋ ರಾತ್ರಿ, ಹಗಲು, ಮನೆಯಲ್ಲಿ, ಹೊರಗೆ, ಎಲ್ಲಾ ಕಡೆಯಲ್ಲೂ ಶಿಷ್ಯನ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುತ್ತಾನೆ.

೧೩. ಅಜ್ಞಾನವೆಂಬ ಅಂಧಕಾರವನ್ನು ಗುರುವು ನಾಶಮಾಡುವುದರಿಂದ ಗುರುವು ಶಿಷ್ಯರಿಗೆ ಉತ್ತಮವಾದ ತೀರ್ಥವು.

೧೪. ಗುರುವು ಪುಣ್ಯಸ್ವರೂಪವೆಂದು ತಿಳಿದು ಮನೋವಾಕ್ಕಾಯಗಳಿಂದಲೂ ಶಿಷ್ಯನು ಅವನನ್ನು ಶುಶ್ರೂಷಿಸಬೇಕು.

॥ ಸೂತ ಉವಾಚ ॥

ಇತ್ಯರ್ಥೇ ಶ್ರೂಯತೇ ವಿಪ್ರ ಇತಿಹಾಸಃ ಪುರಾತನಃ ।
ಸರ್ವಪಾಪಹರಃ ಪುಂಸಾಂ ಚ್ಯವನಸ್ಯ ಮಹಾತ್ಮನಃ ॥ ೧೫ ॥

ಭಾರ್ಗವಸ್ಯ ಕುಲೇ ಜಾತಶ್ಚ್ಯವನೋ ಮುನಿಸತ್ತಮಃ ।
ತಸ್ಯ ಚಿನ್ತಾ ಸಮುತ್ಪನ್ನಾ ಏಕದಾ ತು ದ್ವಿಜೋತ್ತಮಾಃ ॥ ೧೬ ॥

ಕದಾಹಂ ಜ್ಞಾನಸಂಪನ್ನೋ ಭವಿಷ್ಯಾಮಿ ಮಹೀತಲೇ ।
ದಿವಾ ರಾತ್ರೌ ಚಿಂತಯೇತ್ಸ ಜ್ಞಾನಾರ್ಥೀ ದ್ವಿಜಸತ್ತಮಃ ॥ ೧೭ ॥

ಏವಂ ಸಂಚಿಂತಯಾನಸ್ಯ ಮತಿರಾಸೀನ್ಮಹಾತ್ಮನಃ ।
ತೀರ್ಥಯಾತ್ರಾಂ ಪ್ರಯಾಸ್ಯಾಮಿ ತ್ವಭೀಷ್ಟಫಲದಾಯಿನೀಂ ॥ ೧೮ ॥

ಗೃಹೇ ಪಿತ್ರಾದಿಕಂ ತ್ಯಕ್ತ್ವಾ ಭಾರ್ಯಾಪುತ್ರಂ ಧನಂ ತತಃ ।
ತೀರ್ಥಯಾತ್ರಾಪ್ರಸಂಗೇನ ಅಟತೇ ಮೇದಿನೀಂ ತದಾ ॥ ೧೯ ॥

---

೧೫. ಸೂತನು ಹೇಳಿದನು:—ಈ ವಿಷಯದಲ್ಲಿ ಚ್ಯವನನ ಚರಿತ್ರೆಯು ಪ್ರಸಿದ್ಧವಾಗಿರುವುದು. ಅದು ಪುರಾತನವಾದುದೂ, ಸರ್ವಪಾಪಹರವಾದುದೂ ಎಂದು ತಿಳಿದುಬರುತ್ತದೆ.

೧೬. ಭಾರ್ಗವನ ಕುಲದಲ್ಲಿ ಚ್ಯವನನೆಂಬುವನು ಹುಟ್ಟಿದನು. ಒಂದು ಸಾರಿ ಅವನಿಗೆ ಈ ರೀತಿ ಯೋಚನೆಯು ಹುಟ್ಟಿತು.

೧೭. ನಾನು ಯಾವಾಗ ಭೂಮಿಯಲ್ಲಿ ಜ್ಞಾನಿಯಾದೇನು, ಎಂದು ಹಗಲೂ ರಾತ್ರೆಯೂ ಯೋಚಿಸುತ್ತಿದ್ದನು.

೧೮. ಹೀಗೆ ಯೋಚಿಸುತ್ತಿರಲು ಸಕಲ ಇಷ್ಟಾರ್ಥವನ್ನು ಕೊಡುವ ತೀರ್ಥ ಯಾತ್ರೆಯನ್ನು ಮಾಡಬೇಕೆಂಬ ಇಚ್ಛೆಯು ಅವನಿಗೆ ಹುಟ್ಟಿತು.

೧೯. ಮನೆಯಲ್ಲಿ ತಾಯಿ, ತಂದೆ, ಹೆಂಡತಿ, ಮಕ್ಕಳನ್ನೂ, ಕಡೆಗೆ ಧನವನ್ನೂ ಕೂಡ ಬಿಟ್ಟು ತೀರ್ಥಯಾತ್ರೆಯು ಪ್ರಸಂಗದಿಂದ ಭೂಮಿಯನ್ನು ಸುತ್ತುತ್ತಿದ್ದನು.

ಲೋಮಾನುಲೋಮಯಾತ್ರಾಂ ಸ ಗಂಗಾಯಾಃ ಕೃತವಾನ್ನೃಪ ।
ಸ ತದ್ವನ್ನರ್ಮದಾಯಾಶ್ಚ ಸರಸ್ವತ್ಯಾ ಮುನೀಶ್ವರಃ ॥ ೨೦ ॥

ಗೋದಾವರ್ಯಾದಿಸರ್ವಾಸಾಂ ನದೀನಾಂ ಸಾಗರಸ್ಯ ಚ ।
ಅನ್ಯೇಷಾಂ ಸರ್ವತೀರ್ಥಾನಾಂ ಕ್ಷೇತ್ರಾಣಾಂ ಚ ನೃಪೋತ್ತಮ ।
ದೇವಾನಾಂ ಪುಣ್ಯಲಿಂಗಾನಾಂ ಯಾತ್ರಾವ್ಯಾಜೇನ ಸೋಽಭ್ರಮತ್ ॥ ೨೧ ॥

ಭ್ರಾಮಿತಸ್ತೇನ ಮುನಿನಾ ತೀರ್ಥಾನಾಂ ಸ್ಪರ್ಶನೈಸ್ತತಃ ।
ಕಾಯಶ್ಚ ನಿರ್ಮಲೋ ಜಾತಃ ಸೂರ್ಯತೇಜಸಮಪ್ರಭಃ ॥ ೨೨ ॥

ಚ್ಯವನಃ ಕಾಶತೇ ದೀಪ್ತ್ಯಾ ಪೂತಾತ್ಮಾನೇನ ಕರ್ಮಣಾ ।
ಭ್ರಮಮಾಣಸ್ಸಮಾಯಾತಃ ಕ್ಷೇತ್ರಾಣಾಮುತ್ತಮಂ ತದಾ ॥ ೨೩ ॥

ನರ್ಮದಾದಕ್ಷಿಣೇ ಕೂಲೇ ನಾಮ್ನಾ ಅಮರಕಂಟಕಂ ।
ದದರ್ಶ ಸುಮಹಲ್ಲಿಂಗಂ ಸರ್ವೇಷಾಂ ಗತಿದಾಯಕಂ ॥ ೨೪ ॥

ನತ್ವಾ ಸ್ತುತ್ವಾ ಪೂಜಯಿತ್ವಾ ಸಿದ್ಧನಾಥಂ ಮಹೇಶ್ವರಂ ।
ಜ್ವಾಲೇಶ್ವರಂ ತತೋ ದೃಷ್ಟ್ವಾ ದೃಷ್ಟ್ವಾ ಚಾಪ್ಯಮರೇಶ್ವರಂ ॥ ೨೫ ॥

---

೨೦-೨೧. ಗಂಗಾಯಾತ್ರೆಯನ್ನು ಯಾವ ಯಾವ ಕ್ರಮದಲ್ಲಿ ಮಾಡಬೇಕೆಂದು ಹೇಳಿದೆಯೋ ಹಾಗೆಲ್ಲಾ ಮಾಡಿದನು. ಹಾಗೆಯೇ ನರ್ಮದೆ, ಸರಸ್ವತಿ, ಗೋದಾವರಿ, ಸಮುದ್ರ. ಇನ್ನು ಅನೇಕ ತೀರ್ಥಗಳು, ಕ್ಷೇತ್ರಗಳು, ಪುಣ್ಯಸ್ಥಳಗಳಿಂದು ತಿಳಿದು ಎಲ್ಲಾ ತೀರ್ಥಕ್ಷೇತ್ರಗಳ ಯಾತ್ರೆಯನ್ನೂ ಮಾಡಿದನು.

೨೨. ತೀರ್ಥಗಳಲ್ಲಿ ಸ್ನಾನಮಾಡುತ್ತ ಅನೇಕ ತೀರ್ಥಯಾತ್ರೆಗಳನ್ನು ಮಾಡಿದನು. ದೇಹವು ನಿರ್ಮಲವಾಗಿ ಸೂರ್ಯತೇಜಸ್ಸಿನ ರೀತಿಯಾಯಿತು. ಈರೀತಿ ಕ್ಷೇತ್ರ ತೀರ್ಥಯಾತ್ರೆಗಳಿಂದ ಪವಿತ್ರನಾಗಿ ಚ್ಯವನನು ಪ್ರಕಾಶಿಸಿದನು.

೨೩-೨೪. ಹೀಗೆಯೇ ಸುತ್ತುತ್ತಾ ನರ್ಮದೆಯ ಬಲದಡದಲ್ಲಿರುವ ಅಮರಕಂಟಕವೆಂಬಲ್ಲಿಗೆ ಬಂದನು. ಅಲ್ಲಿ ಸರ್ವರಿಗೂ ಗತಿಯನ್ನು ಕೊಡತಕ್ಕ ಒಂದು ದೊಡ್ಡ ಲಿಂಗವನ್ನು ನೋಡಿದನು.

೨೫-೨೬. ಆ ಸಿದ್ಧನಾಥೇಶ್ವರನನ್ನು ಸ್ತುತಿಸಿ, ನಮಿಸಿ, ಪೂಜಿಸಿ ಜ್ವಾಲೇಶ್ವರ, ಅಮರೇಶ್ವರ, ಬ್ರಹ್ಮೇಶ್ವರ, ಕಪಿಲೇಶ್ವರ, ಮಾರ್ಕಂಡೇಶ್ವರ, ಎಂಬ ಶಿವಲಿಂಗ

ಬ್ರಹ್ಮೇಶಂ ಕಪಿಲೇಶಂ ಚ ಮಾರ್ಕಂಡೇಶ್ವರಮುತ್ತಮಂ ।
ಏವಂ ಯಾತ್ರಾಂ ತತಃ ಕೃತ್ವಾ ಓಂಕಾರಂ ತು ಪುನರ್ಗತಃ ॥ ೨೬ ॥

ವಟಚ್ಛಾಯಾಂ ಸಮಾಶ್ರಿತ್ಯ ಶೀತಳಾಂ ಶ್ರಮನಾಶಿನೀಂ ।
ಸುಖೇನ ಸಂಸ್ಥಿತೋ ವಿಪ್ರಶ್ಚ್ಯವನೋ ಮುನಿಸತ್ತಮಃ ॥ ೨೭ ॥

ತತ್ರ ಸುಪ್ತಸ್ಸ ಶುಶ್ರಾವ ಸುಶಬ್ದಂ ಪಕ್ಷಿಣಾಂ ತದಾ ।
ದಿವ್ಯಭಾಷಾಸಮಾಯುಕ್ತಂ ಜ್ಞಾನವಿಜ್ಞಾನಸಂಯುತಂ ॥ ೨೮ ॥

ಶುಕಶ್ಚ ಏಕಸ್ತತ್ರಾಸ್ತೇ ಬಹುಕಾಲಪ್ರಜೀವಕಃ ।
ಕುಂಜಲೋ ನಾಮ ಜ್ಞಾನಾತ್ಮಾ ಬಹುಪುತ್ರಃ ಸಭಾರ್ಯಕಃ ॥ ೨೯ ॥

ಆಸಂಸ್ತಸ್ಯ ಹಿ ಪುತ್ರಾಶ್ಚ ಚತ್ವಾರಃ ಪಿತೃನಂದನಾಃ ।
ತೇಷಾಂ ನಾಮಾನಿ ರಾಜೇಂದ್ರ ಕಥಯಿಷ್ಯೇ ತವಾಗ್ರತಃ ॥ ೩೦ ॥

ಜ್ಯೇಷ್ಠಸ್ಸ ಉಜ್ಜ್ವಲೋ ನಾಮ ದ್ವಿತೀಯಶ್ಚ ಸಮುಜ್ಜ್ವಲಃ ।
ತೃತೀಯೋ ವಿಜ್ವಲೋ ನಾಮ ಚತುರ್ಥಶ್ಚ ಕಪಿಂಜಲಃ ॥ ೩೧ ॥

---

ಗಳನ್ನು ಸಂದರ್ಶಿಸಿ, ಪೂಜಿಸಿ, ಯಾತ್ರೆಮಾಡಿದನು. ಹೀಗೆ ಯಾತ್ರೆಮಾಡಿ ಕೊನೆಗೆ ಓಂಕಾರೇಶ್ವರನಿದ್ದಲ್ಲಿಗೆ ಬಂದನು.

೨೭. ಆ ಓಂಕಾರೇಶ್ವರನ ದರ್ಶನಮಾಡಿಕೊಂಡು, ಅಲ್ಲಿದ್ದ ಆಲದ ಮರದ ನೆರಳಿನಲ್ಲಿ ಆ ಋಷಿಯು ಸುಖವಾಗಿ ಕುಳಿತುಕೊಂಡನು.

೨೮. ಅಲ್ಲಿ ಶ್ರಮಪರಿಹಾರಾರ್ಥವಾಗಿ ಮಲಗಿರುವಾಗ ಅಲ್ಲಿರುವ ಪಕ್ಷಿಗಳು ಜ್ಞಾನವಿಜ್ಞಾನಗಳಿಂದ ಕೂಡಿದ ಮಾತನ್ನು ಆಡುತ್ತಿರುವುದನ್ನು ಕೇಳಿದನು.

೨೯. ಬಹುಕಾಲ ಬದುಕಿ ಜೀವಿಸುತ್ತಿದ್ದ ಕುಂಜಲನೆಂಬ ಒಂದು ಗಿಳಿಯು ಪೆಂಡತಿಮಕ್ಕಳೊಡನೆ ಅಲ್ಲಿತ್ತು.

೩೦. ಅಲ್ಲಿರುವ ಆ ಗಿಳಿಗೆ, ತಂದೆಗೆ ಸಂತೋಷವನ್ನುಂಟುಮಾಡುವಂತಹ ನಾಲ್ಕು ಮರಿಗಳಿದ್ದವು. ಅವುಗಳ ಹೆಸರನ್ನು ಹೇಳುವೆನು, ಕೇಳು.

೩೧-೩೨. ಉಜ್ವಲ, ಸಮುಜ್ವಲ, ವಿಜ್ವಲ, ಕಪಿಂಜಲರೆಂದು ಕ್ರಮವಾಗಿ

ಏವಂ ಪುತ್ರಾಸ್ತು ಚತ್ವಾರಃ ಕುಂಜಲಸ್ಯ ಮಹಾತ್ಮನಃ ।
ಶುಕಸ್ಯ ತಸ್ಯ ಪುಣ್ಯಸ್ಯ ಪಿತೃಮಾತೃಪರಾಯಣಾಃ　　॥ ೩೨ ॥

ಭ್ರಮಂತಿ ಗಿರಿಕುಂಜೇಷು ದ್ವೀಪೇಷು ಸುಸಮಾಹಿತಾಃ ।
ಭೋಜನಾರ್ಥಂ ಸುಸಂಕ್ಷುಬ್ಧಾಃ ಕ್ಷುಧಯಾ ಪರಿಪೀಡಿತಾಃ　　॥ ೩೩ ॥

ಸೋದರಾಸ್ತೇ ಕ್ಷುಧಾಶಾಮ್ಯೈಃ ಫಲೈರಮೃತಸಂನಿಭೈಃ ।
ಅಮೃತಾಸ್ವಾದತೋಯೈಶ್ಚ ತೃಷ್ಣಾಂ ಶಾಮ್ಯ ನೃಪೋತ್ತಮ　　॥ ೩೪ ॥

ನಿತ್ಯಂ ಚೈವ ರಸಾಢ್ಯಾನಿ ಆಹಾರಾರ್ಥಂ ಸುಪುತ್ರಕಾಃ ।
ನೀತ್ವಾ ಫಲಾನಿ ದಂಪತ್ಯೋರ್ನಿಕ್ಷಿಪಂತಿ ಪ್ರಯತ್ನತಃ　　॥ ೩೫ ॥

ಮಾತುರರ್ಥಂ ಮಹಾಭಾಗಾ ಭಕ್ತ್ಯಾ ಭಾವೇನ ತೋಷಿತಾಃ ।
ಸಂತುಷ್ಟಾ ಆಹಾರಮುತ್ಪಾದ್ಯ ಭಕ್ಷಯಂತಿ ಪಠಂತಿ ಚ　　॥ ೩೬ ॥

---

ನಾಲ್ಕು ಮರಿಗಳಿದ್ದವು. ಆ ನಾಲ್ಕು ಮರಿಗಳು ತಾಯಿತಂದೆಯರಿಗೆ ವಿಧೇಯರಾಗಿದ್ದರು.

೩೩. ಹಸಿವಾದಾಗ ಅವು ಆಹಾರಕ್ಕೋಸ್ಕರ ಬೆಟ್ಟಗಳೂ, ತಪ್ಪಲುಗಳೂ ದ್ವೀಪಗಳೂ ಇಲ್ಲೆಲ್ಲಾ ಸಂಚರಿಸುತ್ತಿದ್ದವು.

೩೪. ಆ ಅಣ್ಣತಮ್ಮಂದಿರಾದ ಹಕ್ಕಿಗಳು ಒಳ್ಳೇ ಫಲಗಳನ್ನು ತಿಂದು, ಅಮೃತದಂತಿರುವ ನೀರನ್ನು ಕುಡಿದು ಹಸಿವನ್ನಡಗಿಸಿಕೊಳ್ಳುತ್ತಿದ್ದವು.

೩೫. ರಸವತ್ತಾದ ಹಣ್ಣುಗಳನ್ನು ಆಹಾರಕ್ಕೋಸ್ಕರ ಆ ಮಕ್ಕಳು ತಂದು, ಆ ದಂಪತಿಗಳಿಗೆ ಎಂದರೆ ತಮ್ಮ ತಂದೆತಾಯಿಗಳಿಗೆ ಕೊಡುತ್ತಿದ್ದವು.

೩೬. ಆ ತಾಯಿತಂದೆಗಳನ್ನು ಭಕ್ತಿಯಿಂದ ಪೋಷಿಸುತ್ತಾ ಸಂತೋಷದಿಂದ ಆಹಾರವನ್ನು ತಿನ್ನುತ್ತಾ ಇದ್ದುವು. ಮತ್ತು ಒಳ್ಳೆಯ ವಿಷಯಗಳನ್ನು ಆ ತಾಯಿತಂದೆಗಳಿಂದ ಕೇಳಿ ತಿಳಿದುಕೊಳ್ಳುತ್ತಿದ್ದವು.

ತತ್ರ ಕ್ರೀಡಾರತಾಸ್ಸರ್ವೇ ವಿಲಸಂತಿ ಸಹೋದರಾಃ ।
ಸಂಧ್ಯಾಕಾಲಂ ಸಮಾಜ್ಞಾಯ ಪಿತುರನ್ತಿಕಮುತ್ತಮಂ ।
ಆಯಾಂತಿ ಭಕ್ಷ್ಯಮಾದಾಯ ಗುರ್ವರ್ಥಂ ತು ಪ್ರಯತ್ನತಃ ॥ ೩೭ ॥

ಪಶ್ಯತಸ್ತಸ್ಯ ವಿಪ್ರಸ್ಯ ಚ್ಯವನಸ್ಯ ಮಹಾತ್ಮನಃ ।
ಆಗತಾಶ್ಚ ದ್ವಿಜಾಸ್ಸರ್ವೇ ಪಿತುರ್ನೀಡಂ ಸುಶೋಭನಂ ॥ ೩೮ ॥

ಪಿತರಂ ಮಾತರಂ ಚೋಭೌ ನನಮುಸ್ತೇ ಮಹಾಮತೇ ।
ತಾಭ್ಯಾಂ ಭಕ್ಷ್ಯಂ ಸಮಾದಾಯ ಉಪತಸ್ಥುಸ್ತಯೋಃ ಪುರಃ ॥ ೩೯ ॥

ಸರ್ವೇ ಸಂಭಾಷಿತಾಃ ಪಿತ್ರಾ ಮಾನಿತಾಸ್ತೇ ಸುತೋತ್ತಮಾಃ ।
ಮಾತ್ರಾ ಚ ಕೃಪಯಾ ರಾಜನ್ ವಚನೈಃ ಪ್ರೀತಿದಾಯಕೈಃ ॥ ೪೦ ॥

ಪಕ್ಷವಾತೇನ ಶೀತೇನ ಮಾತಾಪಿತ್ರೋಶ್ಚ ತೇ ತದಾ ।
ತೇಷಾಂ ಮಾಯಾಧನಂ ತೌ ದ್ವೌ ಚಕ್ರಾತೇ ಪಕ್ಷಿಣೌ ನೃಪ ।
ಆಶೀರ್ಭಿರಭಿನಂದ್ಯೈವ ದ್ವಾಭ್ಯಾಮಪಿ ಸುಪುತ್ರಕಾನ್ ॥ ೪೧ ॥

---

೩೭. ಅನಂತರ ಸಹೋದರರಾದ ಆ ಹಕ್ಕಿಗಳು ಆಟವಾಡುತ್ತಾ ಆನಂದದಿಂದಿರುತ್ತಿದ್ದವು. ಸಂಧ್ಯಾಕಾಲವಾಗುತ್ತಲೂ ತಂದೆಯ ಬಳಿಗೆ ಬರುತ್ತಿದ್ದವು. ಬರುವಾಗ ತಂದೆಗೆ ಪ್ರಯತ್ನಪಟ್ಟು ಉತ್ತಮವಾದ ಆಹಾರವನ್ನು ತರುತ್ತಿದ್ದವು.

೩೮. ಈ ಚ್ಯವನನು ನೋಡುತ್ತಿರುವಂತೆಯೇ ತಂದೆಯು ಇದ್ದ ಆ ಗೂಡಿಗೆ ಆ ಮರಿಗಳು ಬಂದವು.

೩೯. ಅವು ಆ ತಾಯಿತಂದೆಗಳಿಗೆ ನಮಸ್ಕರಿಸಿದವು. ಆ ತಾಯಿತಂದೆಗಳು, ಮಕ್ಕಳು ತಂದುಕೊಟ್ಟ ಆಹಾರವನ್ನು ತೆಗೆದುಕೊಂಡು ತಿಂದವು.

೪೦. ಆ ಮಕ್ಕಳನ್ನು ತಂದೆಯು ಪ್ರೀತಿಯಿಂದ ಮಾತನಾಡಿಸಿತು. ತಾಯಿಯೂ ಕೂಡ ಪ್ರೀತಿಯುಕ್ತವಾದ ಮಾತಿನಿಂದ ಮಾತನಾಡಿಸಿತು. ಈ ಮಕ್ಕಳು ಅವರಿಗೆ ರೆಕ್ಕೆಯಿಂದ ಗಾಳಿ ಬೀಸಿ ಉಪಚರಿಸಿದವು.

೪೧. ಆ ಪಕ್ಷಿಗಳು ತಮಗೆ ಆ ತಾಯಿತಂದೆಗಳನ್ನು ಮಾಯಾಧನವನ್ನಾಗಿ ಮಾಡಿಕೊಂಡಿದ್ದವು. ಆ ತಾಯಿತಂದೆಗಳು ಆ ಮರಿಗಳನ್ನು ಆಶೀರ್ವದಿಸಿದವು.

ತೈಶ್ಚ ದತ್ತಂ ಸುಸಂಪುಷ್ಟಮಾಹಾರಮಮೃತೋಪಮಂ ।
ತಾವೇವ ಹಿ ಸುಸಂಪ್ರೀತಿಂ ಚಕ್ರಾತೇ ದ್ವಿಜಸತ್ತಮಾಃ ॥ ೪೨ ॥

ಪಿಬೇತೇ ನಿರ್ಮಲಂ ತೋಯಂ ತೀರ್ಥಕೋಟಿಸಮುದ್ಭವಂ ।
ಸ್ವಸ್ಥಾನಂತು ಸಮಾಶ್ರಿತ್ಯ ಸುಖಸಂತುಷ್ಟಮಾನಸೌ ॥ ೪೩ ॥

ಸೋಽಶಿತ್ವಾಭಾರ್ಯಯಾ ಸಾರ್ಧಂ ತೈಶ್ಚ ಸಂತುಷ್ಟಮಾನಸಃ ।
ಕಥಾಂ ದಿವ್ಯಾಂ ಸುಪುಣ್ಯಾಂ ಚ ಚಕಾರ ತನಯೈರ್ದ್ವಿಜಃ ॥ ೪೪ ॥

॥ ವಿಷ್ಣುರುವಾಚ ॥

ಪಿತ್ರಾ ತು ಕುಂಜಲೇನಾಪಿ ಉಜ್ಜ್ವಲಸ್ತ್ವಾತ್ಮಜಸ್ತತಃ ।
ಕ್ವ ಗತಶ್ಚೇತಿ ಸಂಪೃಷ್ಟಃ ಕಿಮಪೂರ್ವಂ ತ್ವಯಾ ಪುನಃ ॥ ೪೫ ॥

ತತ್ರ ದೃಷ್ಟಂ ಶ್ರುತಂ ಯಚ್ಚ ತಸ್ಮೇ ಕಥಯ ನಂದನ ।
ಕುಂಜಲಸ್ಯ ಪಿತುರ್ವಾಕ್ಯಂ ಸಮಾಕರ್ಣ್ಯ ಸ ಉಜ್ಜ್ವಲಃ ।
ಪಿತರಂ ಪ್ರತ್ಯುವಾಚಾಥ ಭಕ್ತ್ಯಾ ನಮಿತಕಂಧರಃ ॥ ೪೬ ॥

---

೪೨. ಅವುಗಳು ಅಮೃತದಂತಿರುವ ಆಹಾರವನ್ನು ತಂದುಕೊಡುವವು-ಮತ್ತು ಆ ತಾಯಿತಂದೆಗಳನ್ನು ಪ್ರೀತಿಯಿಂದಲೂ ಕಾಣುವುವು.

೪೩. ಅಲ್ಲಿರುವ ನಿರ್ಮಲವಾದ ತೀರ್ಥವನ್ನು ಕುಡಿಯುವುವು. ಸಂತೋಷ ದಿಂದ ತಮ್ಮ ಜಾಗದಲ್ಲಿರುವುವು.

೪೪. ಹೆಂಡತಿಯೊಡನೆ ಆಹಾರವನ್ನು ತಿಂದು ಮರಿಗಳೊಡನೆ ಸಂತೋಷದಿಂದ ಪುಣ್ಯಕರವಾದ ಕಥೆಗಳನ್ನು ಪರಸ್ಪರವಾಗಿ ಹೇಳುತ್ತಾ ಕಾಲಕಳೆಯುವುವು.

೪೫. ವಿಷ್ಣುವು ಹೇಳಿದನು:—ತಂದೆಯಾದ ಕುಂಜಲನು ಮಗನಾದ ಉಜ್ವಲನನ್ನು ಕರೆದು ಅಪ್ಪಾ! ನೀನೆಲ್ಲಿ ಹೋಗಿದ್ದೆ? ಅಲ್ಲಿ ಏನು ಅಪೂರ್ವ ವಿಷಯ. ವನ್ನು ನೋಡಿದೆ? ಅಥವಾ ಕೇಳಿದೆ? ಎಂದು ಕೇಳಿದನು.

೪೬. ತಂದೆ ಹೇಳಿದುದನ್ನು ಮಗನು ಕೇಳಿ ಭಕ್ತಿಯಿಂದ ತಲೆತಗ್ಗಿಸಿಕೊಂಡು ನಮಸ್ಕರಿಸಿ ಹೀಗೆಂದನು.

॥ ಉಜ್ಜ್ವಲ ಉವಾಚ ॥

**ಕೃತ್ವಾ ಮೂರ್ಧ್ನಾ ಪ್ರಣಾಮಂ ಚ ಕಥಾಂ ಚಕ್ರೇ ಮನೋಹರಾಂ ।**
**ಪ್ಲಕ್ಷದ್ವೀಪಂ ಮಹಾಭಾಗ ನಿತ್ಯಮೇವ ಪ್ರಯಾಮ್ಯಹಂ ।**
**ಮಹತಾ ಉದ್ಯಮೇನಾಪಿ ತ್ವಾಹಾರಾರ್ಥಂ ಮಹಾಮತೇ ॥ ೪೭ ॥**

**ಪ್ಲಕ್ಷದ್ವೀಪೆ ಮಹಾಭಾಗ ಸಂತಿ ದೇಶಾ ಅನೇಕಶಃ ।**
**ಪರ್ವತಾಃ ಸರಿತೋದ್ಯಾನವನಾನಿಚ ಸರಾಂಸಿ ಚ ।**
**ಗ್ರಾಮಾಶ್ಚ ಪತ್ತನಾಶ್ಚೈವ ಪ್ರಜಾಶ್ಚಾತಿಪ್ರಮೋದಿತಾಃ ॥ ೪೮ ॥**

**ಸದಾ ಸುಖೇನ ಸಂತುಷ್ಟಾ ಲೋಕಾಸ್ಸಂತಿ ಸುತೇಜಸಃ ।**
**ದಾನಪುಣ್ಯನಯೋಪೇತಾಃ ಶ್ರದ್ಧಾಭಾವಸಮನ್ವಿತಾಃ ॥ ೪೯ ॥**

**ಪ್ಲಕ್ಷದ್ವೀಪೇ ಮಹಾರಾಜ ಆಸೀತ್ಪುಣ್ಯಮತಿಸ್ತದಾ ।**
**ದಿವೋದಾಸೇತಿ ವಿಖ್ಯಾತಃ ಸತ್ಯಧರ್ಮಪರಾಯಣಃ ॥ ೫೦ ॥**

**ತಸ್ಯಾಪತ್ಯಂ ಸಮುತ್ಪನ್ನಂ ನಾರೀಣಾಮುತ್ತಮಂ ತದಾ ।**
**ಗುಣರೂಪಸಮಾಯುಕ್ತಾ ಸುಶೀಲಾ ಚಾರುಮಂಗಳಾ ॥ ೫೧ ॥**

---

೪೭. ಉಜ್ವಲನು ಹೇಳಿದನು:—ನಿತ್ಯವೂ ಆಹಾರಕ್ಕೋಸ್ಕರ ನಾನು ಪ್ಲಕ್ಷ ದ್ವೀಪಕ್ಕೆ ಹೋಗುತ್ತೇನೆ.

೪೮. ಆ ಪ್ಲಕ್ಷದ್ವೀಪದಲ್ಲಿ ಅನೇಕ ರಾಜ್ಯಗಳಿವೆ. ಮತ್ತು ಪರ್ವತ, ನದಿ, ಉದ್ಯಾನ, ಸರೋವರ, ಗ್ರಾಮ, ಪತ್ತನಗಳೂ ಬೇಕಾದಷ್ಟಿವೆ. ಅಲ್ಲಿನ ಪ್ರಜೆಗಳು ಸಂತೋಷಚಿತ್ತರಾಗಿ ಸುಖವಾಗಿದ್ದಾರೆ.

೪೯. ಅಲ್ಲಿರುವ ಜನರು ಸಂತೋಷವಾಗಿ ತೇಜೋವಂತರಾಗಿದ್ದಾರೆ. ಆ ಪ್ರಜೆಗಳು ದಾನ, ಪುಣ್ಯ, ನಯ, ಶ್ರದ್ಧೆಗಳಿಂದ ಕೂಡಿದ್ದಾರೆ.

೫೦. ಪ್ಲಕ್ಷದ್ವೀಪದಲ್ಲಿ ಪುಣ್ಯವಂತನೂ, ಸತ್ಯವಂತನೂ ಆದ ದಿವೋದಾಸ ನಂಬವನೊಬ್ಬನಿದ್ದಾನೆ.

೫೧. ಅವನಿಗೆ ಗುಣರೂಪಶೀಲಗಳಿಂದ ಕೂಡಿದ ಒಂದು ಕನ್ಯೆ ಹುಟ್ಟಿತು. ಅದಕ್ಕೆ ಹೆಸರನ್ನು ದಿವ್ಯಾ ಎಂಬದಾಗಿಟ್ಟರು. ಅವಳು ಬಹು ಸುಂದರಿಯಾಗಿದ್ದಳು.

ದಿವ್ಯಾದೇವೀತಿ ವಿಖ್ಯಾತಾ ರೂಪೇಣಾಪ್ರತಿಮಾ ಭುವಿ ।
ಪಿತ್ರಾ ವಿಲೋಕಿತಾ ಸಾ ತು ರೂಪಲಾವಣ್ಯಸಂಯುತಾ ।
ಪ್ರಥಮೇ ವಯಸಿ ದಿವ್ಯಾ ವರ್ತತೇ ಚಾರುಮಂಗಳಾ ॥ ೫೨ ॥

ಸ ತಾಂ ದೃಷ್ಟ್ವಾ ದಿವೋದಾಸೋ ದಿವ್ಯಾಂ ದೇವೀಂ ಸುತಾಂ ತದಾ ।
ಕಸ್ಮೈ ಪ್ರದೀಯತೇ ಕನ್ಯಾ ಸುವರಾಯ ಮಹಾತ್ಮನೇ ॥ ೫೩ ॥

ಇತಿ ಚಿಂತಾಪರೋ ಭೂತ್ವಾ ಸಮಾಲೋಕ್ಯ ನೃಪೋತ್ತಮಃ ।
ರೂಪದೇಶಸ್ಯ ರಾಜಾನಂ ಸಮಾಲೋಕ್ಯ ಮಹೀಪತಿಃ ॥ ೫೪ ॥

ಚಿತ್ರಸೇನಂ ಮಹಾತ್ಮಾನಂ ಸಮಾಹೂಯ ನರೋತ್ತಮಃ ।
ಕನ್ಯಾಂ ದದೌ ಮಹಾತ್ಮಾಸೌ ಚಿತ್ರಸೇನಾಯ ಧೀಮತೇ ॥ ೫೫ ॥

ತಸ್ಯಾ ವಿವಾಹಯಜ್ಞಸ್ಯ ಸಂಪ್ರಾಪ್ತೇ ಸಮಯೇ ನೃಪ ।
ಮೃತೋಽಸೌ ಚಿತ್ರಸೇನಸ್ತು ಕಾಲಧರ್ಮೇಣ ವೈ ಕಿಲ ॥ ೫೬ ॥

ದಿವೋದಾಸಸ್ತು ಧರ್ಮಾತ್ಮಾ ಚಿಂತಯಾಮಾಸ ಭೂಪತಿಃ ।
ಬ್ರಾಹ್ಮಣಾನ್ ಸ ಸಮಾಹೂಯ ಪಪ್ರಚ್ಛ ನೃಪನಂದನಃ ॥ ೫೭ ॥

---

೫೨-೫೩. ಮೊದಲನೆಯ ವಯಸ್ಸು ಎಂದರೆ ಯೌವನವು ಬರುತ್ತಲೂ ಆಕೆಯು ಅತಿಸುಂದರಿಯಾಗಿ ಮದುವೆಗೆ ಸಿದ್ಧಳಾದುದನ್ನು ನೋಡಿ, ಈಕೆಯನ್ನು ಯಾವನಿಗೆ ಕೊಡಬೇಕು ? ಅಂತಹ ಯೋಗ್ಯನು ಆವನಿದ್ದಾನೆ? ಎಂದುಚಿಂತಿಸಿದನು.

೫೪-೫೫. ಹೀಗೆ ಅಲ್ಲಲ್ಲಿ ಹುಡಿಕಿ ಕೊನೆಗೆ ರೂಪದೇಶದ ರಾಜನಾದ ಚಿತ್ರಸೇನನನ್ನು ನೋಡಿ ಅವನನ್ನು ಕರೆದು, ಅವನಿಗೆ ಈ ದಿವ್ಯೆಯನ್ನು ಮದುವೆಮಾಡಿ ಕೊಟ್ಟನು.

೫೬-೫೭. ನಿಶ್ಚಿತಾರ್ಥವಾದ ನಂತರ ವಿವಾಹಕರ್ಮವು ಸಾಂಗವಾಗಿ ಆಗುವುದಕ್ಕೆ ಮೊದಲೇ ಆತನು ಮೃತನಾದನು. ಅದರಿಂದ ದಿವೋದಾಸನು ಚಿಂತಾಗ್ರಸ್ತನಾಗಿ ಬ್ರಾಹ್ಮಣರನ್ನು ಕರೆದು, ಇವಳ ವಿವಾಹಕಾಲಕ್ಕೆ ಸರಿಯಾಗಿ ವರನು ಮೃತ

ಅಸ್ಯಾ ವಿವಾಹಕಾಲೇತು ಚಿತ್ರಸೇನೋ ದಿವಂ ಗತಃ ।
ಅಸ್ಯಾಸ್ತು ಕೀದೃಶಂ ಕರ್ಮ ಭವಿಷ್ಯಂ ತದ್ಬ್ರುವಂತು ಮೇ ॥ ೫೮ ॥

॥ ಬ್ರಾಹ್ಮಣಾ ಊಚುಃ ॥

ವಿವಾಹೋ ಜಾಯತೇ ರಾಜನ್ ಕನ್ಯಾಯಾಸ್ತು ವಿಧಾನತಃ ।
ಪತಿರ್ಮೃತ್ಯುಂ ಪ್ರಯಾತ್ಯಸ್ಯಾ ನೋ ಚೇತ್ಸಂಗಂ ಕರೋತಿ ಚ ॥ ೫೯ ॥

ಮಹಾವ್ಯಾಧ್ಯಭಿಭೂತಶ್ಚ ತ್ಯಾಗಂ ಕೃತ್ವಾ ಪ್ರಯಾತಿ ವಾ ।
ಪ್ರವ್ರಾಜಿತೋ ಭವೇದ್ರಾಜನ್ ಧರ್ಮಶಾಸ್ತ್ರೇಷು ದೃಶ್ಯತೇ ॥ ೬೦ ॥

ಉದ್ವಾಹಿತಾಯಾಂ ಕನ್ಯಾಯಾಮುದ್ವಾಹಃ ಕ್ರಿಯತೇ ಬುಧೈಃ ।
ನ ಸ್ಯಾದ್ರಜಲಸ್ವಲಾ ಯಾವದನ್ಯೇಷ್ವಪಿ ವಿಧೀಯತೆ ॥ ೬೧ ॥

ಉದ್ವಾಹಂ ತು ವಿಧಾನೇನ ಪಿತಾ ಕುರ್ಯಾನ್ನಸಂಶಯಃ ।
ಏವಂ ರಾಜಾ ಸಮಾದಿಷ್ಟೋ ಧರ್ಮಶಾಸ್ತ್ರಾರ್ಥಕೋವಿದೈಃ ।
ವಿವಾಹಾರ್ಥಂ ಸಮಾಯಾತ ಇಂದ್ರಪ್ರಸ್ಥಂ ದ್ವಿಜೋತ್ತಮೈಃ ॥ ೬೨ ॥

---

ನಾದನು. ಮುಂದೆ ಈಕೆಗೆ ಯಾವ ರೀತಿಯಾದ ಕರ್ಮ ನಡೆಯಬೇಕು? ಎಂದು ಕೇಳಿದನು.

೫೯-೬೨. ಬ್ರಾಹ್ಮಣರು ಹೇಳಿದರು:—ಎಲೈ ರಾಜನೇ, ವಿವಾಹವು ವಿಧಿವತ್ತಾಗಿ ನಡೆದು ಗಂಡನು ಹೆಂಡತಿಯೊಡನೆ ಸಂಭೋಗಮಾಡದಿದ್ದು, ಆತನು ಸಾವು, ಪ್ರವಾಸ, ಮಹಾರೋಗ, ಬಿಟ್ಟು ಹೊರಟುಹೋಗುವುದು, ಸನ್ಯಾಸಿಯಾಗುವುದು, ಇವುಗಳಲ್ಲಾವುದಾದರೂ ಸಂಭವಿಸಿದರೆ ಧರ್ಮಶಾಸ್ತ್ರರೀತ್ಯಾ ಅವಳಿಗೆ ಪುನಃ ಮದುವೆ ಮಾಡುತ್ತಾರೆ. ಕೆಲವರು ರಜಸ್ವಲೆಯಾಗದಿದ್ದ ಹುಡುಗಿಗೆ ಮೇಲಿನ ಸಂದರ್ಭದಲ್ಲಿ ಮದುವೆ ಮಾಡುತ್ತಾರೆ. ಮತ್ತೆ ಕೆಲವರು ಸಂಭೋಗವಾಗದಿದ್ದರೆ ಮದುವೆ ಮಾಡುತ್ತಾರೆ. ತಂದೆಯು ಇಂತಹ ಸಂದರ್ಭದಲ್ಲಿ ಮದುವೆಯನ್ನು ಮತ್ತೆ ಮಾಡಬಹುದು. ಇದರಲ್ಲೇನೂ ಸಂಶಯವಿಲ್ಲ ಎಂದು ಧರ್ಮಶಾಸ್ತ್ರವನ್ನು ತಿಳಿದ ಬ್ರಾಹ್ಮಣರು ಹೇಳುತ್ತಲೂ ವಿವಾಹಕ್ಕೋಸ್ಕರ ಬ್ರಾಹ್ಮಣರೊಡನೆ ಇಂದ್ರಪ್ರಸ್ಥಕ್ಕೆ ಬಂದನು.

**ದಿವೋದಾಸಸ್ಸುಧರ್ಮಾತ್ಮಾ ದ್ವಿಜಾನಾಂ ಚ ನಿದೇಶತಃ ।**
**ವಿವಾಹಾರ್ಥಂ ಮಹಾರಾಜ ಉದ್ಯಮಂ ಕೃತವಾಂಸ್ತದಾ ॥ ೬೩ ॥**

**ಪುನರ್ದತ್ತಾ ತದಾ ತೇನ ದಿವ್ಯಾದೇವೀ ದ್ವಿಜೋತ್ತಮಾಃ ।**
**ರೂಪಸೇನಾಯ ಪುಣ್ಯಾಯ ತಸ್ಮೈ ರಾಜ್ಞೇ ಮಹಾತ್ಮನೇ ।**
**ಮೃತ್ಯುಧರ್ಮಂ ಗತೋ ರಾಜಾ ವಿವಾಹಸ್ಯ ಸಮೀಪತಃ ॥ ೬೪ ॥**

**ಯದಾ ಯದಾ ಮಹಾಭಾಗೋ ದಿವ್ಯಾದೇವ್ಯಾಶ್ಚ ಭೂಮಿಪಃ ।**
**ಚಕ್ರೇ ವಿವಾಹಂ ತದ್ಭರ್ತಾ ಮ್ರಿಯತೇ ಲಗ್ನಕಾಲತಃ ॥ ೬೫ ॥**

**ಏಕವಿಂಶತಿಭರ್ತಾರಃ ಕಾಲೇ ಕಾಲೇ ಮೃತಾಸ್ತದಾ ।**
**ತತೋ ರಾಜಾ ಮಹಾದುಃಖೀ ಸಂಜಾತಃ ಖ್ಯಾತವಿಕ್ರಮಃ ॥ ೬೬ ॥**

**ಸಮಾಲೋಚ್ಯ ಸಮಾಹೂಯ ಮಂತ್ರಿಭಿಸ್ಸಹ ನಿಶ್ಚಿತಃ ।**
**ಸ್ವಯಂವರೇ ತದಾ ಬುದ್ಧಿಂ ಚಕಾರ ಪೃಥಿವೀಪತಿಃ ॥ ೬೭ ॥**

**ಪ್ಲಕ್ಷದ್ವೀಪಸ್ಯ ರಾಜಾನಃ ಸಮಾಹೂತಾ ಮಹಾತ್ಮನಾ ।**
**ಸ್ವಯಂವರಾರ್ಥಮಾಹೂತಾಸ್ತಥಾ ತೇ ಧರ್ಮತತ್ಪರಾಃ ॥ ೬೮ ॥**

---

೬೩-೬೪. ರಾಜನಾದ ದಿವೋದಾಸನು. ಬ್ರಾಹ್ಮಣರ ಮಾತಿನಮೇರೆಗೆ ಆ ಕನ್ಯೆಗೆ ಮದುವೆಗೆ ಪ್ರಯತ್ನಮಾಡಿ ರೂಪಸೇನನೆಂಬುವನಿಗೆ ಪುನಃ ಮದುವೆ ಮಾಡಿದನು. ಮದುವೆ ಮುಗಿಯುವುದರೊಳಗೆ ಆ ರೂಪಸೇನನೆಂಬುವನೂ ಸತ್ತನು.

೬೫. ಆ ರಾಜನು ಮಗಳಿಗೆ ಮದುವೆ ಮಾಡಿದಾಗಲೆಲ್ಲಾ ಅವಳನ್ನು ಮದುವೆಯಾದವರು ಹೀಗೆಯೇ ಒಬ್ಬೊಬ್ಬರಾಗಿ ಸಾಯುತ್ತಿದ್ದರು.

೬೬. ಇದೇ ರೀತಿ ಒಬ್ಬರಾಗುತ್ತಲೊಬ್ಬರಂತೆ ಇಪ್ಪತ್ತೊಂದು ಜನರನ್ನು ಮದುವೆಮಾಡಿದನು. ಅವರೆಲ್ಲರೂ ಹೀಗೆಯೇ ಸತ್ತರು. ಅನಂತರ ಆ ಪ್ರಸಿದ್ಧನಾದ ರಾಜನು ದುಃಖಗೊಂಡನು.

೬೭-೬೮. ಮಂತ್ರಿಗಳೊಡನೆ ಯೋಚಿಸಿ ಆ ರಾಜನು ಸ್ವಯಂವರ ಮಾಡಬೇಕೆಂದು ನಿರ್ಧರಿಸಿ, ಪ್ಲಕ್ಷದ್ವೀಪದ ರಾಜರೆಲ್ಲರನ್ನೂ ಸ್ವಯಂವರಕ್ಕೆ ಕರೆಸಿದನು.

**ತಸ್ಯಾಸ್ತು ರೂಪಂ ಸಂಶ್ರುತ್ಯ ರಾಜಾನೋ ವ್ಯತ್ಯುನೋದಿತಾಃ ।**
**ಸಂಗ್ರಾಮಂ ಚಕ್ರಿರೇ ಮೂಢಾಸ್ತೇ ಮೃತಾಸ್ಸಮರಾಂಗಣೇ ।**
**ಏವಂ ತಾತ ಕ್ಷಯೋ ಜಾತಃ ಕ್ಷತ್ರಿಯಾಣಾಂ ಮಹಾತ್ಮನಾಂ ॥ ೬೯ ॥**

**ದಿವ್ಯಾದೇವೀ ಸುದುಃಖಾರ್ತಾ ಗತಾ ಸ್ವಾಚಲಕಂದರಂ ।**
**ರುರೋದ ಕರುಣಂ ಬಾಲಾ ದಿವ್ಯಾದೇವೀ ಮನಸ್ವಿನೀ ॥ ೭೦ ॥**

**ಏವಂ ತಾತ ಮಯಾ ದೃಷ್ಟಮಪೂರ್ವಂ ತತ್ರ ವೈ ತದಾ ।**
**ತನ್ಮೇ ಸುವಿಸ್ತರಂ ತಾವದಸ್ಯಾಃ ಕಥಯ ಕಾರಣಂ ॥ ೭೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ**
**ಗುರುತೀರ್ಥೇ ಚ್ಯವನೋಪಾಖ್ಯಾನೇ**
**ಪಂಚಾಶೀತಿತಮೋಽಧ್ಯಾಯಃ**



---

೬೯. ಆಕೆಯ ರೂಪಲಾವಣ್ಯಗಳನ್ನು ಕೇಳಿ ರಾಜರೆಲ್ಲರೂ ಅಲ್ಲಿಗೆ ಬಂದು ಸೇರಿದರು. ನಾನು ತಾನೆಂದು ಆಕೆಯ ಮದುವೆಯ ವಿಷಯದ ಮಾತುಗಳು ನಡೆದು ಒಬ್ಬರಿಗೊಬ್ಬರಿಗೆ ಜಗಳವಾಗಿ ಯುದ್ಧವೇ ನಡೆದುಬಿಟ್ಟಿತು. ಆಗ ಅಲ್ಲಿನ ಕ್ಷತ್ರಿಯರೆಲ್ಲರೂ ಮೃತರಾದರು.

೭೦. ಇದನ್ನೆಲ್ಲಾ ನೋಡಿ ಆಗ ದಿವ್ಯಾದೇವಿಯು ಬೆಟ್ಟದ ತಪ್ಪಲಿಗೆ ಹೋಗಿ ಅಲ್ಲಿ ದುಃಖವನ್ನು ತಡೆಯಲಾರದೆ ಅತ್ತಳು.

೭೧. ಈ ರೀತಿಯಾಗಿ ನಾನು ಅಲ್ಲಿನ ವಿಷಯವನ್ನು ಕಂಡೆನು. ಎಲೈ ತಂದೆಯೇ, ನೀನು ಅದರ ಕಾರಣವನ್ನು ವಿಸ್ತಾರವಾಗಿ ಹೇಳು. ಎಂದಿತು

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ಎಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಡಶೀತಿತಮೋಽಧ್ಯಾಯಃ

---

॥ ಕುಂಜಲ ಉವಾಚ ॥

ತಸ್ಯಾಸ್ತು ಚೇಷ್ಟಿತಂ ವತ್ಸ ದಿವ್ಯಾದೇವ್ಯಾ ವದಾಮ್ಯಹಂ ।
ಪೂರ್ವಜನ್ಮಕೃತಂ ಸರ್ವಂ ತ್ವಂ ಮೇ ನಿಗದತಃ ಶೃಣು ॥ ೧ ॥

ಅಸ್ತಿ ವಾರಾಣಸೀ ಪುಣ್ಯಾ ನಗರೀ ಪಾಪನಾಶಿನೀ ।
ತಸ್ಯಾಮಾಸ್ತೇ ಮಹಾಪ್ರಾಜ್ಞಃ ಸುವೀರೋ ನಾಮ ನಾಮತಃ ।
ವೈಶ್ಯಜಾತ್ಯಾಂ ಸಮುತ್ಪನ್ನೋ ಧನಧಾನ್ಯಸಮಾಕುಲಃ ॥ ೨ ॥

ತಸ್ಯ ಭಾರ್ಯಾ ಮಹಾಪ್ರಾಜ್ಞಾ ಚಿತ್ರಾ ನಾಮ ಶುಚಿಸ್ಮಿತಾ ।
ಕುಲಾಚಾರಂ ಪರಿತ್ಯಜ್ಯ ಹ್ಯನಾಚಾರೇಣ ವರ್ತತೇ ॥ ೩ ॥

---

## ಎಂಭತ್ತಾರನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಎಲೈ ಪುತ್ರನೇ, ಆ ದಿವ್ಯಾದೇವಿಯು ಪೂರ್ವಜನ್ಮದಲ್ಲಿ ಏನೇನು ಮಾಡಿದಳೆಂಬ ವಿಷಯವೆಲ್ಲವನ್ನೂ ಹೇಳುತ್ತೇನೆ, ಕೇಳು.

೨. ವಾರಾಣಸಿ ಎಂಬ ಪುಣ್ಯತಮವಾದ ಒಂದು ಪಟ್ಟಣವಿದೆ. ಅದರಲ್ಲಿ ಸುವೀರನೆಂಬ ಜ್ಞಾನಿಯು ವೈಶ್ಯಜಾತಿಯಲ್ಲಿ ಹುಟ್ಟಿ ಧನಧಾನ್ಯಗಳಿಂದ ಕೂಡಿದ್ದಾನೆ.

೩. ಅವನಿಗೆ ಒಬ್ಬಳು ಹೆಂಡತಿಯುಂಟು. ಆಕೆಯ ಹೆಸರು ಚಿತ್ರೆ ಎಂಬುದಾಗಿ. ಆಕೆಯು ವಂಶದ ಆಚಾರವನ್ನು ಬಿಟ್ಟು ಅನಾಚಾರಪರಳಾಗಿದ್ದಳು.

ನ ಮನ್ಯತೇ ಹಿ ಭರ್ತಾರಂ ಸ್ವೈರವೃತ್ತ್ಯಾ ಪ್ರವರ್ತತೇ ।
ಧರ್ಮಪುಣ್ಯವಿಹೀನಾ ತು ಪಾಪಮೇವ ಸಮಾಚರೇತ್ ॥ ೪ ॥

ಭರ್ತಾರಂ ಕುತ್ಸತೇ ನಿತ್ಯಂ ನಿತ್ಯಂ ಚ ಕಲಹಪ್ರಿಯಾ ।
ನಿತ್ಯಂ ಪರಗೃಹೇ ವಾಸೋ ಭ್ರಮತೇ ಸಾ ಗೃಹೇ ಗೃಹೇ ॥ ೫ ॥

ಪರಚ್ಛಿದ್ರಂ ಸದಾ ಪಶ್ಯೇತ್ಸದಾ ದುಷ್ಟಾ ಚ ಪ್ರಾಣಿಷು ।
ಸಾಧುನಿಂದಾರತಾ ದುಷ್ಟಾ ಬಹುಹಾಸ್ಯಕರೀ ಸದಾ ॥ ೬ ॥

ಅನಾಚಾರಾಂ ಮಹಾಪಾಪಾಂ ಜ್ಞಾತ್ವಾ ವೀರೋಽಪಿ ನಂದನಃ ।
ಸ ತಾಂ ತ್ಯಕ್ತ್ವಾ ಮಹಾಪ್ರಾಜ್ಞ ಉಪಯೇಮೇ ಮಹಾಮತಿಃ ॥ ೭ ॥

ಅನ್ಯವೈಶ್ಯಸ್ಯ ವೈ ಕನ್ಯಾಂ ತಯಾ ಸಹ ಪ್ರವರ್ತತೇ ।
ಧರ್ಮಾಚಾರೇಣ ಪುಣ್ಯಾತ್ಮಾ ಸತ್ಯಧರ್ಮಮತಿಸ್ಸದಾ ॥ ೮ ॥

---

೪. ಗಂಡನನ್ನು ಲೆಕ್ಕಿಸದೆ ಇಷ್ಟಬಂದಂತೆ ನಡೆಯುತ್ತಿದ್ದಳು. ಧರ್ಮಪುಣ್ಯಗಳೆಂಬುದನ್ನು ಮಾಡದೆ ಪಾಪಕರವಾದ ಕೆಲಸಗಳನ್ನೇ ಮಾಡುತ್ತಿದ್ದಳು.

೫. ದಿನವೂ ಗಂಡನನ್ನು ತಿರಸ್ಕರಿಸಿ ಬಯ್ಯುತ್ತಿದ್ದಳು. ನಿತ್ಯವೂ ಜಗಳವಾಡುತ್ತಿದ್ದಳು. ವಾಸವು ಯಾವಾಗಲೂ ಇತರರ ಮನೆಯಲ್ಲಿಯೇ. ಮನೆಮನೆಗೂ ಸುತ್ತುತ್ತಿರುವುದೇ ಕೆಲಸ.

೬. ಇತರರ ಹುಳುಕನ್ನೇ ಹುಡುಕುತ್ತಿದ್ದಳು. ಪ್ರಾಣಿಗಳಲ್ಲಿ ದಯೆ ಎಂಬುದೇ ಇಲ್ಲ. ಸಾಧುಗಳನ್ನು ನಿಂದಿಸುವಳು. ಹಾಸ್ಯವನ್ನೇ ಮಾಡುತ್ತಿದ್ದಳು.

೭. ಆಕೆಯ ಅನಾಚಾರವನ್ನು ತಿಳಿದು ಆಕೆಯ ಗಂಡನು ಸಹಿಸಲಾರದೆ ಆಕೆಯನ್ನು ಬಿಟ್ಟು ಬೇರೆ ಮದುವೆಯನ್ನು ಮಾಡಿಕೊಂಡನು.

೮. ಬೇರೆ ವೈಶ್ಯಹುಡುಗಿಯನ್ನು ಮದುವೆಯಾಗಿ ಅವಳೊಡನೆ ಧರ್ಮ, ಆಚಾರ, ಪುಣ್ಯ, ಸತ್ಯ ಇವುಗಳನ್ನು ಆಚರಿಸುತ್ತ ಸುಖವಾಗಿದ್ದನು.

**ನಿರಸ್ತಾ ತೇನ ಸಾ ಚಿತ್ರಾ ಏವಂ ಸಾ ಭ್ರಮತೇ ಮಹೀಂ ।**
**ದುಷ್ಟಾನಾಂ ಸಂಗತಿಂ ಪ್ರಾಪ್ತಾ ನರಾಣಾಂ ಪಾಪಿನಾಂ ಸದಾ　　　　॥ ೯ ॥**

**ದೂತೀಕರ್ಮ ಚಕಾರಾಥ ಸಾ ತೇಷಾಂ ಪಾಪನಿಶ್ಚಯಾ ।**
**ಗೃಹಭಂಗಂ ಚಕಾರಾಥ ಸಾಧೂನಾಂ ಪಾಪಚಾರಿಣೀ　　　　॥ ೧೦ ॥**

**ಸಾಧ್ವೀಂ ನಾರೀಂ ಸಮಾಹೂಯ ಪಾಪವಾಕ್ಯೈಃ ಪ್ರಲೋಭಯೇತ್ ।**
**ಮನೋಭಂಗಂ ಚಕಾರಾಥ ವಾಕ್ಯೈಃ ಪ್ರತ್ಯಯದಾಯಕೈಃ　　　　॥ ೧೧ ॥**

**ಸಾಧೂನಾಂ ಸಾ ಸ್ತ್ರಿಯಂ ಭಂಕ್ತ್ವಾಪ್ಯನ್ಯಸ್ಮೈ ಪರಿದಾಪಯೇತ್ ।**
**ಏವಂ ಗೃಹಶತಂ ಭಗ್ನಂ ಚಿತ್ರಯಾ ಪಾಪಚಿಂತಯಾ　　　　॥ ೧೨ ॥**

**ಸಂಗ್ರಾಮಂ ಸಾ ಮಹಾದುಷ್ಟಾಕಾರಯತ್ಪತಿಪುತ್ರಕೈಃ ।**
**ಮನಾಂಸಿ ಚಾಲಯೇತ್ಪಾಪಾ ಪುರುಷಾಣಾಂ ಸ್ತ್ರಿಯಃ ಪ್ರತಿ　　　　॥ ೧೩ ॥**

---

೯. ಆತನಿಂದ ಓಡಿಸಲ್ಪಟ್ಟ ಚಿತ್ರೆಯು ದುಷ್ಟರೂ ಮಹಾಪಾಪಿಗಳೂ ಆದ ಇವರನ್ನು ಜೊತೆಯನ್ನು ಸೇರಿಸಿಕೊಂಡು ಭೂಮಿಯನ್ನೆಲ್ಲಾ ಸುತ್ತಲು ಮೊದಲಿಟ್ಟಳು.

೧೦. ಅವಳು ಪಾಪಿಗಳಿಗೆ ದೂತೀಕರ್ಮದಿಂದ ಮತ್ತೊಬ್ಬರನ್ನು ಸೇವಿಸುವುದೇ ಮೊದಲಾದ ಕೃತ್ಯವನ್ನು ಮಾಡುತ್ತಿದ್ದಳು. ಆಕೆಯು ಪಾಪಮಾಡುತ್ತಾ ಸಾಧುಗಳ ಮನೆಯನ್ನು ಒಡೆಯುತ್ತಿದ್ದಳು.

೧೧. ಪತಿವ್ರತೆಯರನ್ನು ಕರೆದು ಕೆಟ್ಟಮಾತುಗಳಿಂದ ಆಸೆತೋರಿಸುತ್ತಿದ್ದಳು. ನಂಬುಗೆಯ ಮಾತುಗಳನ್ನಾಡಿ ಅದರಂತೆ ನಡೆಯದೆ ಆಶಭಂಗಮಾಡುತ್ತಿದ್ದಳು.

೧೨. ಸತ್ಪುರುಷರ ಹೆಂಗಸರಿಗೆ ಆಶೆ ತೋರಿಸಿ ಅವರಿಂದ ಬೇರ್ಪಡಿಸಿ ಬೇರೆಯವನಿಗೆ ಕೊಡುತ್ತಿದ್ದಳು. ಹೀಗೆ ಆ ಪಾಪಿಯು ನೂರಾರು ಮನೆಗಳನ್ನು ಒಡೆದಳು.

೧೩. ಗಂಡಹೆಂಡರು ಮಕ್ಕಳುಗಳಿಗೆ ಅನ್ಯೋನ್ಯವಾಗಿ ಜಗಳ ಬರುವಂತೆ ಮಾಡುತ್ತಿದ್ದಳು. ಗಂಡಸರಿಗೆ ಹೆಂಗಸರನ್ನು ಕುರಿತು ಮನಸ್ಸು ಚಲಿಸುವಂತೆ ಮಾಡುತ್ತಿದ್ದಳು.

ಅಕಾರಯಚ್ಚ ಸಂಗ್ರಾಮಂ ಯಮಗ್ರಾಮವಿವರ್ಧನಂ ।
ಏವಂ ಗೃಹಶತಂ ಭಂಕ್ತ್ವಾ ಪಶ್ಚಾತ್ಸಾ ನಿಧನಂ ಗತಾ ॥ ೧೪ ॥

ತ್ರಾಸಿತಾ ಯಮರಾಜೇನ ಬಹುದಂಡೈಃ ಸುನಂದನ ।
ಭುಂಜಾಪಿತಾ ಯಾತನಾಶ್ಚ ರೌರವಾದಿಷು ವೈ ತದಾ ॥ ೧೫ ॥

ಪಾಚಿತಾ ರೌರವೇ ಚಿತ್ರಾ ಚಿತ್ರಾಃ ಪೀಡಾಃ ಪ್ರದರ್ಶಿತಾಃ ।
ಯಾದೃಶಂ ಕ್ರಿಯತೇ ಕರ್ಮ ತಾದೃಶಂ ಪರಿಭುಂಜತೇ ॥ ೧೬ ॥

ತಯಾ ಗೃಹಶತಂ ಭಗ್ನಂ ಚಿತ್ರಯಾ ಪಾಪಚಿತ್ತಯಾ ।
ತಸ್ಯ ಕರ್ಮವಿಪಾಕೋಽಯಂ ತಯಾ ಭುಕ್ತೋ ದ್ವಿಜೋತ್ತಮ ॥ ೧೭ ॥

ಯಸ್ಮಾದ್ಗೃಹಶತಂ ಭಗ್ನಂ ತಸ್ಮಾದ್ದುಃಖಂ ಭುನಕ್ತಿ ವೈ ।
ವಿವಾಹಸಮಯೇ ಪ್ರಾಪ್ತೇ ದೈವಂ ಚ ಪಾಕತಾಂ ಗತಂ ॥ ೧೮ ॥

---

೧೪. ಯಮನ ಮನೆ ತುಂಬುವಂತೆ, ಕಾಮಕ್ರೋಧಾದಿಗಳು ಹೆಚ್ಚುವಂತೆ ಮಾಡಿ ಜಗಳವಾಡಿಸುತ್ತಿದ್ದಳು. ಹೀಗೆ ನೂರಾರು ಮನೆಗಳನ್ನು ಒಡೆದು ಕೊನೆಗೆ ಮೃತಳಾದಳು.

೧೫. ಯಮನು ಬಹು ದಂಡಗಳಿಂದ ಶಿಕ್ಷಿಸಿದನು. ರೌರವಾದಿ ನರಕಗಳನ್ನು ಅನುಭವಿಸುವಂತೆ ಮಾಡಿದನು.

೧೬. ರೌರವ ನರಕದಲ್ಲಿ ಹಾಕಿ ಬೇಯಿಸಿದರು. ಅನೇಕವಾದ ಪೀಡೆಗಳನ್ನು ತೋರಿಸಿ ಹೆದರಿಸಿದರು. ಪ್ರಾಣಿಯು ಯಾವ ಬಗೆಯ ಕೆಲಸ ಮಾಡುತ್ತಾನೋ ಅಂಥಾ ಶಿಕ್ಷೆಯನ್ನು ಅನುಭವಿಸಲೇಬೇಕು.

೧೭. ಆ ಚಿತ್ರೆಯು ನೂರಾರು ಮನೆಗಳನ್ನು ನಾಶಮಾಡಿದಳು. ಅದರ ಪಾಪದ ಫಲವನ್ನು ಅನುಭವಿಸಿದಳು.

೧೮. ಸಾವಿರಾರು ಮನೆಗಳನ್ನು ನಾಶಮಾಡಿದುದರಿಂದ ಈಗ ದುಃಖವನ್ನು ಅನುಭವಿಸುತ್ತಾಳೆ. ವಿವಾಹಸಮಯವು ಬಂದರೆ ಅದೃಷ್ಟವು ಆ ಫಲವನ್ನು ಕೊಡುತ್ತದೆ. ಆದ್ದರಿಂದಲೇ ಗಂಡಂದಿರು ಮದುವೆಯ ಸಮಯದಲ್ಲಿ ಸಾಯುವರು.

**ಭರ್ತಾ ವಿವಾಹಸಮಯೇ ಯತೋ ಮೃತ್ಯುಂ ಸಮಾಗತಃ ।**
**ಯತ್ಸಂಖ್ಯಾಕಂ ಗೃಹಂ ಭಗ್ನಂ ತತ್ಸಂಖ್ಯಾಕಾ ವರಾ ಮೃತಾಃ ।**
**ಸ್ವಯಂವರೇ ತದಾ ವತ್ಸ ವಿವಾಹೇ ಚೈಕವಿಂಶತಿಃ ॥ ೧೯ ॥**

**ಏತತ್ತೇ ಸರ್ವಮಾಖ್ಯಾತಂ ತಸ್ಯಾಸ್ತು ಪೂರ್ವಚೇಷ್ಟಿತಂ ।**
**ತಯಾ ಪಾಪಂ ಕೃತಂ ಘೋರಂ ಗೃಹಭಂಗಾಖ್ಯಮೇವಚ ॥ ೨೦ ॥**

**॥ ಉಜ್ಜ್ವಲ ಉವಾಚ ॥**

**ಪ್ಲಕ್ಷದ್ವೀಪಸ್ಯ ಭೂಪಸ್ಯ ದಿವೋದಾಸಸ್ಯ ಸಾ ಸುತಾ ।**
**ಕೇನ ಪುಣ್ಯಪ್ರಭಾವೇನ ತಯಾ ಪ್ರಾಪ್ತಂ ಮಹತ್ಕುಲಂ ॥ ೨೧ ॥**

**ಏವಂ ಮೇ ಸಂಶಯಸ್ತಾತ ವರ್ತತೇ ಪ್ರಬ್ರವೀತು ಮೇ ।**
**ಏವಂ ಪಾಪಸಮಾಚಾರಾ ಕಥಂ ಜಾತಾ ನೃಪಾತ್ಮಜಾ ॥ ೨೨ ॥**

**॥ ಕುಂಜಲ ಉವಾಚ ॥**

**ಚಿತ್ರಾಯಾಶ್ಚೇಷ್ಟಿತಂ ಪುಣ್ಯಂ ಸರ್ವಂ ತೇ ಪ್ರವದಾಮ್ಯಹಂ ।**
**ಯತ್ಕೃತಂ ಹಿ ತಯಾ ಪೂರ್ವಂ ತಚ್ಛೃಣುಷ್ವ ಮಹಾಮತೇ ॥ ೨೩ ॥**

---

೧೯. ಎಷ್ಟು ಮನೆಗಳನ್ನು ಮುರಿದಳೋ ಅಷ್ಟು ಜನ ವರರು ಮೃತರಾದರು. ವಿವಾಹ ಸಮಯದಲ್ಲಿ ಇಪ್ಪತ್ತೊಂದು ಸ್ವಯಂವರದಲ್ಲಿ ಅಷ್ಟು ಜನರು ಸತ್ತರು.

೨೦. ಈ ರೀತಿಯಾಗಿ ಅವಳು ಮನೆಮುರುಕುತನವನ್ನು ಮಾಡಿದಳು. ಇದೇ ಅವಳ ಪೂರ್ವಚರಿತೆ. ಇದನ್ನು ಹೇಳಿದ್ದೇನೆ. ಇದೇ ಆಕೆಯ ವೃತ್ತಾಂತವು.

೨೧. ಉಜ್ವಲನೆಂಬ ಮರಿಯು ಹೇಳಿತು :—ಪ್ಲಕ್ಷದ್ವೀಪದ ರಾಜನಾದ ದಾಸನ ಮಗಳಾದಳಷ್ಟೆ! ಉತ್ತಮ ಕುಲವು ಆಕೆಗೆ ಹೇಗೆ ಸಿಕ್ಕಿತು ?

೨೨. ಈ ರೀತಿಯಾದ ಪಾಪಿಯು ರಾಜನ ಮಗಳಾಗಿ ತಾನೆ ಹೇಗೆ ಹುಟ್ಟಿದಳು ? ಇದು ನನಗೆ ಬಂದ ಸಂಶಯವು. ಇದನ್ನು ಪರಿಹರಿಸು.

೨೩. ಕುಂಜಲನು ಹೇಳಿದನು :—ಚಿತ್ರೆಯು ಪೂರ್ವಜನ್ಮದಲ್ಲಿ ಮಾಡಿದ ಸುಕೃತಗಳನ್ನು ಹೇಳುತ್ತೇನೆ ಕೇಳು.

ಕಶ್ಚಿತ್ಸಿದ್ಧಃ ಸಮಾಯಾತೋ ಭ್ರಮಮಾಣೋ ಮಹೀತಳಂ ।
ಕುಚೇಲೋ ವಸ್ತ್ರಹೀನಶ್ಚ ಕಕ್ಷಾಧಾರಸ್ಸದಂಡಕಃ ॥ ೨೪ ॥

ಕೌಪೀನೇನ ಸಮಾಯುಕ್ತೋ ದಿಗ್ವಾಸಾಃ ಪಾಣಿಪಾತ್ರಕಃ ।
ಗೃಹದ್ವಾರಂ ಸಮಾಶ್ರಿತ್ಯ ಚಿತ್ರಾಯಾಃ ಪರಿಸಂಸ್ಥಿತಃ ॥ ೨೫ ॥

ಸ ಮೌನೀ ಸರ್ವಮುಂಡಶ್ಚ ಜಿತಾತ್ಮಾ ವಿಜಿತೇಂದ್ರಿಯಃ ।
ನಿರಾಹಾರೋ ಜಿತಾಹಾರಃ ಸರ್ವತತ್ತ್ವಾರ್ಥದರ್ಶಕಃ ॥ ೨೬ ॥

ದೂರಾಧ್ವಾನಪರಿಶ್ರಾಂತಶ್ಚಿಂತಯಾಕುಲಮಾನಸಃ ।
ಶ್ರಮೇಣ ಖಿದ್ಯಮಾನಶ್ಚ ತೃಷಾರ್ತಶ್ಚ ಸುಪುತ್ರಕ ॥ ೨೭ ॥

ಚಿತ್ರಾದ್ವಾರಂ ಸಮಾಗತ್ಯ ಛಾಯಾಮಾಶ್ರಿತ್ಯ ಸಂಸ್ಥಿತಃ ।
ತಯಾ ದೃಷ್ಟೋ ಮಹಾತ್ಮಾಸೌ ಚಿತ್ರಯಾ ಶ್ರಮಪೀಡಿತಃ ॥ ೨೮ ॥

---

೨೪-೨೫. ಒಬ್ಬ ಸಿದ್ಧನು ಹರಕಲುಬಟ್ಟೆ ಉಟ್ಟು ಕಂಕಳಲ್ಲಿ ಒಂದು ಗಂಟನ್ನಿಟ್ಟುಕೊಂಡು ಕೈಲಿ ದೊಣ್ಣೆಯನ್ನು ಹಿಡಿದು ಕೌಪೀನ ಕಟ್ಟಿಕೊಂಡು ಕೈಯ್ಯಲ್ಲಿ ಒಂದು ಪಾತ್ರೆ ಹಿಡಿದುಕೊಂಡು ಬಂದನು. ಬಂದವನು ಈ ಚಿತ್ರೆಯ ಮನೆಯ ಬಾಗಿಲಿನಲ್ಲಿ ಬಂದು ನಿಂತನು.

೨೬-೨೭. ಅವನು ಮೌನವಾಗಿರುತ್ತಿದ್ದನು. ಬೋಳನು, ಜಿತಾತ್ಮನೂ, ಜಿತೇಂದ್ರಿಯನೂ ಆಗಿದ್ದನು. ಆಹಾರವನ್ನು ಬಿಟ್ಟಿರುವವನು, ಅಂದರೆ ಜಿತಾಹಾರನು. ಜೀವನಕ್ಕೆ ಬೇಕಾದ್ದನ್ನು ಅಷ್ಟನ್ನೇ ತಿನ್ನತಕ್ಕವನು. ಎಲ್ಲಾ ತತ್ವಗಳನ್ನೂ ತಿಳಿದವನು. ಬಹುದೂರ ನಡೆದುದರಿಂದ ಶ್ರಮಪಟ್ಟಿದ್ದನು. ಆದ್ದರಿಂದ ದುಃಖಗೊಂಡಿದ್ದನು. ಶ್ರಮಪಟ್ಟಿದ್ದರಿಂದ ಬಾಯಾರಿಕೆಯಾಗಿತ್ತು.

೨೮. ಚಿತ್ರೆಯು ಮನೆಯ ಬಾಗಿಲಿನಲ್ಲಿ ನೆರಳಿನಲ್ಲಿ ನಿಂತುಕೊಂಡು ಶ್ರಮದಿಂದ ಕೂಡಿದ ಈತನನ್ನು ನೋಡಿದಳು. ದೈವದಿಂದ ಪ್ರೇರಿಸಲ್ಪಟ್ಟು ಆ ಮಹಾತ್ಮನಸೇವೆಯನ್ನು ಮಾಡಿದಳು.

**ಸೇವಾಂ ಚಕ್ರೇ ದೈವದಿಷ್ಟ್ಯಾ ತಸ್ಯ ಚೈವ ಮಹಾತ್ಮನಃ ।**
**ಪಾದಪ್ರಕ್ಷಾಳನಂ ಕೃತ್ವಾ ದತ್ವಾ ಚಾಸನಮುತ್ತಮಂ ॥ ೨೯ ॥**

**ಆಸ್ಯತಾಮಾಸನೇ ವಿಪ್ರ ಸುಖೇನಾಪಿ ಸುಕೋಮಲೆ ।**
**ಕ್ಷುಧಾಪನೋದನಾರ್ಥಂ ಹಿ ಭುಜ್ಯತಾಮನ್ನಮುತ್ತಮಂ ।**
**ಸ್ವೇಚ್ಛಯಾ ಪರಿತುಷ್ಟಶ್ಚ ಶೀತಳಂ ತೂದಕಂ ಪಿಬ ॥ ೩೦ ॥**

**ಏವಮುಕ್ತ್ವಾ ತಥಾ ಕೃತ್ವಾ ದೇವವತ್ಸಂಪೂಜ್ಯ ತಂ ಸುತ ।**
**ಅಂಗಸಂವಾಹನಂ ಕೃತ್ವಾ ನಾಶಿತಶ್ಶ್ರಮ ಏವ ಚ ॥ ೩೧ ॥**

**ಏವಂ ತಯಾ ಸತ್ಕೃತಸ್ತು ಭುಕ್ತ್ವಾ ಪೀತ್ವಾ ದ್ವಿಜೋತ್ತಮ ।**
**ಸಿದ್ಧಸ್ತಸ್ಯೈ ಪ್ರಸನ್ನೋಽಭೂತ್ಸರ್ವತತ್ತ್ವಾರ್ಥದರ್ಶಕಃ ॥ ೩೨ ॥**

**ಕಿಯತ್ಕಾಲಂ ಸಧರ್ಮಾತ್ಮಾ ತಸ್ಯಾ ಗೇಹೇ ಸ್ಥಿರೋಽಭವತ್ ।**
**ಸ್ವೇಚ್ಛಯಾ ಚಾಗತಃ ಪುತ್ರ ಯಥಾ ಯೋಗೀ ತಥಾ ಗತಃ ॥ ೩೩ ॥**

**ಗತೇ ತಸ್ಮಿನ್ಮಹಾಭಾಗೇ ಸಿದ್ಧೇ ಚೈವ ಮಹಾತ್ಮನಿ ।**
**ಸಾ ಚಿತ್ರಾ ಮರಣಂ ಪ್ರಾಪ್ತಾ ಸ್ವಕರ್ಮವಶಮಾಗತಾ ॥ ೩೪ ॥**

---

೨೯-೩೦. ಆಕೆಯು ಕಾಲು ತೊಳೆದು ಆಸನವನ್ನು ಕೊಟ್ಟು, ಈ ಆಸನದಲ್ಲಿ ಕುಳಿತುಕೊ, ಹೊಟ್ಟೆ ತುಂಬಿಸಿಕೊಂಡು ಈ ಶೀತಳವಾದ ನೀರನ್ನು ಕುಡಿ ಎಂದಳು.

೩೧. ಹೀಗೆ ಹೇಳಿ ಅದರಂತೆ ಮಾಡಿ ಆತನನ್ನು ದೇವರಂತೆ ಪೂಜಿಸಿದಳು. ಕೈಕಾಲುಗಳನ್ನು ಅಮುಕಿ ಶ್ರಮವನ್ನು ನಾಶಮಾಡಿದಳು.

೩೨. ಊಟಮಾಡಿ ಒಳ್ಳೆಯ ಪಾನವನ್ನು ಕುಡಿದು ಆಕೆಯ ಸತ್ಕಾರದಿಂದ ಆತನು ತೃಪ್ತನಾದನು. ಆ ತತ್ವಜ್ಞನು ಈಕೆಗೆ ಪ್ರಸನ್ನನಾದನು.

೩೩. ಕೊಂಚಕಾಲ ಅವಳ ಮನೆಯಲ್ಲಿದ್ದು ಸ್ವೇಚ್ಛೆಯಾಗಿ ಹೇಗೆ ಬಂದನೋ ಹಾಗೆಯೇ ಹೊರಟು ಹೋದನು.

೩೪. ಆ ಸಿದ್ಧನು ಹೊರಟು ಹೋಗುತ್ತಲೂ ಆ ಚಿತ್ರೆಯು ಕರ್ಮಕ್ಕನುಸಾರವಾಗಿ ಮೃತಳಾದಳು.

ಶಾಸಿತಾ ಧರ್ಮರಾಜೇನ ಮಹಾದಂಡೈಸ್ಸುದುಃಖದೈಃ ।
ಸಾ ಚಿತ್ರಾ ನರಕಂ ಪ್ರಾಪ್ತಾ ವೇದನಾಪ್ರಾತದಾಯಕಂ ॥ ೩೫ ॥

ಭುಕ್ತ್ವಾ ದುಃಖಂ ಸಕರ್ಮೋತ್ಥಂ ಸಾರ್ಧಂ ಯುಗಸಹಸ್ರಕಂ ।
ಭೋಗಾಂತೇ ತು ಪುನರ್ಜನ್ಮ ಸಂಪ್ರಾಪ್ತಂ ಮಾನುಷಸ್ಯ ಚ ॥ ೩೬ ॥

ಸರ್ವಸಂಗಜಿತಸ್ಸಿದ್ಧೋ ದಿವ್ಯೇನಾಪಿ ಸ್ವತೇಜಸಾ ।
ತಸ್ಯ ಪುಣ್ಯಪ್ರಸಾದೇನ ಪ್ರಾಪ್ತಂ ಪುಣ್ಯೇನ ತತ್ಕುಲಂ ॥ ೩೭ ॥

ಕ್ಷತ್ರಿಯಾಣಾಂ ಮಹಾರಾಜ್ಞೋ ದಿವೋದಾಸಸ್ಯ ವೈ ಗೃಹೇ ।
ದಿವ್ಯಾದೇವೀ ವರಾಪತ್ಯಂ ಸಂಜಾತಂ ತಸ್ಯ ಮಾನದ ॥ ೩೮ ॥

ಸಾ ಹಿ ದತ್ತವತೀ ಚಾನ್ನಂ ಜಲಂ ಪುಣ್ಯಂ ಮಹಾತ್ಮನೇ ।
ತಸ್ಯ ಪುಣ್ಯಸ್ಯ ಮಾಹಾತ್ಮ್ಯಾತ್ ಪ್ರಾಪ್ತಃ ಪುಣ್ಯಫಲೋದಯಃ ॥ ೩೯ ॥

ಪಿಬತೇ ಶೀತಳಂ ತೋಯಂ ಮೃಷ್ಟಾನ್ನಂ ಚ ಭುನಕ್ತಿ ವೈ ।
ದಿವ್ಯಾನ್ ಭೋಗಾನ್ ಪ್ರಭುಂಜಾನಾ ವರ್ತತೇ ಪಿತೃಮಂದಿರೇ ॥ ೪೦ ॥

---

೩೫. ಅನಂತರ ಧರ್ಮರಾಜನಿಂದ ಶಿಕ್ಷೆಗಳಿಂದ ಶಿಕ್ಷಿಸಲ್ಪಟ್ಟಳು. ಅವಕ್ಕೋಸ್ಕರವೇ ಸಂಕಟವನ್ನುಂಟು ಮಾಡುವ ನರಕವನ್ನು ಹೊಂದಿದಳು.

೩೬. ಐದೂವರೆ ಯುಗ ಪರ್ಯಂತರವಾಗಿ ದುಃಖವನ್ನು ಅನುಭವಿಸಿದಳು. ಅನುಭವಿಸಿದ ಮೇಲೆ ಮನುಷ್ಯಜನ್ಮ ಪುನಃ ಪ್ರಾಪ್ತವಾಯಿತು.

೩೭. ಆ ಸಿದ್ಧನ ಪೂಜೆಯ ಪುಣ್ಯಪ್ರಭಾವದಿಂದ ಉತ್ತಮಕುಲವು ಸಿಕ್ಕಿತು.

೩೮. ಕ್ಷತ್ರಿಯರಿಗೆಲ್ಲಾ ರಾಜನಾದ ದಿವೋದಾಸನ ಮನೆಯಲ್ಲಿ ಆತನಿಗೆ ಆ ದಿವ್ಯಾದೇವಿಯು ವರಪುತ್ರಿಯಾಗಿ ಹುಟ್ಟಿದಳು.

೩೯. ಆಕೆಯು ಆ ಮಹಾತ್ಮನಿಗೆ ಅನ್ನನೀರುಗಳನ್ನು ಕೊಟ್ಟ ಪುಣ್ಯದಿಂದ ಈ ಫಲವು ಪ್ರಾಪ್ತವಾಯಿತು

೪೦. ಶೀತವಾದ ನೀರನ್ನು ಕುಡಿಯುತ್ತಾಳೆ. ಮೃಷ್ಟಾನ್ನವನ್ನು ಊಟ ಮಾಡುತ್ತಾಳೆ. ಉತ್ತಮವಾದ ಭೋಗಗಳನ್ನು ಅನುಭವಿಸುತ್ತಾಳೆ. ಇಂತು ತಂದೆಯ ಮನೆಯಲ್ಲಿರುವಳು. ಇದು ಆ ಪುಣ್ಯದ ಫಲ.

ತಸ್ಯ ಪ್ರಸಾದಾದ್ವಿಪ್ರರ್ಷೇ ರಾಜಕನ್ಯಾ ವ್ಯಜಾಯತ ।
ಪಾಪಕರ್ಮಸ್ವಭಾವಾದ್ವಾ ಗೃಹಭಂಗಾನ್ಮಹಾಮತೇ ।
ವೈಧವ್ಯಂ ಭುಂಜತೇ ಸಾ ತು ದಿವ್ಯಾದೇವೀ ಸುಪುತ್ರಕ ॥ ೪೧ ॥

ಏತತ್ತೇ ಸರ್ವಮಾಖ್ಯಾತಂ ದಿವ್ಯಾದೇವ್ಯಾಸ್ಸುಚೇಷ್ಟಿತಂ ।
ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ಪೃಚ್ಛ್ಯತಾಂ ತದ್ವದಾಮ್ಯಹಂ ॥ ೪೨ ॥

॥ ಉಜ್ಜ್ವಲ ಉವಾಚ ॥

ಕಥಂ ಸಾ ಮುಚ್ಯತೇ ಶೋಕಾನ್ಮಹಾದುಃಖಾದ್ವದಸ್ವ ಮೇ ।
ಸಾ ಸ್ಯಾಚ್ಚ ಕೀದೃಶೀ ಬಾಲಾ ಮಹಾದುಃಖೇನ ಪೀಡಿತಾ ॥ ೪೩ ॥

ತತ್ಸುಖಂ ಕೀದೃಶಂ ಕಸ್ಮಾದ್ವಿಪಾಕಶ್ಚ ಭವಿಷ್ಯತಿ ।
ಏತನ್ಮೇ ಸಂಶಯಂ ತಾತ ಸಾಂಪ್ರತಂ ಛೇತ್ತುಮರ್ಹಸಿ ॥ ೪೪ ॥

ಕಥಂ ಸಾ ಲಭತೇ ಮೋಕ್ಷಂ ತಂ ಚೋಪಾಯಂ ವದಸ್ವ ಮೇ ।
ಏಕಾಕಿನೀ ಮಹಾಭಾಗಾ ಮಹಾರಣ್ಯೇ ಪ್ರರೋದಿತಿ ॥ ೪೫ ॥

---

೪೧. ಅವನ ಅನುಗ್ರಹದಿಂದ ರಾಜಕನ್ಯೆಯಾಗಿ ಹುಟ್ಟಿದಳು. ಮನೆಮುರಿದ ಪಾಪದ ಪ್ರಭಾವದಿಂದ ಆಕೆಯು ವೈಧವ್ಯವನ್ನು ಅನುಭವಿಸುತ್ತಾಳೆ.

೪೨. ಇದು ದಿವ್ಯಾದೇವಿಯ ಚರಿತ್ರೆ. ಇದನ್ನು ಹೇಳಿರುವೆನು. ಇನ್ನೇನು ಬೇಕು. ಕೇಳು. ಹೇಳುವೆನು.

೪೩. ಉಜ್ವಲನು ಹೇಳಿದನು:—ಆಕೆಯು ಆ ದುಃಖದಿಂದ ಹೇಗೆ ಪಾರಾಗುವಳು? ಹೇಳು. ಮಹಾದುಃಖದಿಂದ ಕೂಡಿದ ಆ ಹುಡುಗಿಯು ಏನಾದಳು?

೪೪. ಆರೀತಿ ಇರುವ ಸುಖತಾನೆ ಎಂತಹುದು? ಅದು ಪರಿಹಾರವಾಗುವುದು ಹೇಗೆ? ಈ ಸಂಶಯವನ್ನು ನಿವಾರಣೆಮಾಡು.

೪೫. ಒಬ್ಬಂಟಿಗಳಾಗಿ ದೊಡ್ಡ ಕಾಡಿನಲ್ಲಿ ಅಳುತ್ತಿರುವಳಲ್ಲ. ಅದಕ್ಕೆ ನಿವೃತ್ತಿ ಹೇಗೆ? ಅದರ ಉಪಾಯವನ್ನು ಹೇಳು.

॥ ವಿಷ್ಣುರುವಾಚ ॥

ಪುತ್ರವಾಕ್ಯಂ ಮಹಚ್ಛ್ರುತ್ವಾ ಕ್ಷಣಮೇಕಂ ವಿಚಿಂತ್ಯ ಸಃ ।
ಪ್ರತ್ಯುವಾಚ ಮಹಾಪ್ರಾಜ್ಞಃ ಕುಂಜಲಃ ಪುತ್ರಕಂ ಪ್ರತಿ ॥ ೪೬ ॥

ಶೃಣು ವತ್ಸ ಮಹಾಭಾಗ ಸತ್ಯಮೇತದ್ವದಾಮ್ಯಹಂ ।
ಪಾಪಯೋನಿಂ ತು ಸಂಪ್ರಾಪ್ಯ ಪೂರ್ವಕರ್ಮಸಮುದ್ಭವಾಂ ।
ತಿರ್ಯಕ್ತ್ವೇ ನ ಚ ಮೇ ಜ್ಞಾನಂ ನಷ್ಟಂ ಸಂಪ್ರತಿ ಪುತ್ರಕ ॥ ೪೭ ॥

ಅಸ್ಯ ವೃಕ್ಷಸ್ಯ ಸಂಗಾಚ್ಚ ಪ್ರಯತಸ್ಯ ಮಹಾತ್ಮನಃ ।
ರೇವಾಯಾಶ್ಚ ಪ್ರಸಾದೇನ ವಿಷ್ಣೋಶ್ಚೈವ ಪ್ರಸಾದತಃ ॥ ೪೮ ॥

ಯೇನ ಸಾ ಲಭತೇ ಜ್ಞಾನಂ ಮೋಕ್ಷಸ್ಥಾನಂ ನಿವರ್ತತೇ ।
ಉಪದೇಶಂ ಪ್ರವಕ್ಷ್ಯಾಮಿ ಮೋಕ್ಷಮಾರ್ಗಮನುತ್ತಮಂ ॥ ೪೯ ॥

ಯಾಸ್ಯತೇ ಕಲ್ಮಷಾನ್ಮುಕ್ತಾ ಯಥಾ ಹೇಮ ಹುತಾಶನಾತ್ ।
ಶುದ್ಧಂ ಚ ಜಾಯತೇ ವತ್ಸ ಸಂಗಾದ್ವಹ್ನೇಃ ಸ್ವರೂಪವತ್ ॥ ೫೦ ॥

---

೪೬. ವಿಷ್ಣುವು ಹೇಳಿದನು:—ಮಗನ ಮಾತನ್ನು ಕೇಳಿ ಕ್ಷಣಕಾಲ ಯೋಚಿಸಿ ಕುಂಜಲನು ಹೇಳಿದನು.

೪೭. ಅಪ್ಪ, ನಿಶ್ಚಯವಾಗಿ ಹೇಳುವೆನು ಕೇಳು. ನಾನು ಹಿಂದಿನ ಜನ್ಮದಲ್ಲಿ ಮಾಡಿದ ಪಾಪದಿಂದ ಕೀಳುಜನ್ಮವನ್ನು ಹೊಂದಿದ್ದೇನೆ. ಈ ಜನ್ಮದಲ್ಲಿ ನನ್ನ ಮುಂದಿನ ಜ್ಞಾನವು ನಷ್ಟವಾಗಿದೆ.

೪೮-೪೯. ಈ ಮರದ ಮತ್ತು ಇದನ್ನಾಶ್ರಯಿಸಿರುವ ಮಹಾತ್ಮನ, ರೇವಾ ನದಿಯ ಪ್ರಸಾದ, ವಿಷ್ಣುವಿನ ಅನುಗ್ರಹ ಇಷ್ಟರಿಂದಲೂ ಆಕೆಯು ಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದುತ್ತಾಳೆ. ಉತ್ತಮವಾದ ಮೋಕ್ಷಮಾರ್ಗದ ಉಪದೇಶವನ್ನು ಹೇಳುತ್ತೇನೆ.

೫೦ ಚಿನ್ನವು ಬೆಂಕಿಯ ದೆಸೆಯಿಂದ ಕಲ್ಮಷವನ್ನು ಕಳೆದುಕೊಂಡು ಶುದ್ಧವಾಗುವಂತೆ ಈಕೆಯು ಹರಿಯ ಧ್ಯಾನದಿಂದ ಶುದ್ಧಳಾಗುತ್ತಾಳೆ.

ಹರೇಧ್ಯಾ೯ನಾನ್ಮಹಾಪ್ರಾಜ್ಞ ಶೀಘ್ರಂ ತಸ್ಯ ಮಹಾತ್ಮನಃ ।
ಜಪಾದ್ವ್ರತಾದ್ಯಥಾ ಪಾಪಂ ಪ್ರಶಮಂ ಯಾತಿ ನಾನ್ಯಥಾ ॥ ೫೧ ॥

ಮದಂ ತ್ಯಜತಿ ನಾಗೇಂದ್ರೋ ಭಯಾತ್ಸಿಂಹಸ್ಯ ವೈ ಯಥಾ ।
ನಾಮೋಚ್ಚಾರೇಣ ಕೃಷ್ಣಸ್ಯ ತತ್ಪ್ರಯಾತಿ ಹಿ ಕಿಲ್ಬಿಷಂ ॥ ೫೨ ॥

ತೇಜಸಾ ವೈನತೇಯಸ್ಯ ವಿಷಹೀನಾ ಇವೋರಗಾಃ ।
ಬ್ರಹ್ಮಹತ್ಯಾದಿಕಾಃ ಪಾಪಾಃ ಪ್ರಶಮಂ ಯಾಂತಿ ನಾನ್ಯಥಾ। ॥ ೫೩ ॥

ನಾಮೋಚ್ಚಾರೇಣ ತತ್ಪಾಪಂ ಚಕ್ರಪಾಣೇಃ ಪ್ರಯಾತಿ ವೈ ।
ಯದಾ ನಾಮಶತಂ ಪುಣ್ಯಮಘರಾಶಿವಿನಾಶನಂ ।
ಸಾ ಜಪೇತ್ಸುಸ್ಥಿರಾ ಭೂತ್ವಾ ಕಾಮಕ್ರೋಧವಿವರ್ಜಿತಾ ॥ ೫೪ ॥

ಸರ್ವೇಂದ್ರಿಯಾಣಿ ಸಂಯಮ್ಯ ತ್ವಾತ್ಮಜ್ಞಾನೇನ ಗೋಪಯೇತ್ ।
ತಸ್ಯ ಧ್ಯಾನಂ ಪ್ರವಿಷ್ಟಾ ಸಾ ಏವಂ ಭೂತಾ ಸಮಾಹಿತಾ ॥ ೫೫ ॥

---

೫೧. ಹರಿಯ ಧ್ಯಾನದಿಂದ, ಜಪದಿಂದ, ಅವನ ಸಂಬಂಧವಾದ ವ್ರತದಿಂದಲೂ ಕೂಡ ಪಾಪವು ನಾಶವಾಗುತ್ತದೆ.

೫೨. ಆನೆಯು ಸಿಂಹವನ್ನು ನೋಡಿ ಭಯದಿಂದ ನಡುಗುತ್ತಾ ಮದವನ್ನು ಬಿಡುವಂತೆ ಕೃಷ್ಣನ ನಾಮೋಚ್ಚಾರಣದಿಂದ ಪಾಪವು ಹೋಗುತ್ತದೆ.

೫೩. ಗರುಡನ ತೇಜಸ್ಸಿನಿಂದ ಸರ್ಪಗಳು ವಿಷಹೀನವಾಗುವಂತೆ ಕೃಷ್ಣನ ನಾಮೋಚ್ಚಾರಣದಿಂದ ಬ್ರಹ್ಮಹತ್ಯಾದಿ ಪಾಪಗಳು ಹೋಗುತ್ತವೆ.

೫೪. ಚಕ್ರಪಾಣಿಯ ನಾಮೋಚ್ಚಾರಣದಿಂದ ಪಾಪವು ಹೋಗುತ್ತದೆ. ಆ ಸ್ವಾಮಿಯ ನಾಮದ ನೂರನ್ನು ಜಪಿಸಿದರೆ ಪಾಪದ ರಾಶಿಯೇ ನಾಶವಾಗುತ್ತದೆ. ಆಕೆಯು ಕಾಮಕ್ರೋಧಗಳನ್ನು ಬಿಟ್ಟು ಸ್ಥಿರಳಾಗಿ ಜಪಿಸುತ್ತಾಳೆ.

೫೫. ಸರ್ವೇಂದ್ರಿಯಗಳನ್ನು ಬಿಗಿಯಲ್ಲಿಟ್ಟುಕೊಂಡು ಆತ್ಮಜ್ಞಾನದಿಂದ ರಕ್ಷಿಸಿಕೊಳ್ಳಬೇಕು. ಆ ಸ್ವಾಮಿಯ ಧ್ಯಾನವನ್ನು ಹೊಂದುವಳು. ಈ ರೀತಿಯಾಗುವಳು.

ಸಾ ಜಪೇತ್ಪರಮಂ ಜ್ಞಾನಂ ತದಾ ಮೋಕ್ಷಂ ಪ್ರಯಾತಿ ಚ ।
ತನ್ಮನಾಸ್ತತ್ಪದೇ ಲೀನಾ ಯೋಗಯುಕ್ತಾ ಯದಾ ಭವೇತ್ ॥ ೫೬ ॥

॥ ಉಜ್ಜ್ವಲ ಉವಾಚ ॥

ವದ ತಾತ ಪರಂ ಜ್ಞಾನಂ ಪ್ರಥಮಂ ಮಮ ಸಾಂಪ್ರತಂ ।
ಪಶ್ಚಾದ್ಧ್ಯಾನಂ ವ್ರತಂ ಪುಣ್ಯಂ ನಾಮ್ನಾಂ ಶತಮಥಾಪಿ ವಾ ॥ ೫೭ ॥

॥ ಕುಂಜಲ ಉವಾಚ ॥

ಪರಂ ಜ್ಞಾನಂ ಪ್ರವಕ್ಷ್ಯಾಮಿ ಯನ್ನ ದೃಷ್ಟಂ ತು ಕೇನ ಚಿತ್ ।
ಶ್ರೂಯತಾಂ ಪುತ್ರ ಕೈವಲ್ಯಂ ಕೇವಲಂ ದುಃಖವರ್ಜಿತಂ ॥ ೫೮ ॥

॥ ಸೂತ ಉವಾಚ ॥

ಯಥಾ ದೀಪೋ ನಿವಾತಸ್ಥೋ ನಿಶ್ಚಲೋ ವಾಯುವರ್ಜಿತಃ ।
ಪ್ರಜ್ವಲನ್ನಾಶಯೇತ್ಸರ್ವಮಂಧಕಾರಂ ಮಹಾಮತೇ ॥ ೫೯ ॥

ತದ್ವದ್ದೋಷವಿಹೀನಾತ್ಮಾ ಭವತ್ಯೇವ ನಿರಾಶ್ರಯಃ ।
ನಿರಾಶೋ ನಿಶ್ಚಲೋ ವತ್ಸ ನ ಮಿತ್ರಂ ನ ರಿಪುಸ್ತದಾ ॥ ೬೦ ॥

---

೫೬. ಆ ಸ್ವಾಮಿಯನ್ನೇ ಜಪಿಸುತ್ತಾ ಅವನನಲ್ಲೇ ಲೀನಳಾಗಿ ಯೋಗದಿಂದ ಕೂಡಿ ಪರಜ್ಞಾನವನ್ನು ಹೊಂದಿ ಜಪಿಸಿದಾಗ ಮೋಕ್ಷವನ್ನು ಹೊಂದುತ್ತಾಳೆ

೫೭. ಉಜ್ವಲನು ಹೇಳಿದನು :—ತಂದೆಯೇ, ನನಗೆ ಮೊದಲು ಪರಜ್ಞಾನವನ್ನು ಹೇಳು. ಆಮೇಲೆ ಧ್ಯಾನ, ವ್ರತ, ಪುಣ್ಯ, ಶತನಾಮಗಳನ್ನು ಹೇಳು.

೫೮. ಕುಂಜಲನು ಹೇಳಿದನು :—ಯಾರೂ ತಿಳಿಯದ, ನೋಡದ, ಪರಜ್ಞಾನವನ್ನು ಹೇಳುತ್ತೇನೆ. ಅದು ದುಃಖವರ್ಜಿತವಾದುದು. ಕೈವಲ್ಯಸ್ವರೂಪವು ಕೇಳು.

೫೯. ಸೂತನು ಹೇಳಿದನು :—ಗಾಳಿಯಿಲ್ಲದ ಜಾಗದಲ್ಲಿರುವ ದೀಪವು ಚಲಿಸದೆ ಒಂದೇ ಸಮವಾಗಿರುತ್ತಾ ಕತ್ತಲೆಯನ್ನು ನಾಶಮಾಡುತ್ತದೆ.

೬೦-೬೧ ದೋಷವನ್ನು ಕಳೆದುಕೊಂಡವನು ಆಶ್ರಯರಹಿತನೂ ಆಶಾರಹಿತನೂ ನಿಶ್ಚಲನೂ ಶತ್ರುಮಿತ್ರ ವಿಹೀನನೂ ಆಗುತ್ತಾನೆ. ಅವನಿಗೆ ದುಃಖಸುಖಗಳಿಲ್ಲ.

**ನ ಶೋಕೋ ನ ಚ ಹರ್ಷಶ್ಚ ನ ಲೋಭೋ ನ ಚ ಮತ್ಸರಃ ।**
**ಸಂಭ್ರಮಾಲಾಪಮೋಹೈಶ್ಚ ಸುಖದುಃಖೈರ್ವಿಮುಚ್ಯತೇ ॥ ೬೧ ॥**

**ವಿಷಯೇಷ್ವಪಿ ಸರ್ವೇಷು ಇಂದ್ರಿಯಾಣಿ ನ ಭುಂಜತೇ ।**
**ತದಾ ಸ ಕೇವಲೋ ಜಾತಃ ಕೈವಲ್ಯತ್ವಂ ಪ್ರಜಾಯತೇ ॥ ೬೨ ॥**

**ಅಗ್ನಿಕರ್ಮಪ್ರಸಂಗೇನ ದೀಪಸ್ತೈಲಂ ಪ್ರಶೋಷಯೇತ್ ।**
**ವರ್ತ್ಯಾಧಾರೇಣ ರಾಜೇಂದ್ರ ನಿಸ್ತಮೋ ವಾಯುವರ್ಜಿತಃ ॥ ೬೩ ॥**

**ಕಜ್ಜಲಂ ವಮತೇ ಪಶ್ಚಾತ್ತೈಲಸ್ಯಾಪಿ ಮಹಾಮತೇ ।**
**ಕೃಷ್ಣಾ ಸಾ ದೃಶ್ಯತೇ ರೇಖಾ ದೀಪಸ್ಯಾಗ್ರೇ ಮಹಾಮತೇ ॥ ೬೪ ॥**

**ಸ್ವಯಮಾಕರ್ಷತೇ ತೈಲಂ ತೇಜಸಾ ನಿರ್ಮಲೋ ಭವೇತ್ ।**
**ದೇಹವರ್ತಿಸ್ಥಿತಸ್ತದ್ವತ್ಕರ್ಮತೈಲಂ ಪ್ರಶೋಷಯೇತ್ ॥ ೬೫ ॥**

---

ಲೋಭಮತ್ಸರಗಳಿಲ್ಲ. ಸಂಭ್ರಮಮಾತುಗಳೂ ಇಲ್ಲ. ಕೆಟ್ಟದ್ದು ಒಳ್ಳೆಯದಾವುದೂ ಇರುವುದಿಲ್ಲ.

೬೨ ಇಂದ್ರಿಯಗಳು ವಿಷಯವನ್ನು ಅನುಭವಿಸದಿದ್ದರೆ ಆಗಲೇ ಅವನು ಕೇವಲನಾದನು. ಆಗಲೇ ಕೈವಲ್ಯವು ಬರುವುದು.

೬೩ ಅಗ್ನಿಯನ್ನು ಹೊಂದುವುದರಿಂದ ದೀಪವು ಎಣ್ಣೆಯನ್ನು ಆ ಬತ್ತಿಯ ಆಧಾರದಿಂದ ಕ್ಷಯಿಸುವಂತೆ ಮಾಡುತ್ತದೆ. ಅದು ಅಂಧಕಾರವಿಲ್ಲದಿರುವ ಸ್ಥಳದಲ್ಲಿರುತ್ತದೆ. ವಾಯುವೂ ಇಲ್ಲದಿದ್ದರೆ ಚಲಿಸದೆ ಇರುತ್ತದೆ.

೬೪. ಆ ಮೇಲೆ ಆ ದೀಪವು ಆ ಎಣ್ಣೆಯ ಸಂಬಂಧವಾದ ಕಪ್ಪನ್ನು ಉಗುಳುತ್ತದೆ. ಆ ಕಪ್ಪು ದೀಪದ ತುದಿಯಲ್ಲಿ ಕಪ್ಪಿನ ಗೆರೆಯಾಗಿ ಕಾಣುತ್ತದೆ.

೬೫. ದೀಪವು ತಾನು ಎಣ್ಣೆಯನ್ನು ಎಳೆದುಕೊಳ್ಳುತ್ತದೆ. ತೇಜಸ್ಸಿನಿಂದ ನಿರ್ಮಲವಾಗಿರುತ್ತದೆ, ಹಾಗೆಯೇ ದೇಹವೆಂಬ ವರ್ತಿಯು ಕರ್ಮತೈಲವನ್ನು ಶೋಷಿಸುವಂತೆ ಮಾಡುತ್ತದೆ.

**ವಿಷಯಾರ್ ಕಜ್ಜಲಂ ಕೃತ್ವಾ ಪ್ರತ್ಯಕ್ಷಾರ್ ಸಂಪ್ರದರ್ಶಯೇತ್ ।**
**ಜಾಪ್ಯೇನ ನಿರ್ಮಲೋ ಭೂತ್ವಾ ಸ್ವಯಮೇವ ಪ್ರಕಾಶಯೇತ್ ॥ ೬೬ ॥**

**ಕ್ರೋಧಾದಿಭಿಃ ಕ್ಲೇಶಸಂಜ್ಞೈರ್ವಾಯುಭಿಃ ಪರಿವರ್ಜಿತಃ ।**
**ನಿಃಸ್ಪೃಹೋ ನಿಶ್ಚಲೋ ಭೂತ್ವಾ ತೇಜಸಾ ಸ್ವಯಮುಜ್ಜ್ವಲೇತ್ ॥ ೬೭ ॥**

**ತ್ರೈಲೋಕ್ಯಂ ಪಶ್ಯತೇ ಸರ್ವಂ ಸ್ವಸ್ಥಾನಸ್ಥಃ ಸ್ವತೇಜಸಾ ।**
**ಕೇವಲಂ ಜ್ಞಾನರೂಪೋಽಯಂ ಮಯಾ ತೇ ಪರಿಕೀರ್ತಿತಃ ॥ ೬೮ ॥**

**ಧ್ಯಾನಂ ಚೈವ ಪ್ರವಕ್ಷ್ಯಾಮಿ ದ್ವಿವಿಧಂ ತಸ್ಯ ಚಕ್ರಿಣಃ ।**
**ಕೇವಲಂ ಜ್ಞಾನರೂಪೇಣ ದೃಶ್ಯತೇ ಜ್ಞಾನಚಕ್ಷುಷಾ ॥ ೬೯ ॥**

**ಯೋಗಯುಕ್ತಾ ಮಹಾತ್ಮಾನಃ ಪರಮಾರ್ಥಪರಾಯಣಾಃ ।**
**ಯಂ ಪಶ್ಯಂತಿ ಯತೀಂದ್ರಾಸ್ತೇ ಸರ್ವಜ್ಞಂ ಸರ್ವದರ್ಶಕಂ ॥ ೭೦ ॥**

**ಹಸ್ತಪಾದಾದಿಹೀನಶ್ಚ ಸರ್ವತ್ರ ಪರಿಗಚ್ಛತಿ ।**
**ಸರ್ವಂ ಗೃಹ್ಣಾತಿ ತ್ರೈಲೋಕ್ಯಂ ಸ್ಥಾವರಂ ಜಂಗಮಂ ಸುತ ॥ ೭೧ ॥**

---

೬೬. ವಿಷಯಗಳನ್ನು ಕಪ್ಪನ್ನಾಗಿಮಾಡಿ ಪ್ರತ್ಯಕ್ಷಗಳನ್ನು ತೋರಿಸುತ್ತವೆ. ಜಪಗಳಿಂದ ನಿರ್ಮಲನಾಗಿ ತಾನಾಗಿಯೇ ಪ್ರಕಾಶಿಸುತ್ತಾನೆ.

೬೭. ಕ್ರೋಧಗಳ ರೂಪವಾದ ಕ್ಲೇಶಗಳೆಂಬ ವಾಯುವಿನಿಂದ ಬಿಡಲ್ಪಟ್ಟವನಾಗಿ ನಿಸ್ಪೃಹನೂ ನಿಶ್ಚಲನೂ ಆಗಿ ತಾನೇ ಪ್ರಕಾಶಿಸುತ್ತಾನೆ.

೬೮. ಆಗ ತನ್ನ ಸ್ಥಳದಲ್ಲಿಯೇ ಇದ್ದುಕೊಂಡು ಮೂರು ಲೋಕಗಳನ್ನೂ ನೋಡುತ್ತಾನೆ, ಇದೇ ಕೇವಲ ಜ್ಞಾನವು.

೬೯. ಆ ಸ್ವಾಮಿಯ ಧ್ಯಾನವು ಎರಡು ವಿಧವಾದುದು. ಜ್ಞಾನಚಕ್ಷುಸ್ಸಿನಿಂದ ಅವನು ಕೇವಲ ಜ್ಞಾನರೂಪಿನಿಂದಲೇ ನೋಡುತ್ತಾನೆ.

೭೦. ಪರಮಾರ್ಥದಲ್ಲಿ ಆಸಕ್ತರಾದ ಯೋಗಿಗಳು ಮಾತ್ರ ಆ ಸರ್ವಜ್ಞನನ್ನು ಸರ್ವದರ್ಶಕನನ್ನು ನೋಡುತ್ತಾರೆ.

೭೧. ಕೈಕಾಲುಗಳಿಲ್ಲದೆ ಆತನು ಎಲ್ಲೆಲ್ಲೂ ಹೋಗುತ್ತಾನೆ. ಎಲ್ಲವನ್ನೂ ಹಿಡಿಯುತ್ತಾನೆ.

**ಮುಖನಾಸಾವಿಹೀನಸ್ತು ಘ್ರಾತಿ ಭುಂಕ್ತೇ ಹಿ ಪುತ್ರಕೆ ।**
**ಅಕರ್ಣಃ ಶೃಣುತೇ ಸರ್ವಂ ಸರ್ವಸಾಕ್ಷೀ ಜಗತ್ಪತಿಃ ॥ ೭೨ ॥**

**ಅರೂಪೋ ರೂಪಸಂಪನ್ನಃ ಪಂಚವರ್ಗಸಮನ್ವಿತಃ ।**
**ಸರ್ವಲೋಕಸ್ಯ ಯಃ ಪ್ರಾಣಃ ಪೂಜಿತಸ್ಸ ಚರಾಚರೈಃ ॥ ೭೩ ॥**

**ಅಜಿಹ್ವೋ ವದತೇ ಸರ್ವಂ ವೇದಶಾಸ್ತ್ರಾನುಗಂ ಸುತ ।**
**ಅತ್ವಚಸ್ಪರ್ಶಮೇವಾಪಿ ಸರ್ವೇಷಾಮೇವ ಜಾಯತೇ ॥ ೭೪ ॥**

**ಸದಾನಂದೋ ವಿರಕ್ತಾತ್ಮಾ ಏಕರೂಪೋ ನಿರಾಶ್ರಯಃ ।**
**ನಿರ್ಜರೋ ನಿರ್ಮಮೋ ವ್ಯಾಪೀ ಸಗುಣೋ ನಿರ್ಗುಣೋಽಮಲಃ ॥ ೭೫ ॥**

**ಅವಶ್ಯಸ್ಸರ್ವವಶ್ಯಾತ್ಮಾ ಸರ್ವದಃ ಸರ್ವವಿತ್ತಮಃ ।**
**ತಸ್ಯ ಧ್ಯಾತಾ ನ ಚೈವಾಸ್ತಿ ಸರ್ವೈಸ್ಸರ್ವಮಯೋ ವಿಭುಃ ॥ ೭೬ ॥**

**ಏವಂ ಸರ್ವಮಯಂ ಧ್ಯಾನಂ ಪಶ್ಯತೇ ಯೋ ಮಹಾತ್ಮನಃ ॥ ೭೭ ॥**

---

೭೨-೭೩ ಬಾಯಿಲ್ಲದೆ ತಿನ್ನುತ್ತಾನೆ. ಕಿವಿಯಿಲ್ಲದೆ ಕೇಳುತ್ತಾನೆ. ಮೂಗಿಲ್ಲದೆ ವಾಸನೆ ನೋಡುತ್ತಾನೆ. ಅವನು ಸರ್ವಸಾಕ್ಷಿಯು. ಸ್ವಾಮಿಯು ರೂಪರಹಿತನಾದರೂ ರೂಪಿಯು. ಸುಖದುಃಖ ಗಳಿಲ್ಲದಿದ್ದರೂ ಅವುಗಳಿಂದ ಕೂಡಿರುವನು. ಅವನೇ ಸರ್ವ ಲೋಕಕ್ಕೂ ಪ್ರಾಣಸ್ವರೂಪನು. ಚರಾಚರಗಳು ಪೂಜಿಸುತ್ತವೆ.

೭೪. ನಾಲಿಗೆಯಿಲ್ಲದಿದ್ದರೂ ವೇದಶಾಸ್ತ್ರಾನುಸಾರವಾಗಿ ಎಲ್ಲವನ್ನೂ ಹೇಳುತ್ತಾನೆ. ಚರ್ಮವಿಲ್ಲದಿದ್ದರೂ ಸ್ಪರ್ಶಿಸುತ್ತಾನೆ.

೭೫. ಸದಾ ಆನಂದದಿಂದ ಕೂಡಿದ್ದರೂ ವೈರಾಗ್ಯವಂತನು, ಏಕರೂಪನು. ಆಶ್ರಯರಹಿತನು. ಮುಪ್ಪಿಲ್ಲದವನು. ಮಮತೆ ಇಲ್ಲದವನು, ವ್ಯಾಪಕನು. ಗುಣಿಯಾದರೂ ನಿರ್ಗುಣನು.

೭೬. ತಾನು ಮತ್ತೊಬ್ಬರಿಗೆ ಅಧೀನನಲ್ಲ. ಎಲ್ಲರನ್ನೂ ಅಧೀನದಲ್ಲಿಟ್ಟು ಕೊಂಡಿದ್ದಾನೆ. ಸರ್ವವನ್ನೂ ಕೊಡತಕ್ಕವನು. ಎಲ್ಲವನ್ನೂ ಬಲ್ಲವನು. ಅವನು ಯಾರನ್ನೂ ಧ್ಯಾನಮಾಡುವ ಹಾಗಿಲ್ಲ. ಎಲ್ಲರಲ್ಲೂ ಇದ್ದಾನೆ. ಸರ್ವಸ್ವರೂಪನು.

೭೭. ಈ ರೀತಿ ಆ ಪುಣ್ಯಾತ್ಮನ ಸರ್ವಮಯವಾದ ಧ್ಯಾನವನ್ನು ಮಾಡತಕ್ಕವನು ಆಕಾರರಹಿತವಾದ ಅಮೃತದಂತಿರುವ ಪರಮಸ್ಥಾನವನ್ನು ಹೊಂದುತ್ತಾನೆ.

ಸ ಯಾತಿ ಪರಮಂ ಸ್ಥಾನಮಮೂರ್ತಮನ್ಯತೋಪಮಂ ।
ದ್ವಿತೀಯಂ ತು ಪ್ರವಕ್ಷ್ಯಾಮಿ ಹ್ಯಸ್ಯ ಧ್ಯಾನಂ ಮಹಾತ್ಮನಃ ।
ಮೂರ್ತಾಕಾರಂ ತು ಸಾಕಾರಂ ನಿರಾಕಾರಂ ನಿರಾಮಯಂ ॥ ೭೮ ॥

ಬ್ರಹ್ಮಾಂಡಂ ಸರ್ವಮತುಲಂ ವಾಸಿತಂ ಯಸ್ಯ ವಾಸನಾ ।
ಸ ತಸ್ಮಾದ್ವಾಸುದೇವೇತಿ ಉಚ್ಯತೇ ಮಮ ನಂದನ ॥ ೭೯ ॥

ವರ್ಷಮಾಣಸ್ಯ ಮೇಘಸ್ಯ ಯದ್ವರ್ಷಂ ತಸ್ಯ ತದ್ಭವೇತ್ ।
ಸೂರ್ಯತೇಜಃಪ್ರತೀಕಾಶಂ ಚತುರ್ಬಾಹುಂ ಸುರೇಶ್ವರಂ ॥ ೮೦ ॥

ದಕ್ಷಿಣೇ ಶೋಭತೇ ಶಂಖೋ ಹೇಮರತ್ನವಿಭೂಷಿತಃ ।
ಸೂರ್ಯಬಿಂಬಸಮಾಕಾರಂ ಚಕ್ರಂ ಪದ್ಮ ಪ್ರತಿಷ್ಠಿತಂ ॥ ೮೧ ॥

ಕೌಮೋದಕೀ ಗದಾ ತಸ್ಯ ಮಹಾಸುರವಿನಾಶಿನೀ ।
ವಾಮೇ ಚ ಶೋಭತೇ ವತ್ಸ ಕರೇ ತಸ್ಯ ಮಹಾತ್ಮನಃ ॥ ೮೨ ॥

ಮಹಾಪದ್ಮಂ ತು ಗಂಧಾಢ್ಯಂ ತಸ್ಯ ದಕ್ಷಿಣಹಸ್ತಗಂ ।
ಶೋಭಮಾನಂ ಸದಾ ಧ್ಯಾಯೇತ್ಸಾಯುಧಂ ಕಮಲಾಪ್ರಿಯಂ ॥ ೮೩ ॥

---

೭೮. ಎರಡನೆಯದಾದ ಈತನ ಧ್ಯಾನವನ್ನು ಹೇಳುತ್ತೇನೆ ಕೇಳು. ಅದು ಸಾಕಾರವಾದರೂ ಆಕಾರವಿಲ್ಲದ್ದು. ರೋಗವಿಲ್ಲದ್ದು ಆಗುತ್ತದೆ.

೭೯. ಸಮಸ್ತವಾದ ಬ್ರಂಹ್ಮಾಡದಲ್ಲಿಯೂ ವಾಸಮಾಡುವುದರಿಂದ ಅವನಿಗೆ ವಾಸುದೇವನೆಂಬ ಹೆಸರು ಬಂದಿದೆ.

೮೦. ಮೇಘವು ಸುರಿಸುತ್ತಿರುವ ಮಳೆಯಲ್ಲಾ ಅದರದೇ. ಸೂರ್ಯನ ತೇಜಸ್ಸಿನಂತೆ ತೇಜಸ್ಸುಳ್ಳವನು ನಾಲ್ಕು ತೋಳುಳ್ಳವನು, ಸುರೇಶ್ವರನು.

೮೧-೮೨. ಆ ಮಹಾತ್ಮನ ಬಲಗೈಯಲ್ಲಿ ಶಂಖ, ಎಡಗೈಯಲ್ಲಿ ಚಕ್ರಗಳಿವೆ. ರಾಕ್ಷಸನಾಶಕವಾದ ಕೌಮೋದಕೀ ಎಂಬ ಗದೆ ಇದೆ.

೮೩. ಬಲಗೈಯಲ್ಲಿ ಮಹಾಪದ್ಮವೂ ಇರುವ ಲಕ್ಷ್ಮೀಕಾಂತನನ್ನು ಯಾವಾಗಲೂ ಧ್ಯಾನಮಾಡಬೇಕು.

ಕಂಬುಗ್ರೀವಂ ವೃತ್ತಮಾಸ್ಯಂ ಪದ್ಮಪತ್ರನಿಭೇಕ್ಷಣಂ ।
ರಾಜಮಾನಂ ಹೃಷೀಕೇಶಂ ದಶನೈ ರತ್ನಸಂನಿಭೈಃ ॥ ೮೪ ॥

ಗುಡಾಕೇಶಾಃ ಸನ್ತಿ ಯಸ್ಯ ಅಧರಂ ಬಿಂಬಸನ್ನಿಭಂ ।
ಶೋಭತೇ ಪುಂಡರೀಕಾಕ್ಷಃ ಕಿರೀಟೇನಾಪಿ ಪುತ್ರಕ ॥ ೮೫ ॥

ವಿಶಾಲೇನಾಪಿ ರೂಪೇಣ ಕೇಶವಸ್ತು ಸುಚಕ್ಷುಷಾ ।
ಕೌಸ್ತುಭೇನಾಪಿ ವೈ ತೇನ ರಾಜಮಾನೋ ಜನಾರ್ದನಃ ॥ ೮೬ ॥

ಸೂರ್ಯತೇಜಃಪ್ರಕಾಶಾಭ್ಯಾಂ ಕುಂಡಲಾಭ್ಯಾಂ ಪ್ರಭಾತಿ ಚ ।
ಶ್ರೀವತ್ಸಾಂಕೇನ ಪುಣ್ಯೇನ ಸರ್ವದಾ ರಾಜತೇ ಹರಿಃ ॥ ೮೭ ॥

ಕೇಯೂರಕಂಕಣೈರ್ಹಾರೈರ್ಮೌಕ್ತಿಕೈರ್ಋಕ್ಷಸನ್ನಿಭೈಃ ।
ವಪುಷಾ ಭ್ರಾಜಮಾನಸ್ತು ವಿಜಯೋ ಜಯತಾಂ ನರಃ ॥ ೮೮ ॥

---

೮೪. ಶಂಖದಂತಿರುವ ಕತ್ತು, ದುಂಡಗಿರುವ ಮುಖ, ಕಮಲದಂತೆ ಕಣ್ಣು, ರತ್ನದಂತಿರುವ ಹಲ್ಲು ಇವುಗಳಿಂದ ಶೋಭಿಸುವ ಸ್ವಾಮಿಯನ್ನು ಧ್ಯಾನಿಸಬೇಕು.

೮೫. ಜೆಲ್ಲದ ಅಚ್ಚಿನಂತೆ ಎಲ್ಲಾ ಕಡೆಯೂ ತಲೆಯಲ್ಲಿ ಕೂದಲುಗಳಿವೆ. ತೊಂಡೆಯ ಹಣ್ಣಿನಂತೆ ತುಟಿಗಳಿವೆ. ಕಿರೀಟವು ತಲೆಯಲ್ಲಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೮೬. ಚನ್ನಾಗಿರುವ ರೂಪದಿಂದಲೂ ಒಳ್ಳೆಯ ಕಣ್ಣುಗಳಿಂದಲೂ ಕೌಸ್ತುಭದಿಂದಲೂ ಕೂಡಿರುವ ಜನಾರ್ದನನ್ನು ಧ್ಯಾನಿಸು.

೮೭. ಸೂರ್ಯನ ಕಾಂತಿಯಂತೆ ಕಾಂತಿಯುಳ್ಳ ಕುಂಡಲಗಳನ್ನು ಹಾಕಿದ್ದಾನೆ. ಶ್ರೀವತ್ಸವೆಂಬ ಮಚ್ಚೆಯಿಂದ ಕೂಡಿರುವ ಹರಿಯನ್ನು ಧ್ಯಾನಿಸು.

೮೮. ಕೇಯೂರ, ಕಂಕಣ, ಮುತ್ತಿನಹಾರ, ಇವುಗಳಿಂದ ಕೂಡಿದ ವಿಜಯಪ್ರದನಾದ ಸ್ವಾಮಿಯನ್ನು ಧ್ಯಾನಿಸು.

ರಾಜತೇ ಸೋಽಪಿ ಗೋವಿಂದೋ ಹೇಮವರ್ಣೇನ ವಾಸಸಾ ।
ಮುದ್ರಿಕಾರತ್ನಯುಕ್ತಾಭಿರಂಗುಳೀಭಿರ್ವಿರಾಜತೇ ॥ ೮೯ ॥

ಸರ್ವಾಯುಧೈಸ್ಸುಸಂಪೂರ್ಣೋ ದಿವ್ಯೈರಾಭರಣೈರ್ಹರಿಃ ।
ವೈನತೇಯಸಮಾರೂಢೋ ಲೋಕಕರ್ತಾ ಜಗತ್ಪತಿಃ ॥ ೯೦ ॥

ಏವಂ ತಂ ಧ್ಯಾಯತೇ ನಿತ್ಯಮನನ್ಯಮನಸಾ ನರಃ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೯೧ ॥

ಏತತ್ತೇ ಸರ್ವಮಾಖ್ಯಾತಂ ಧ್ಯಾನಮೇವ ಜಗತ್ಪತೇಃ ।
ವ್ರತಂಚೈವ ಪ್ರವಕ್ಷ್ಯಾಮಿ ಸರ್ವಪಾಪನಿವಾರಣಂ ॥ ೯೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ಷಡಶೀತಿತಮೋಽಧ್ಯಾಯಃ



---

೮೯. ಆ ಗೋವಿಂದನು ಚಿನ್ನದ ಬಣ್ಣದ ಬಟ್ಟೆಯನ್ನು ಹಾಕಿಕೊಂಡಿರುತ್ತಾನೆ. ರತ್ನಗಳಿಂದ ಕೂಡಿದ ಉಂಗುರಗಳನ್ನು ಹಾಕಿಕೊಂಡಿದ್ದಾನೆ.

೯೦. ಸರ್ವಾಯುಧಗಳಿಂದಲೂ ದಿವ್ಯಾಭರಣಗಳಿಂದಲೂ ಆ ಹರಿಯು ಶೋಭಿಸುತ್ತಿದ್ದಾನೆ. ಗರುಡಾರೂಢನಾಗಿ ಲೋಕಕರ್ತನಾಗಿದ್ದಾನೆ.

೯೧. ಯಾವನು ನಿಶ್ಚಲವಾದ ಮನಸ್ಸಿನಿಂದ ಆ ಸ್ವಾಮಿಯನ್ನು ಭಜಿಸುತ್ತಾನೋ ಅವನಿಗೆ ಪಾಪವೆಲ್ಲವೂ ಹೋಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

೯೨. ಜಗತ್ಪತಿಯ ಧ್ಯಾನವನ್ನು ನಿನಗೆ ಸಂಪೂರ್ಣವಾಗಿ ಹೇಳಿದ್ದೇನೆ. ಸರ್ವಪಾಪನಿವಾರಕವಾದ ವ್ರತವನ್ನು ಹೇಳುತ್ತೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ಎಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತಾಶೀತಿತಮೋಽಧ್ಯಾಯಃ

॥ ಕುಂಜಲ ಉವಾಚ ॥

ವ್ರತಭೇದಾನ್ಪ್ರವಕ್ಷ್ಯಾಮಿ ಯೈಶ್ಚ ಆರಾಧ್ಯತೇ ಹರಿಃ ।
ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶಿನೀ ॥ ೧ ॥

ತ್ರಿಸ್ಸ್ಪೃಶಾ ವಂಜುಲೀ ಚಾನ್ಯಾ ತಿಲಗಂಧಾ ತಥಾಪರಾ ।
ಅಖಂಡಾ ದ್ವಾದಶೀ ಚಾನ್ಯಾ ಮನೋರಕ್ಷಾ ಸುಪುತ್ರಕೆ ॥ ೨ ॥

ದಿವ್ಯಪ್ರಭಾವಾಸ್ಸಂತ್ಯನ್ಯಾಸ್ತಿಥಯಃ ಪುತ್ರಪೌತ್ರದಾಃ ।
ಅಶೂನ್ಯಶಯನಂ ಚಾನ್ಯಜ್ಜನ್ಮಾಷ್ಟಮಿ ಮಹಾವ್ರತಂ ॥ ೩ ॥

ಏತೈರ್ವ್ರತೈಸ್ಸಮಾಚೀರ್ಣೈಃ ಪಾಪಂ ದೂರಂ ಪ್ರಯಾತಿ ಚ ।
ಪ್ರಾಣಿನಾಂ ನಾತ್ರ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ॥ ೪ ॥

---

## ಎಂಭತ್ತೇಳನೆಯ ಅಧ್ಯಾಯವು

೧-೩. ಕುಂಜಲನು ಹೇಳಿದನು:—ಹರಿಯನ್ನು ಪೂಜಿಸುವ ವ್ರತಗಳನ್ನು ಹೇಳುತ್ತೇನೆ ಕೇಳು. ಜಯೆ, ವಿಜಯೆ, ಜಯಂತಿ, ಪಾಪನಾಶಿನಿ, ತ್ರಿಸ್ಸ್ಪೃಶೆ, ವಂಜುಳಿ, ತಿಲಗಂಧೆ, ಅಖಂಡದ್ವಾದಶಿ, ಮನೋರಕ್ಷೆ ಇವು ಮುಖ್ಯ ವ್ರತಗಳು. ಇನ್ನೂ ಮಕ್ಕಳು ಮೊಮ್ಮಕ್ಕಳನ್ನು ಕೊಡುವ ವ್ರತಗಳು ಬೇಕಾದಷ್ಟಿವೆ. ಅಶೂನ್ಯಶಯನ, ಜನ್ಮಾಷ್ಟಮಿ ಇವೂ ಮುಖ್ಯವು.

೪. ಈ ವ್ರತಗಳನ್ನು ಮಾಡಿದರೆ ಪಾಪವು ದೂರವಾಗಿ ಹೊರಟುಹೋಗುತ್ತದೆ. ಸಂದೇಹವೇ ಇಲ್ಲ. ಸತ್ಯವಾಗಿ ಹೇಳುತ್ತೇನೆ.

ಸ್ತೋತ್ರಂ ತಸ್ಯ ಪ್ರವಕ್ಷ್ಯಾಮಿ ಪಾಪರಾಶಿಪ್ರಣಾಶನಂ ।
ಸುಪುತ್ರ ಶತನಾಮಾಖ್ಯಂ ನರಾಣಾಂ ಗತಿದಾಯಕಂ ॥ ೫ ॥

ತಸ್ಯ ದೇವಸ್ಯ ಕೃಷ್ಣಸ್ಯ ಶತನಾಮಾಖ್ಯಮುತ್ತಮಂ ।
ಸಂಪ್ರತ್ಯೇವ ಪ್ರವಕ್ಷ್ಯಾಮಿ ತಚ್ಛೃಣುಷ್ವ ಸುಪುತ್ರಕ ॥ ೬ ॥

ವಿಷ್ಣೋರ್ನಾಮಶತಸ್ಯಾಪಿ ಋಷಿಂ ಛಂದೋ ವದಾಮ್ಯಹಂ ।
ದೇವಂ ಚೈವ ಮಹಾಭಾಗ ಸರ್ವಪಾತಕಶೋಷಣಂ ॥ ೭ ॥

ವಿಷ್ಣೋರ್ನಾಮಶತಸ್ಯಾಪಿ ಋಷಿರ್ಬ್ರಹ್ಮಾ ಪ್ರಕೀರ್ತಿತಃ ।
ಓಂಕಾರೋ ದೇವತಾ ಪ್ರೋಕ್ತಶ್ಛಂದೋಽನುಷ್ಟುಪ್ತಥೈವ ಚ ॥ ೮ ॥

ಸರ್ವಕಾಮಿತಸಂಸಿದ್ಧ್ಯೈ ಮೋಕ್ಷೇ ಚ ವಿನಿಯೋಗಕಃ ।
ನಮಾಮ್ಯಹಂ ಹೃಷೀಕೇಶಂ ಕೇಶವಂ ಮಧುಸೂದನಂ ।
ಸೂದನಂ ಸರ್ವದೈತ್ಯಾನಾಂ ನಾರಾಯಣಮನಾಮಯಂ ॥ ೯ ॥

ಜಯಂತಂ ವಿಜಯಂ ಕೃಷ್ಣಮನಂತಂ ವಾಮನಂ ತಥಾ ।
ವಿಷ್ಣುಂ ವಿಶ್ವೇಶ್ವರಂ ಪುಣ್ಯಂ ವಿಶ್ವಾತ್ಮಾನಂ ಸುರಾರ್ಚಿತಂ ॥ ೧೦ ॥

---

೫. ಪಾಪನಾಶಕನಾದ ಶತನಾಮಸ್ತೋತ್ರವನ್ನು ಹೇಳುತ್ತೇನೆ.

೬. ಆ ಕೃಷ್ಣನ ಶತನಾಮಗಳನ್ನು ಹೇಳುತ್ತೇನೆ. ಈಗಲೇ ಕೇಳು.

೭. ವಿಷ್ಣುವಿನ ಶತನಾಮಗಳಿಗೆ ಋಷಿ, ಛಂದಸ್ಸು, ದೇವತೆಗಳನ್ನು ಹೇಳುತ್ತೇನೆ. ಅದು ಸರ್ವಪಾಪವನ್ನು ನಾಶಮಾಡುತ್ತದೆ.

೮. ಆ ವಿಷ್ಣುವಿನ ನಾಮಕ್ಕೆ ಬ್ರಹ್ಮನು ಋಷಿಯು, ಓಂಕಾರವೇ ದೇವತೆಯು, ಅನುಷ್ಟುಪ್ ಛಂದಸ್ಸು. ಸರ್ವಕಾಮಸಿದ್ಧಿಗೂ ಮೋಕ್ಷಕ್ಕೂ ವಿನಿಯೋಗವು.

೯. ಹೃಷೀಕೇಶ, ಮಧುಸೂಧನ, ರಾಕ್ಷಸನಾಶನ, ನಾರಾಯಣ ಇವರನ್ನು ನಮಸ್ಕರಿಸುತ್ತೇನೆ.

೧೦-೧೨. ಜಯಂತ, ವಿಜಯ, ಕೃಷ್ಣ, ಅನಂತ, ವಾಮನ, ವಿಷ್ಣು, ವಿಶ್ವೇಶ್ವರ, ವಿಶ್ವಾತ್ಮಾ ಸುರಾರ್ಚಿತ, ಅನಘ, ಅಘಹರ್ತಾ, ನಾರಸಿಂಹ, ಶ್ರೀಪ್ರಿಯ, ಶ್ರೀಧರ,

ಅನಘಂ ತ್ವಘಹರ್ತಾರಂ ನಾರಸಿಂಹಂ ಶ್ರಿಯಃ ಪ್ರಿಯಂ ।
ಶ್ರೀಧರಂ ಶ್ರೀಪತಿಂ ಶ್ರೀದಂ ಶ್ರೀನಿವಾಸಂ ಮಹೋದಯಂ ॥ ೧೧ ॥

ಶ್ರೀರಾಮಂ ಮಾಧವಂ ಮೋಕ್ಷಂ ಕ್ಷಮಾರೂಪಂ ಜನಾರ್ದನಂ ।
ಸರ್ವಜ್ಞಂ ಸರ್ವವೇತ್ತಾರಂ ಸರ್ವೇಶಂ ಸರ್ವದಾಯಕಂ ॥ ೧೨ ॥

ಹರಿಂ ಮುರಾರಿಂ ಗೋವಿಂದಂ ಪದ್ಮನಾಭಂ ಪ್ರಜಾಪತಿಂ ।
ಆನಂದಂ ಜ್ಞಾನಸಂಪನ್ನಂ ಜ್ಞಾನದಂ ಜ್ಞಾನದಾಯಕಂ ॥ ೧೩ ॥

ಅಚ್ಯುತಂ ಸಬಲಂ ಚಂದ್ರವಕ್ತ್ರಂ ವ್ಯಾಪ್ತಪರಾವರಂ ।
ಯೋಗೇಶ್ವರಂ ಜಗದ್ಯೋನಿಂ ಬ್ರಹ್ಮರೂಪಂ ಮಹೇಶ್ವರಂ ॥ ೧೪ ॥

ಮುಕುಂದಂ ಚಾಪಿ ವೈಕುಂಠಮೇಕರೂಪಂ ಕವಿಂ ಧ್ರುವಂ ।
ವಾಸುದೇವಂ ಮಹಾದೇವಂ ಬ್ರಹ್ಮಣ್ಯಂ ಬ್ರಾಹ್ಮಣಪ್ರಿಯಂ ॥ ೧೫ ॥

ಗೋಪ್ರಿಯಂ ಗೋಹಿತಂ ಯಜ್ಞಂ ಯಜ್ಞಾಂಗಂ ಯಜ್ಞವರ್ಧನಂ ।
ಯಜ್ಞಸ್ಯಾಪಿ ಸುಭೋಕ್ತಾರಂ ವೇದವೇದಾಂಗಪಾರಗಂ ॥ ೧೬ ॥

ವೇದಜ್ಞಂ ವೇದರೂಪಂ ತಂ ವಿದ್ಯಾವಾಸಂ ಸುರೇಶ್ವರಂ ।
ಪ್ರತ್ಯಕ್ಷಂ ಚ ಮಹಾಹಂಸಂ ಶಂಖಪಾಣಿಂ ಪುರಾತನಂ ॥ ೧೭ ॥

---

ಶ್ರೀಪತಿ, ಶ್ರೀದ, ಶ್ರೀನಿವಾಸ, ಮಹೋದಯ, ಶ್ರೀರಾಮ, ಮಾಧವ, ಮೋಕ್ಷ, ಕ್ಷಮರೂಪ, ಜನಾರ್ದನ, ಸರ್ವಜ್ಞ, ಸರ್ವವೇತ್ತಾ, ಸರ್ವೇಶ, ಸರ್ವದಾಯಕ, ಇಂತಹ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೧೩-೧೫. ಹರಿ, ಮುರಾರಿ, ಗೋವಿಂದ, ಪದ್ಮನಾಭ, ಪ್ರಜಾಪತಿ, ಆನಂದ. ಜ್ಞಾನಸಂಪನ್ನ, ಜ್ಞಾನದ, ಜ್ಞಾನದಾಯಕ, ಅಚ್ಯುತ, ಸಬಲ, ಚಂದ್ರವಕ್ತ್ರ, ವ್ಯಾಪ್ತ, ಪರಾವರ, ಯೋಗೇಶ್ವರ, ಜಗದ್ಯೋನಿ, ಬ್ರಹ್ಮರೂಪ, ಮಹೇಶ್ವರ, ಮುಕುಂದ, ವೈಕುಂಠ, ಏಕರೂಪ, ಕವಿ, ಧ್ರುವ, ವಾಸುದೇವ, ಮಹಾದೇವ, ಬ್ರಹ್ಮಣ್ಯ, ಬ್ರಾಹ್ಮಣಪ್ರಿಯ, ಇವನನ್ನು ನಮಸ್ಕರಿಸುತ್ತೇನೆ.

೧೬-೧೮. ಗೋಪ್ರಿಯ, ಗೋಹಿತ, ಯಜ್ಞ, ಯಜ್ಞಾಂಗ, ಯಜ್ಞವರ್ಧನ, ಯಜ್ಞಭೋಕ್ತಾ, ವೇದವೇದಾಂಗಪಾರಗ, ವೇದಜ್ಞ, ವೇದರೂಪ, ವಿದ್ಯಾವಾಸ,

ಪುಷ್ಕರಂ ಪುಷ್ಕರಾಕ್ಷಂ ಚ ವಾರಾಹಂ ಧರಣೀಧರಂ ।
ಪ್ರದ್ಯುಮ್ನಂ ಕಾಮಪಾಲಂ ಚ ವ್ಯಾಸಧ್ಯಾತಂ ಮಹೇಶ್ವರಂ ॥ ೧೮ ॥

ಸರ್ವಸೌಖ್ಯಂ ಮಹಾಸೌಖ್ಯಂ ಸಾಂಖ್ಯಂ ಚ ಪುರುಷೋತ್ತಮಂ ।
ಯೋಗರೂಪಂ ಮಹಾಜ್ಞಾನಂ ಯೋಗೀಶಮಜಿತಂ ಪ್ರಿಯಂ ॥ ೧೯ ॥

ಅಸುರಾರಿಂ ಲೋಕನಾಥಂ ಪದ್ಮಹಸ್ತಂ ಗದಾಧರಂ ।
ಗುಹಾವಾಸಂ ಸರ್ವವಾಸಂ ಪುಣ್ಯವಾಸಂ ಮಹಾಜನಂ ॥ ೨೦ ॥

ವೃಂದಾನಾಥಂ ಬೃಹತ್ಕಾಯಂ ಪಾವನಂ ಪಾಪನಾಶನಂ ।
ಗೋಪೀನಾಥಂ ಗೋಪಸಖಂ ಗೋಪಾಲಂ ಗೋಗಣಾಶ್ರಯಂ ॥ ೨೧ ॥

ಪರಾಧೀಶಂ ಪರಾತ್ಮಾನಂ ಕಪಿಲಂ ಕಾರ್ಯಮಾನುಷಂ ।
ನಮಾಮಿ ನಿಖಿಲಂ ನಿತ್ಯಂ ಮನೋವಾಕ್ಕಾಯಕರ್ಮಭಿಃ ॥ ೨೨ ॥

ನಾಮ್ನಾಂ ಶತೇನಾಪಿ ತು ಪುಣ್ಯಕರ್ತಾ
ಯಸ್ತೌತಿ ಕೃಷ್ಣಂ ಮನಸಾ ಸ್ಥಿರೇಣ ।

---

ಸುರೇಶ್ವರ, ಪ್ರತ್ಯಕ್ಷ, ಮಹಾಹಂಸ, ಶಂಖಪಾಣಿ, ಪುರಾತನ, ಪುಷ್ಕರ, ಪುಷ್ಕರಾಕ್ಷ, ವಾರಾಹ, ಧರಣೀಧರ, ಪ್ರದ್ಯುಮ್ನ, ಕಾಮಪಾಲ, ವ್ಯಾಸಧ್ಯಾತಾ, ಮಹೇಶ್ವರ, ಇಂತಹ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೧೯-೨೧. ಸರ್ವಸೌಖ್ಯ, ಮಹಾಸೌಖ್ಯ, ಸಾಂಖ್ಯ, ಪುರುಷೋತ್ತಮ, ಯೋಗರೂಪ, ಮಹಾಜ್ಞಾನ, ಯೋಗೀಶ, ಅಜಿತ, ಪ್ರಿಯ, ಅಸುರಾರಿ, ಲೋಕನಾಥ, ಪದ್ಮಹಸ್ತ, ಗದಾಧರ, ಗುಹಾವಾಸ, ಸರ್ವವಾಸ, ಪುಣ್ಯವಾಸ, ಮಹಾಜನ, ವೃಂದಾನಾಥ, ಬೃಹತ್ಕಾಯ, ಪಾವನ, ಪಾಪನಾಶನ, ಗೋಪೀನಾಥ, ಗೋಪಸಖ, ಗೋಪಾಲ, ಗೋಗಣಾಶ್ರಯ, ಇಂತಹವನನ್ನು ನಮಸ್ಕರಿಸುತ್ತೇನೆ.

೨೨. ಪರಾತ್ಮ, ಪರಾಧೀಶ, ಕಪಿಲ, ಕಾರ್ಯಮಾನುಷ, ಇಂತಹವನನ್ನು ಮನೋವಾಕ್ಕಾಯಗಳಿಂದಲೂ ನಮಸ್ಕರಿಸುತ್ತೇನೆ.

ಸ ಯಾತಿ ಲೋಕಂ ಮಧುಸೂದನಸ್ಯ
ವಿಹಾಯ ದೋಷಾನಿಹ ಪುಣ್ಯಭೂತಃ ॥ ೨೩ ॥

ನಾಮ್ನಾಂ ಶತಂ ಮಹಾಪುಣ್ಯಂ ಸರ್ವಪಾತಕಶೋಧನಂ ।
ಅನನ್ಯಮನಸಾ ಧ್ಯಾಯೇಜ್ಜಪೇದ್ಧ್ಯಾನಸಮನ್ವಿತಃ ॥ ೨೪ ॥

ನಿತ್ಯಮೇವ ನರಃ ಪುಣ್ಯಂ ಗಂಗಾಸ್ನಾನಫಲಂ ಲಭೇತ್ ।
ತಸ್ಮಾತ್ತು ಸುಸ್ಥಿರೋ ಭೂತ್ವಾ ಸಮಾಹಿತಮನಾ ಜಪೇತ್ ॥ ೨೫ ॥

ತ್ರಿಕಾಲಂ ಯೋ ಜಪೇನ್ಮರ್ತ್ಯೋ ನಿಯತೋ ನಿಯಮೇ ಸ್ಥಿತಃ ।
ಅಶ್ವಮೇಧಫಲಂ ತಸ್ಯ ಜಾಯತೇ ನಾತ್ರ ಸಂಶಯಃ ॥ ೨೬ ॥

ಏಕಾದಶ್ಯಾಮುಪೋಷ್ಯೈವ ಪುರತೋ ಮಾಧವಸ್ಯ ಯಃ ।
ಜಾಗರೇ ಪ್ರಜಪೇನ್ಮರ್ತ್ಯಸ್ತಸ್ಯ ಪುಣ್ಯಂ ವದಾಮ್ಯಹಂ ।
ಪುಂಡರೀಕಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥ ೨೭ ॥

---

೨೩. ಈ ನಾಮಶತಗಳಿಂದ ಯಾವ ಪುಣ್ಯಾತ್ಮನು ಕೃಷ್ಣನನ್ನು ಸ್ತೋತ್ರ ಮಾಡುತ್ತಾನೆಯೋ ಅವನು ದೋಷಗಳನ್ನು ಬಿಟ್ಟು ಮಧುಸೂದನನ ಲೋಕವನ್ನು ಹೊಂದುತ್ತಾನೆ,

೨೪. ಈ ಪಾಪನಾಶಕರವಾದ, ಪುಣ್ಯಪ್ರದವಾದ ನೂರುನಾಮಗಳನ್ನು ಒಂದೇ ಮನಸ್ಸಿನಿಂದ ಜಪಿಸಬೇಕು, ಧ್ಯಾನಿಸಬೇಕು.

೨೫. ನಿತ್ಯವೂ ಜಪಿಸಿದರೆ ಗಂಗಾಸ್ನಾನ ಫಲವು ಸಿಕ್ಕುತ್ತದೆ. ಆದ್ದರಿಂದ ಒಂದೇ ಮನಸ್ಸಿನಿಂದ ಜಪಿಸಬೇಕು.

೨೬, ಯಾವನು ತ್ರಿಕಾಲದಲ್ಲೂ ನಿಯಮದಿಂದ ಜಪಿಸುತ್ತಾನೋ ಅವನಿಗೆ ಅಶ್ವಮೇಧ ಫಲವು ಬರುತ್ತದೆ. ಸಂಶಯವಿಲ್ಲ.

೨೭. ಏಕಾದಶಿಯದಿನ ಉಪವಾಸಮಾಡಿ ಮಾಧವನ ಎದುರಿಗೆ ಜಾಗರಣೆ ಮಾಡುತ್ತ ಈ ನಾಮಗಳನ್ನು ಜಪಿಸಿದರೆ ಅವನು ಪುಂಡರೀಕ ಯಜ್ಞದ ಫಲವನ್ನು ಹೊಂದುತ್ತಾನೆ.

ತುಳಸೀಸಂನಿಧೌ ಸ್ಥಿತ್ವಾ ಮನಸಾ ಯೋ ಜಪೇನ್ನರಃ ।
ರಾಜಸೂಯಫಲಂ ಭುಂಕ್ತೇ ವರ್ಷೇಣಾಪಿ ಚ ಮಾನವಃ ॥ ೨೮ ॥

ಶಾಲಗ್ರಾಮಶಿಲಾ ಯತ್ರ ಯತ್ರ ದ್ವಾರಾವತೀ ಶಿಲಾ ।
ಉಭಯೋಸ್ಸಂನಿಧೌ ಜಾಪ್ಯಂ ಕರ್ತವ್ಯಂ ಸುಖಮಿಚ್ಛತಾ ॥ ೨೯ ॥

ಬಹುಸೌಖ್ಯಂ ಪ್ರಭುಕ್ತ್ವೈವ ಕುಲಾನಾಂ ಶತಮೇವಚ ।
ಏಕೇನ ಚಾಧಿಕಂ ಮರ್ತ್ಯ ಆತ್ಮನಾ ಸಹ ತಾರಯೇತ್ ॥ ೩೦ ॥

ಕಾರ್ತಿಕೇ ಸ್ನಾನಕರ್ತಾ ಯಃ ಪೂಜಯೇನ್ಮಧುಸೂದನಂ ।
ಪಠೇತ್ತತ್ಪುರತ ಸ್ತೋತ್ರಂ ಸ ಯಾತಿ ಪರಮಾಂ ಗತಿಂ ॥ ೩೧ ॥

ಮಾಘಸ್ನಾಯಿೀ ಹಿ ಸಂಪೂಜ್ಯ ಭಕ್ತ್ಯಾ ಚ ಮಧುಸೂದನಂ ।
ಧ್ಯಾಯೇಚ್ಚೈವ ಹೃಷೀಕೇಶಂ ಜಪೇದ್ವಾಥ ಶೃಣೋತಿ ಚ ॥ ೩೨ ॥

ಸುರಾಪಾನಾದಿಪಾಪಾನಿ ವಿಹಾಯ ಪರಮಂ ಪದಂ ।
ವಿನಾ ವಿಘ್ನಂ ನರಃ ಪುತ್ರ ಸಂಪ್ರಯಾತಿ ಜನಾರ್ದನಂ ॥ ೩೩ ॥

---

೨೮. ತುಳಸಿಯ ಸಮೀಪದಲ್ಲಿ ನಿಂತು ಮನಸ್ಸಿನಿಂದ ಈಶತನಾಮವನ್ನು ಒಂದು ವರ್ಷದವರೆಗೂ ಜಪಿಸಿದರೆ ರಾಜಸೂಯಯಜ್ಞದ ಫಲಬರುತ್ತದೆ.

೨೯. ಸಾಲಗ್ರಾಮದಶಿಲೆ ದ್ವಾರಾವತಿಯ ಶಿಲೆಗಳ ಸಮೀಪದಲ್ಲಿ ಜಪಿಸಿದರೆ ಸುಖವುಂಟು.

೩೦. ಬಹುಸೌಖ್ಯವನ್ನು ಅನುಭವಿಸಿ ನೂರೊಂದು ಕುಲಗಳನ್ನೂ ತನ್ನೊಡನೆ ದಾಟಿಸುತ್ತಾನೆ.

೩೧. ಕಾರ್ತಿಕಮಾಸದಲ್ಲಿ ಸ್ನಾನಮಾಡಿ ವಿಷ್ಣುವನ್ನು ಪೂಜಿಸಿ ಅವನ ಎದುರಿಗೆ ಈ ಸ್ತೋತ್ರವನ್ನು ಪಠಿಸಿದರೆ ಉತ್ತಮಗತಿ ಸಿಕ್ಕುತ್ತದೆ.

೩೨-೩೩ ಮಾಘಸ್ನಾನ ಮಾಡಿ ವಿಷ್ಣುವನ್ನು ಪೂಜಿಸಿ, ಜಪಿಸಿ ಅಥವಾ ಕೇಳಿದರೆ ಸುರಾಪಾನಾದಿ ಪಾಪಗಳು ಹೋಗಿ ಪರಮಪದವನ್ನು ಹೊಂದುತ್ತಾನೆ. ವಿಘ್ನಗಳು ಇಲ್ಲದೆ ಜನಾರ್ದನನನ್ನೇ ಹೊಂದುತ್ತಾನೆ.

ಶ್ರಾದ್ಧಕಾಲೇ ಹಿ ಯೋ ಮರ್ತ್ಯೋ ಭುಂಜತಾಂ ಚ ದ್ವಿಜನ್ಮನಾಂ ।
ಯೋ ಜಪೇಚ್ಚ ಶತಂ ನಾಮ್ನಾಂ ಸ್ತವಂ ಪಾಪವಿನಾಶನಂ ।
ಪಿತರಸ್ತುಷ್ಟಿಮಾಯಾಂತಿ ತೃಪ್ತಾ ಯಾಂತಿ ಪರಾಂ ಗತಿಂ ॥ ೩೪ ॥

ಬ್ರಾಹ್ಮಣೋ ವೇದವಿಚ್ಚೈವ ಕ್ಷತ್ರಿಯೋ ವಿಜಯೀ ಭವೇತ್ ।
ಧನಧಾನ್ಯಂ ಪ್ರಭುಂಜೀತ ವೈಶ್ಯೋ ಜಪತಿ ಯಸ್ಸದಾ ॥ ೩೫ ॥

ಶೂದ್ರಃ ಸುಖಂ ಪ್ರಭುಂಕ್ತೇ ಚ ಬ್ರಾಹ್ಮಣತ್ವಂ ಚ ಗಚ್ಛತಿ ।
ಪ್ರಾಪ್ಯ ಜನ್ಮಾಂತರಂ ವತ್ಸ ವೇದವಿದ್ಯಾಂ ಪ್ರವಿಂದತಿ ॥ ೩೬ ॥

ಸುಖದಂ ಮೋಕ್ಷದಂ ಸ್ತೋತ್ರಂ ಜಪ್ತವ್ಯಂ ಚ ನ ಸಂಶಯಃ ।
ಕೇಶವಸ್ಯ ಪ್ರಸಾದೇನ ಸರ್ವಸಿದ್ಧೋ ಭವೇನ್ನರಃ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ ಸಪ್ತಾಶೀತಿತಮೋಽಧ್ಯಾಯಃ

---

೩೪. ಶ್ರಾದ್ಧಕಾಲದಲ್ಲಿ ಶ್ರಾದ್ಧಭೋಜನ ಮಾಡುತ್ತಿರುವ ಬ್ರಾಹ್ಮಣರ ಎದುರಿಗೆ ಈ ನಾಮಗಳನ್ನು ಜಪಿಸಿದರೆ ಪಿತೃಗಳು ತುಷ್ಟರಾಗಿ ಉತ್ತಮಗತಿಯನ್ನು ಹೊಂದುತ್ತಾರೆ.

೩೫. ಬ್ರಾಹ್ಮಣನು ಜಪಿಸಿದರೆ ವೇದವಿತ್ತನಾಗುತ್ತಾನೆ. ಕ್ಷತ್ರಿಯನು ಜಯ ಹೊಂದುತ್ತಾನೆ. ವೈಶ್ಯನು ಧನಧಾನ್ಯವನ್ನು ಹೊಂದುತ್ತಾನೆ.

೩೬. ಶೂದ್ರನು ಸುಖಹೊಂದಿ ಜನ್ಮಾಂತರದಲ್ಲಿ ಬ್ರಾಹ್ಮಣನಾಗಿ ವೇದವಿದ್ಯೆಯನ್ನು ಹೊಂದುತ್ತಾನೆ.

೩೭. ಸುಖವನ್ನೂ ಮೋಕ್ಷವನ್ನೂ ಕೊಡುವ ಈ ಸ್ತೋತ್ರವನ್ನು ಸಂದೇಹವಿಲ್ಲದೆ ಜಪಿಸಬೇಕು. ಕೇಶವನ ಪ್ರಸಾದದಿಂದ ಆ ನರನು ಸರ್ವಸಿದ್ಧಿಯನ್ನು ಹೊಂದುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಾಶೀತಿತಮೋಽಧ್ಯಾಯಃ

॥ ಕುಂಜಲ ಉವಾಚ ॥

ವ್ರತಂ ಸ್ತೋತ್ರಂ ಮಹಾಧ್ಯಾನಂ ಜ್ಞಾನಂ ಚೈವ ಸುಪುತ್ರಕ ।
ಮಯಾಖ್ಯಾತಂ ತವಾಗ್ರೇ ಚ ವಿಷ್ಣೋಃ ಪಾಪಪ್ರಣಾಶನಂ ॥ ೧ ॥

ಏವಂ ಚತುಷ್ಟಯಂ ಸಾ ಹಿ ಸದಾ ಪುಣ್ಯಂ ಸಮಾಚರೇತ್ ।
ಪ್ರಯಾತಿ ವೈಷ್ಣಂ ಲೋಕಂ ಸರ್ವಸೌಖ್ಯಪ್ರದಾಯಕಂ ॥ ೨ ॥

ಇತೋ ಗತ್ವಾ ಭವಾನ್ವತ್ಸ ದಿವ್ಯಾದೇವೀಂ ಪ್ರಬೋಧಯ ।
ಅಶೂನ್ಯಶಯನಂ ನಾಮ ವ್ರತರಾಜಂ ವದಸ್ವ ತಾಂ ॥ ೩ ॥

---

## ಎಂಭತ್ತೆಂಟನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಎಲೈ, ಪುತ್ರನೇ! ವಿಷ್ಣುವಿನ ವ್ರತ, ಸ್ತೋತ್ರ, ಧ್ಯಾನ, ಜ್ಞಾನಗಳು ಪಾಪನಾಶಕವಾದುವು. ಅವನ್ನು ಹೇಳಿದ್ದೇನೆ.

೨. ಹೀಗೆ ಪುಣ್ಯಸಂಪಾದನೆಗೆ ಈ ನಾಲ್ಕು ಮುಖ್ಯವಾದವು. ಸರ್ವಸೌಖ್ಯ ವನ್ನು ಕೊಡುತ್ತವೆ. ಇವನ್ನು ಮಾಡಿದರೆ ವೈಷ್ಣವಲೋಕವನ್ನು ಹೊಂದುತ್ತಾನೆ.

೩. ಇಲ್ಲಿಂದ ಹೋಗಿ ಆ ದಿವ್ಯಾದೇವಿಗೆ ಜ್ಞಾಪಿಸು. ಅಶೂನ್ಯಶಯನವೆಂಬ ವ್ರತವನ್ನು ಆಕೆಗೆ ಹೇಳು.

ಸಮುದ್ಧರ ಮಹಾಪಾಪಾದ್ರಾಜಕನ್ಯಾಂ ಯಶಸ್ವಿನೀಂ ।
ತ್ವಯಾ ಪೃಷ್ಟಂ ಮಯಾಖ್ಯಾತಂ ಪುಣ್ಯದಂ ಪಾಪನಾಶನಂ ।
ಗಚ್ಛ ಗಚ್ಛ ಮಹಾಭಾಗ ಇತ್ಯುಕ್ತ್ವಾ ವಿರರಾಮ ಸಃ ॥ ೪ ॥

॥ ವಿಷ್ಣುರುವಾಚ ॥

ಏವಮುಕ್ತಶ್ಚೋಜ್ವಲಸ್ತು ಸುಪಿತ್ರಾ ಕುಂಜಲೇನ ಹಿ ।
ಪ್ರಣಮ್ಯ ಪಾದೌ ಧರ್ಮಾತ್ಮಾ ಮಾತಾಪಿತ್ರೋರ್ಮಹಾಮತಿಃ ।
ಜಗಾಮ ತ್ವರಿತೋ ರಾಜನ್ ಪ್ಲಕ್ಷದ್ವೀಪಂ ಸ ಉಜ್ಜ್ವಲಃ ॥ ೫ ॥

ತಂ ಗಿರಿಂ ಸರ್ವತೋಭದ್ರಂ ನಾನಾಧಾತುಸಮಾಕುಲಂ ।
ನಾನಾರತ್ನಮಯೈಸ್ತುಂಗೈಃ ಶಿಖರೈರುಪಶೋಭಿತಂ ॥ ೬ ॥

ನಾನಾಪ್ರವಾಹಸಂಪೂರ್ಣೈರುದಕೈರ್ನಿರ್ಮಲೈರ್ನೃಪ ।
ನದ್ಯಸ್ಸಂತಿ ವಿಶಾಲಾಸ್ತಾಸ್ತಸ್ಮಿನ್ಗಿರಿವರೋತ್ತಮೇ ॥ ೭ ॥

ಕಿನ್ನರಾಸ್ತತ್ರ ಗಾಯಂತಿ ಗಂಧರ್ವಾಸ್ಸುಸ್ವರಂ ನೃಪ ।
ಅಪ್ಸರೋಭಿಸ್ಸಮಾಕೀರ್ಣಂ ದೇವವೃಂದೈಸ್ಸಮಾಶ್ರಿತಂ ॥ ೮ ॥

---

೪. ಆ ದಿವ್ಯಾದೇವಿಯೆಂಬ ರಾಜಕನ್ಯೆಯನ್ನು ಪಾಪದಿಂದ ದೂರಮಾಡು. ಪಾಪನಾಶಕವಾದ ಇವನ್ನು ನೀನು ಕೇಳಿದೆ. ನಾನು ಹೇಳಿದೆ. ಹೋಗು ಎಂದು ಹೇಳಿ ಸುಮ್ಮನಾಯಿತು.

೫. ವಿಷ್ಣುವು ಹೇಳಿದನು:—ಕುಂಜಲನು ಹೀಗೆ ಹೇಳಲು, ಉಜ್ವಲನು ತಾಯಿತಂದೆಗಳಿಗೆ ನಮಸ್ಕರಿಸಿ ವೇಗದಿಂದ ಪ್ಲಕ್ಷದ್ವೀಪಕ್ಕೆ ಹೋಯಿತು.

೬-೭. ಬಗೆಬಗೆಯ ಧಾತುಗಳುಳ್ಳ, ರತ್ನಗಳುಳ್ಳ, ಎತ್ತರವಾದ ಶಿಖರಗಳಿಂದ ಕೂಡಿದ, ಅನೇಕ ಪ್ರವಾಹಗಳುಳ್ಳ ನದಿಗಳಿರುವ ಆ ಪರ್ವತಕ್ಕೆ ಹೋಯಿತು.

೮. ಕಿನ್ನರರು, ಗಂಧರ್ವರು, ಅಲ್ಲಿ ಗಾನಮಾಡುತ್ತಾರೆ. ಅಪ್ಸರಸ್ತ್ರೀಯರು ದೇವತೆಗಳೂ ಅಲ್ಲಿದ್ದಾರೆ.

ಸಿದ್ಧಚಾರಣಸಂಘುಷ್ಟಂ ಮುನಿವಂದ್ಯೈರುಪಾಸಿತಂ ।
ನಾನಾಪಕ್ಷಿನಿನಾದೈಶ್ಚ ಸರ್ವತ್ರ ಪರಿನಾದಿತಂ ॥ ೯ ॥

ಏವಂ ಗಿರಿಂ ಸಮಾಸಾದ್ಯ ಉಜ್ಜ್ವಲೋ ಲಘುವಿಕ್ರಮಃ ।
ಸುಸ್ವರೇಣಾಪಿ ತಾಂ ದೇವೀಂ ದಿವ್ಯಾಂ ತತ್ರ ಸಮಾಸ್ಥಿತಾಂ ।
ರೋರೂಯಮಾಣಾಂ ತಾಂ ಪ್ರಾಜ್ಞೋ ವಚನಂ ಚೇದಮಬ್ರವೀತ್ ॥ ೧೦ ॥

ಕಾ ತ್ವಂ ಭವಸಿ ಕಸ್ಯಾಸಿ ಕಸ್ಮಾದ್ರೋದಿಷಿ ಸಾಂಪ್ರತಂ ॥ ೧೧ ॥

ಕಸ್ಮಾತ್ತ್ವಿನ್ನಾ ಮಹಾಭಾಗೇ ಕೇನ ತೇ ವಿಪ್ರಿಯಂ ಕೃತಂ ।
ಸಮಾಚಕ್ಷ್ವ ತ್ವಮನಘೇ ಸರ್ವಂ ದುಃಖಸ್ಯ ಕಾರಣಂ ॥ ೧೨ ॥

॥ ದಿವ್ಯಾದೇವ್ಯುವಾಚ ॥

ವಿಪಾಕೋ ಹಿ ಮಹಾಭಾಗ ಕರ್ಮಣಾಂ ಮಮ ಸಾಂಪ್ರತಂ ।
ಇಹ ತಿಷ್ಠಾಮಿ ದುಃಖೇನ ವೈಧವ್ಯೇನ ಸಮನ್ವಿತಾ ॥ ೧೩ ॥

ಭವಾನ್ ಕೋ ಹಿ ಮಹಾಭಾಗ ಕೃಪಯಾ ಮಮ ಪೀಡಿತಃ ।
ಪಕ್ಷಿರೂಪಧರೋ ಭದ್ರ ಸುಸ್ವರಂ ಪರಿಭಾಷಸೇ ॥ ೧೪ ॥

---

೯. ಸಿದ್ಧಚಾರಣರೂ, ಮುನಿಗಳೂ ಅಲ್ಲಿದ್ದಾರೆ. ನಾನಾಬಗೆಯ ಪಕ್ಷಿಗಳು ಅಲ್ಲಿ ಧ್ವನಿಮಾಡುತ್ತವೆ.

೧೦. ಆ ಉಜ್ವಲನು ಜಾಗ್ರತೆಯಾಗಿ ಆ ಬೆಟ್ಟಕ್ಕೆ ಹೋಗಿ ದುಃಖಪಡುತ್ತಾ ಅಳುತ್ತಿರುವ ಆ ದಿವ್ಯಾದೇವಿಯನ್ನು ಕುರಿತು ಸುಸ್ವರದಿಂದ ಇಂತೆಂದಿತು.

೧೧-೧೨. ಎಲೈ ಸಾಧ್ವಿ. ನೀನಾರು? ಯಾರ ಸಂಬಂಧಿ? ಏಕೆ ಅಳು ತ್ತೀಯೆ? ಏಕೆ ಕಾಂತಿಹೀನಳಾಗಿದ್ದೀಯೆ? ಯಾರು ನಿನಗೆ ತೊಂದರೆ ಮಾಡಿದರು? ನನಗೆ ಆ ದುಃಖಕಾರಣವನ್ನೆಲ್ಲಾ ಹೇಳು. ಎನ್ನಲು

೧೩. ದಿವ್ಯಾದೇವಿಯು ಹೇಳಿದಳು;—ಇದು ನನ್ನ ಕರ್ಮದ ಫಲವು. ನಾನು ವೈಧವ್ಯ ದುಃಖದಿಂದ ಕೂಡಿ ಇಲ್ಲಿ ದುಃಖಿಸುತ್ತಿದ್ದೇನೆ.

೧೪. ನೀನಾರಪ್ಪ? ನನ್ನ ಪುಣ್ಯವೇ ಪಕ್ಷಿಯ ರೂಪತೊಂದಿ ಬಂದಂತೆ ಸುಸ್ವ ರದಿಂದ ಮಾತನಾಡಿಸುತ್ತಿದ್ದೀಯೆ? ಎಂದಳು.

ಏವಮಾಕರ್ಣ್ಯ ತತ್ಸರ್ವಂ ಭಾಷಿತಂ ರಾಜಕನ್ಯಯಾ ।
ಅಹಂ ಪಕ್ಷೀ ಮಹಾಭಾಗೇ ನ ಸಿದ್ಧೋ ನಾಪಿ ಜ್ಞಾನವಾನ್ ॥ ೧೫ ॥

ರುದಮಾನಾಂ ಮಹಾಲಾಪೈಸ್ತ್ವಾಂ ದೃಷ್ಟ್ವಾ ತು ಮಯಾ ಇಹ ।
ತದಾ ಪೃಚ್ಛಾಮ್ಯಹಂ ದೇವಿ ವದ ಮೇ ಕಾರಣಂ ತ್ವಿಹ ॥ ೧೬ ॥

ಪಿತುರ್ಗೇಹೇ ಯಥಾವೃತ್ತಮಾತ್ಮವೃತ್ತಾಂತಮೇವ ಹಿ ।
ತಯಾ ಚಾವೇದಿತಂ ಸರ್ವಂ ಯಥಾಸಂಖ್ಯೇನ ದುಃಖದಂ ॥ ೧೭ ॥

ತದಾಕರ್ಣ್ಯ ಸಮಾಸೇನ ಉಜ್ಜ್ವಲೋ ಹಿ ಮಹಾಮನಾಃ ।
ತಾಮುವಾಚ ಮಹಾಪಕ್ಷೀ ದಿವ್ಯಾದೇವೀಂ ಸುದುಃಖಿತಾಂ ॥ ೧೮ ॥

ಯಥಾ ತವ ವಿವಾಹೇ ಚ ಭರ್ತಾರೋ ಮರಣಂ ಗತಾಃ ।
ಸ್ವಯಂವರನಿಮಿತ್ತೇನ ಕ್ಷಯಂ ಗತಂ ಚ ಕ್ಷತ್ರಿಯಂ ॥ ೧೯ ॥

ಏತತ್ತೇ ಚೇಷ್ಟಿತಂ ಸರ್ವಂ ಮಯಾಪಿ ಪರಿಭಾಷಿತಂ ।
ಅನ್ಯಜನ್ಮಕೃತಂ ಕರ್ಮ ತವ ಪಾಪಂ ಸುಲೋಚನೆ ॥ ೨೦ ॥

---

೧೫-೧೬. ಆ ರಾಜಪುತ್ರಿಯ ಮಾತನ್ನು ಕೇಳಿ ಉಜ್ವಲನು, ನಾನೊಂದು ಪಕ್ಷಿಯು. ಸಿದ್ಧನೂ ಅಲ್ಲ. ಜ್ಞಾನಿಯೂ ಅಲ್ಲ. ಅಳುತ್ತಾ ದುಃಖಪಡುತ್ತಿರುವ ನಿನ್ನನ್ನು ನೋಡಿ ಇಲ್ಲಿಗೆ ಬಂದೆ. ದುಃಖಕಾರಣವನ್ನು ಹೇಳು. ಎನ್ನಲು

೧೭. ಆ ರಾಜಪುತ್ರಿಯು ತನ್ನ ತಂದೆಯ ಮನೆಯಲ್ಲಿ ತನಗುಂಟಾದ ದುಃಖದ ರೀತಿಯನ್ನು ಅವುಗಳ ಸಂಖ್ಯೆಯನ್ನು ತಿಳಿಸಿದಳು.

೧೮. ಉಜ್ವಲನು ಆ ದುಃಖಕಾರಣವನ್ನೆಲ್ಲಾ ಕೇಳಿ, ಆಕೆಯನ್ನು ಕುರಿತು

೧೯-೨೧. ನಿನ್ನ ವಿವಾಹದಲ್ಲಿ ಗೊತ್ತಾದ ವರಗಳೂ, ಅನಂತರ ನಿನ್ನ ಸ್ವಯಂವರಕ್ಕೆ ಬಂದ ಕ್ಷತ್ರಿಯರೂ ನಾಶವಾದರು. ಆ ಮೇಲೆ ನೀನು ಮಾಡಿದ ಕೆಲಸ.

ಮಮ ಪಿತ್ರಾ ಮಮಾಗ್ರೇ ಚ ತ್ವತ್ಕರ್ಮ ಪರಿಭಾಷಿತಂ ।
ತೇನ ದೋಷೇಣ ಸಮ್ಯಕ್ತ್ವಂ ಲಿಪ್ತಾಸಿ ತು ವರಾನನೇ ॥ ೨೧ ॥

ಏತಾವತ್ಕಾರಣಂ ಸರ್ವಂ ಶುಕಸ್ಯ ಪರಿಪೃಚ್ಛಿತಂ ।
ಪೂರ್ವಂ ಕರ್ಮವಿಪಾಕಂ ಚ ಭುಂಕ್ಷ್ವ ತ್ವಂ ಚ ಸ್ವಮಾಶು ಚ । ॥ ೨೨ ॥

ಅಥ ಸಾ ತದ್ವಚಃ ಶ್ರುತ್ವಾ ನೃಪಕನ್ಯೋಜ್ಜ್ವಲಸ್ಯ ತು ।
ಪ್ರತ್ಯುವಾಚ ಮಹಾತ್ಮಾನಂ ಬ್ರುವಂತಂ ಪಕ್ಷಿಣಂ ಶುಭಂ । ॥ ೨೩ ॥

ಮಾನನೀಯೋಽಸಿ ಮೇ ಪಕ್ಷಿನ್ ಕೃಪಾಂ ಕುರು ಮಯಿ ಪ್ರಭೋ ।
ಕಥಯಸ್ವ ಪ್ರಸಾದೇನ ತಸ್ಯ ಪಾಪಸ್ಯ ನಿಷ್ಕೃತಿಂ ॥ ೨೪ ॥

ಪ್ರಾಯಶ್ಚಿತ್ತಂ ಸುಪುಣ್ಯಂ ಚ ಮಮ ಪಾತಕಶೋಧನಂ ।
ಯೇನ ಪ್ರಾಪ್ನೋಮ್ಯಹಂ ಪುಣ್ಯಂ ವಿಶುದ್ಧಾಶೇಷಕಿಲ್ಬಿಷಾ ॥ ೨೫ ॥

ಪ್ರಾಯಶ್ಚಿತ್ತಂ ಮಹಾಪ್ರಾಜ್ಞ ವದಸ್ವ ತ್ವಂ ಪ್ರಸಾದತಃ ।

॥ ಉಜ್ಜ್ವಲ ಉವಾಚ ॥

ತ್ವದರ್ಥಂ ತು ಮಹಾಭಾಗೇ ಕುಂಜಲಃ ಪೃಚ್ಛಿತೋ ಮಯಾ ।
ಸಮಾಖ್ಯಾತಂ ತು ತೇನಾಪಿ ಪ್ರಾಯಶ್ಚಿತ್ತಮನುತ್ತಮಂ ॥ ೨೬ ॥

---

ಇದೆಲ್ಲವೂ ಪೂರ್ವಜನ್ಮದ ಪಾಪದ ಲೇಪವೆಂದು ನನ್ನ ತಂದೆಯು ನನಗೆ ಹೇಳಿದ್ದಾನೆ. ಆ ಪಾಪವು ನಿನಗೆ ಬಲವಾಗಿ ಅಂಟಿಕೊಂಡಿದೆಯೆಂದೂ

೨೨. ತಾನು ಕೇಳಿದುದರ ಕಾರಣವು ಪೂರ್ವಕರ್ಮದ ಪಾಪವೆಂದೂ ಅದನ್ನು ಅನುಭವಿಸಬೇಕೆಂದೂ ಹೇಳಿತು.

೨೩. ಆ ಮೇಲೆ ರಾಜಪುತ್ರಿಯು ಉಜ್ವಲನಮಾತನ್ನು ಕೇಳಿ ಪಕ್ಷಿಯನ್ನು ಕುರಿತು ಹೇಳಿದಳು.

೨೪-೨೫. ಅಯ್ಯಾ ಪಕ್ಷಿಯೇ, ನೀನು ಗೌರವಾರ್ಹನು. ನನ್ನಲ್ಲಿ ಕೃಪೆಮಾಡು. ಆ ಪಾಪಕ್ಕೆ ಬದಲನ್ನು ದಯವಿಟ್ಟು ಹೇಳು. ಪಾಪಶೋಧಕವಾದ ಪ್ರಾಯಶ್ಚಿತ್ತವನ್ನು ಹೇಳು. ಅದರಿಂದ ಪಾಪಹೋಗಿ ಶುದ್ಧಳಾಗಿ ಪುಣ್ಯವನ್ನು ಹೊಂದುತ್ತೇನೆ.

೨೬. ಉಜ್ವಲನು ಹೇಳಿದನು:—ನಿನಗೋಸ್ಕರವೇ ನಾನು ನನ್ನ ತಂದೆಯಾದ ಕುಂಜಲನನ್ನು ಕೇಳಿದೆನು. ಅವನೂ ಉತ್ತಮವಾದ ಪ್ರಾಯಶ್ಚಿತ್ತವನ್ನು ಹೇಳಿದನು.

**ತತ್ಕುರುಷ್ವ ಮಹಾಭಾಗೇ ಸರ್ವಪಾತಕಶೋಧನಂ ।**
**ಧ್ಯಾಯಸ್ವ ಹಿ ಹೃಷೀಕೇಶಂ ಶತನಾಮಜಪಂ ಕುರು ॥ ೨೭ ॥**

**ಜಪಯಜ್ಞೇನ ವೈ ದೇವಿ ಕುರು ವ್ರತಮನುತ್ತಮಂ ।**
**ಅಶೂನ್ಯಶಯನಂ ನಾಮ ಮಹಾಪಾತಕಶೋಧನಂ ॥ ೨೮ ॥**

**ಸಮಾಚಷ್ಟೇ ಸ ಧರ್ಮಾತ್ಮಾ ಸರ್ವಜ್ಞಾನಪ್ರಕಾಶಕಂ ।**
**ಧ್ಯಾನಂ ಸ್ತೋತ್ರಂ ಸ್ವರೂಪಂ ಚ ವಿಷ್ಣೋಶ್ಚೈವ ಮಹಾತ್ಮನಃ ॥ ೨೯ ॥**

**॥ ವಿಷ್ಣುರುವಾಚ ॥**

**ತಸ್ಮಾತ್ಸಾ ಜಗೃಹೇ ಸರ್ವಂ ಸಂಸ್ಥಿತಾ ನಿರ್ಜನೇ ವನೇ ।**
**ಸರ್ವದ್ವಂದ್ವವಿನಿರ್ಮುಕ್ತಾ ಸಂಜಾತಾ ತಪಸಿ ಸ್ಥಿತಾ ॥ ೩೦ ॥**

**ವ್ರತಂ ಚಕ್ರೇ ಜಿತಾಹಾರಾ ನಿರಾಧಾರಾ ಸುದುಃಖಿತಾ ।**
**ಕಾಮಕ್ರೋಧವಿಹೀನಾ ಚ ವರ್ಗಂ ಸಂಯಮ್ಯ ನಿತ್ಯಶಃ ॥ ೩೧ ॥**

---

೨೭-೨೮. ಆದ್ದರಿಂದ ಮಹಾಪಾಪನಾಶಕವಾದ ಇದನ್ನು ಮಾಡು. ಹೃಷೀಕೇಶನನ್ನು ಧ್ಯಾನಿಸು. ಅವನ ಶತನಾಮಗಳನ್ನು ಜಪಿಸು. ಜಪದ ವ್ರತವನ್ನು ಮಾಡು. ಅಶೂನ್ಯಶಯನ ವ್ರತವು ಮಹಾಪಾಪಗಳನ್ನು ನಾಶಮಾಡುತ್ತದೆ. ಅದನ್ನು ಮಾಡು.

೨೯. ಆ ಹಕ್ಕಿಯು ಸರ್ವಜ್ಞಾನ ಪ್ರಕಾಶವಾದ ಆ ಧ್ಯಾನಶಾಸ್ತ್ರದ ಸ್ವರೂಪವನ್ನೂ ವಿಷ್ಣುವಿನ ಮಹಿಮೆಯನ್ನೂ ಹೇಳಿತು.

೩೦. ವಿಷ್ಣುವು ಹೇಳಿದನು:—ಆ ವಿಜನವಾದ ಕಾಡಿನಲ್ಲಿ ಆ ಪಕ್ಷಿಯಿಂದ ಎಲ್ಲವನ್ನೂ ತಿಳಿದುಕೊಂಡಳು. ಸುಖದುಃಖ, ಶೀತೋಷ್ಣಗಳ ದ್ವಂದಗಳಿಂದ ಬಿಡಲ್ಪಟ್ಟು ತಪಸ್ಸಿನಲ್ಲಿ ನಿರತಳಾದಳು.

೩೧. ಜಿತಾಹಾರಳಾಗಿ, ಕಷ್ಟಪಟ್ಟು ಕಾಮಕ್ರೋಧಗಳನ್ನು ಬಿಟ್ಟು, ಇಂದ್ರಿಯಗಳನ್ನು ನಿಗ್ರಹಿಸಿ ವ್ರತವನ್ನು ಮಾಡಿದಳು. ಇಂದ್ರಿಯವನ್ನು ಜಯಿಸಿ, ಮಹಾಮೋಹವನ್ನು ಬಿಟ್ಟು ತಪಸ್ಸು ಮಾಡಿದಳು.

**ಇಂದ್ರಿಯಾಣಾಂ ಮಹಾರಾಜ ಮಹಾಮೋಹಂ ನಿರಸ್ಯ ಚ ।**
**ಅಬ್ದೇ ಚತುರ್ಥಕೇ ಪ್ರಾಪ್ತೇ ಸುಪ್ರಸನ್ನೋ ಜನಾರ್ದನಃ ।**
**ತಸ್ಯೈ ಸಂದರ್ಶಯಾಮಾಸ ಸ್ವರೂಪಂ ವರದಃ ಪ್ರಭುಃ ॥ ೩೨ ॥**

**॥ ಸೂತ ಉವಾಚ ॥**

**ಇಂದ್ರನೀಲಘನಶ್ಯಾಮಂ ಶಂಖಚಕ್ರಗದಾಧರಂ ।**
**ಸರ್ವಾಭರಣಶೋಭಾಢ್ಯಂ ಪದ್ಮಹಸ್ತಂ ಮಹೇಶ್ವರಂ ॥ ೩೩ ॥**

**ಬದ್ಧಾಂಜಲಿಪುಟಾ ಭೂತ್ವಾ ವೇಪಮಾನಾ ನಿರಾಶ್ರಯಾ ।**
**ಉವಾಚ ಗದ್ಗದೈರ್ವಾಕ್ಯೈರ್ನಮಾಮ ಮಧುಸೂದನಂ ॥ ೩೪ ॥**

**ತೇಜಸಾ ತವ ದಿವ್ಯೇನ ಧ್ಯಾತುಂ ಶಕ್ನೋಮಿ ನೈವ ಹಿ ।**
**ದಿವ್ಯರೂಪೋ ಭವಾನ್ ಕಸ್ತ್ವಂ ತದ್ವದ ಕೃಪಯಾ ಪ್ರಭೋ ॥ ೩೫ ॥**

**ಕಥಯಸ್ವ ಪ್ರಸಾದೇನ ಕಿಮತ್ರ ತವ ಕಾರಣಂ ।**
**ಸರ್ವಮೇವ ಪ್ರಸಾದೇನ ಪ್ರಬ್ರವೀಹಿ ಮಹಾಮತೇ ॥ ೩೬ ॥**

---

೩೨. ಈರೀತಿ ನಾಲ್ಕುವರ್ಷವಾಗುತ್ತಲೂ ವಿಷ್ಣುವು ಪ್ರಸನ್ನನಾಗಿ ತನ್ನ ರೂಪವನ್ನು ಆಕೆಗೆ ತೋರಿಸಿದನು.

೩೩-೩೪. ಸೂತನು ಹೇಳಿದನು:—ಇಂದ್ರನೀಲದಂತಿರುವ ಬಣ್ಣವುಳ್ಳ, ಶಂಖಚಕ್ರಗದಾಧರನಾದ, ಸರ್ವಾಭರಣಗಳಿಂದ ಶೋಭಿತನಾದ, ಪದ್ಮಹಸ್ತನಾದ ವಿಷ್ಣುವನ್ನು ನೋಡಿ ಕೈಮುಗಿದುಕೊಂಡು ನಡುಗುತ್ತಾ ಆ ಮಧುಸೂದನನಿಗೆ ನಮಸ್ಕರಿಸಿ ಇಂತೆಂದಳು.

೩೫. ನಿನ್ನ ತೇಜಸ್ಸಿನಿಂದ ಧ್ಯಾನಮಾಡಲು ಅಸಾಧ್ಯವಾಗಿದೆ. ದಿವ್ಯರೂಪಧಾರಿಯಾದ ನೀನಾರು? ದಯವಿಟ್ಟು ಹೇಳು.

೩೬. ಇಲ್ಲಿ ನಿನಗೇನು ಕೆಲಸ? ಏಕೆ ಬಂದೆ? ಎಂಬುವನ್ನು ದಯವಿಟ್ಟು ಹೇಳು.

ದೇವಮೇವ ವಿಜಾನಾಮಿ ತೇಜಸಾ ಇಂಗಿತೈಸ್ತವ ।
ಜ್ಞಾನಹೀನಾ ಜಗನ್ನಾಥ ನ ಜಾನೇ ರೂಪನಾಮನೀ ॥ ೩೭ ॥

ಕಿಂ ಚ ಬ್ರಹ್ಮಾ ಭವಾನ್ವಿಷ್ಣುಃ ಕಿಂ ವಾ ಶಂಕರ ಏವ ವಾ ।
ಏವಮುಕ್ತ್ವಾ ಪ್ರಣಮ್ಯೈವ ದಂಡವದ್ಧರಣೀಂ ಗತಾ ।
ತಾಮುವಾಚ ಜಗನ್ನಾಥಃ ಪ್ರಣತಾಂ ರಾಜನಂದಿನೀಂ ॥ ೩೮ ॥

॥ ಶ್ರೀ ಭಗವಾನುವಾಚ ॥

ತ್ರಯಾಣಾಮಪಿ ದೇವಾನಾಮಂತರಂ ನಾಸ್ತಿ ಶೋಭನೇ ।
ಬ್ರಹ್ಮಾ ಸಮರ್ಚಿತೋ ಯೇನ ಶಂಕರೋ ವಾ ವರಾನನೇ ।
ತೇನಾಹಮರ್ಚಿತೋ ನಿತ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೩೯ ॥

ಏತೌ ಮಮಾಭಿನ್ನತರೌ ನಿತ್ಯಂ ಚಾಪಿ ತ್ರಿರೂಪವಾನ್ ।
ಅಹಂ ದೇವಿ ಹೃಷೀಕೇಶಃ ಕೃಪಯಾ ತವ ಚಾಗತಃ ॥ ೪೦ ॥

ಸ್ತವೇನಾನೇನ ಪುಣ್ಯೇನ ವ್ರತೇನ ನಿಯಮೇನ ಚ ।
ಸಂಜಾತಾ ಕಲ್ಮಷೈರ್ಹೀನಾ ವರಂ ವರಯ ಶೋಭನೇ ॥ ೪೧ ॥

---

೩೭. ನಿನ್ನ ತೇಜಸ್ಸನ್ನು ನೋಡಿದರೆ ದೇವರೆಂದು ಗೊತ್ತಾಗುತ್ತದೆ. ನಾನು ಅಜ್ಞಾನಿಯಾದುದರಿಂದ ನಿನ್ನ ರೂಪನಾಮಗಳನ್ನು ತಿಳಿಯಲಾರೆ. ಬ್ರಹ್ಮನೋ? ವಿಷ್ಣುವೋ? ಶಂಕರನೋ? ನೀನಾರು? ದಯವಿಟ್ಟು ಹೇಳು ಎಂದು

೩೮. ನಮಸ್ಕರಿಸಿದ ಆ ರಾಜಪುತ್ರಿಯನ್ನು ನೋಡಿ ಸ್ವಾಮಿಯು ಇಂತೆಂದನು.

೩೯ ಶ್ರೀ ಭಗವಂತನು ಹೇಳಿದನು:—ಅಮ್ಮಾ! ತ್ರಿಮೂರ್ತಿಗಳಲ್ಲಿ ಒಬ್ಬರೊಬ್ಬರಿಗೆ ಭೇದವಿಲ್ಲ. ಬ್ರಹ್ಮ, ಶಂಕರ ಇವರಿಬ್ಬರಲ್ಲಿ ಯಾರನ್ನು ಪೂಜಿಸಿದರೂ ನನ್ನನ್ನು ಪೂಜಿಸಿದಂತೆಯೇ ಆಗುತ್ತದೆ, ಇದರಲ್ಲಿ ಸಂಶಯವಿಲ್ಲ.

೪೦. ಅವರಿಬ್ಬರೂ ನನ್ನಿಂದ ಬೇರೆಯಲ್ಲ. ನಾನೇ ತ್ರಿಮೂರ್ತಿಯ ಅವತಾರಿಯು. ನಾನೇ ಹೃಷೀಕೇಶನು. ನಿನ್ನ ಮೇಲಿನ ಕೃಪೆಯಿಂದ ಬಂದಿದ್ದೇನೆ.

೪೧. ಈ ನಾಮಗಳ ಸ್ಮರಣೆಯಿಂದಲೂ ವ್ರತದಿಂದಲೂ ನಿಯಮದಿಂದಲೂ ನೀನು ಕಲ್ಮಷಹೀನಳಾಗಿದ್ದೀಯೆ. ವರವನ್ನು ಕೇಳಿಕೊ.

॥ ದಿವ್ಯಾದೇವ್ಯುವಾಚ ॥

ಜಯಾಜಿತ ಹೃಷೀಕೇಶ ಕೃಷ್ಣ ಕ್ಲೇಶಾಪಹಾರಕ ।
ನಮಾಮಿ ತೇ ಪದದ್ವಂದಂ ಮಾಮುದ್ಧರ ಭವಾರ್ಣವಾತ್ ॥ ೪೨ ॥

ಏಷ ಏವಾಸ್ತಿ ಮೇ ಕಾಮೋ ವರಣೀಯಃ ಪ್ರಸೀದ ಮೇ ।
ತವ ಪಾದೌ ಭಜಿಷ್ಯಾಮಿ ಭಕ್ತಿಂ ದೇಹಿ ಮಮಾನಘ ॥ ೪೩ ॥

ದರ್ಶಯಸ್ವ ಜಗನ್ನಾಥ ಮೋಕ್ಷಮಾರ್ಗಂ ನಿರಾಮಯಂ ।
ದಾಸತ್ವಂ ದೇಹಿ ವೈಕುಂಠೇ ಯದಿ ತುಷ್ಟೋ ಜನಾರ್ದನ ॥ ೪೪ ॥

॥ ಭಗವಾನುವಾಚ ॥

ಏವಮಸ್ತು ಮಹಾಭಾಗೇ ನಿರ್ಧೂತಾಶೇಷಕಿಲ್ಬಿಷಾ ।
ವೈಷ್ಣವಂ ಪರಮಂ ಲೋಕಂ ದುರ್ಲಭಂ ಯೋಗಿನಾಂ ಸದಾ ॥ ೪೫ ॥

ಗಚ್ಛ ಗಚ್ಛ ಮಹಾಲೋಕಂ ಪ್ರಸಾದಾನ್ಮಮ ಸಾಂಪ್ರತಂ ।
ಏವಮುಕ್ತ್ವಾ ಮಹಾಭಾಗಾ ಮಾಧವೇನ ಮಹಾತ್ಮನಾ ॥ ೪೬ ॥

---

೪೨. ದಿವ್ಯಾದೇವಿಯು ಹೇಳಿದಳು :—ಸರ್ವಕ್ಲೇಶಾಪರಿಹಾರಕನಾದ ಹೃಷೀಕೇಶನೇ, ಜಯವಾಗಲಿ. ನಿನ್ನ ಪದದ್ವಂದ್ವಕ್ಕೆ ನಮಸ್ಕಾರವು. ನನ್ನನ್ನು ಸಂಸಾರದಿಂದ ಉದ್ಧರಿಸು.

೪೩. ನಿನ್ನ ಪಾದಗಳನ್ನು ಭಜಿಸುವ ಭಕ್ತಿಯನ್ನು ದಯಪಾಲಿಸು. ಇದೇ ನಾನು ಕೇಳಿಕೊಳ್ಳುವ ವರವು.

೪೪. ಓ ಜಗನ್ನಾಥನೇ! ತೊಂದರೆ ರಹಿತವಾದ ಮೋಕ್ಷಮಾರ್ಗವನ್ನು ತೋರಿಸು. ನಿನಗೆ ಸಂತೋಷವಾಗಿದ್ದರೆ ವೈಕುಂಠದಲ್ಲಿ ದಾಸತ್ವವನ್ನು ಕೊಡು.

೪೫-೪೬. ಭಗವಂತನು ಹೇಳಿದನು :—ಅಮ್ಮಾ! ಹಾಗೇ ಆಗಲಿ. ಪಾಪವೆಲ್ಲವನ್ನೂ ಕಳೆದುಕೊಂಡಿದ್ದೀಯೆ. ಯೋಗಿಗಳಿಗೂ ದುರ್ಲಭವಾದ, ಉತ್ಕೃಷ್ಟವಾದ ವೈಷ್ಣವಲೋಕವನ್ನು ನನ್ನ ಅನುಗ್ರಹದಿಂದ ಹೊಂದುಹೋಗು. ಎಂದು ಆ ಸ್ವಾಮಿಯು ಆಕೆಯನ್ನು ಕುರಿತು ಹೇಳಿದನು.

**ದಿವ್ಯಾದೇವೀ ಹ್ಯಭೂದ್ದಿವ್ಯಾ ಸೂರ್ಯತೇಜಃಸಮಪ್ರಭಾ ।**
**ಪಶ್ಯತಾಂ ಸರ್ವಲೋಕಾನಾಂ ದಿವ್ಯಾಭರಣಭೂಷಿತಾ ॥ ೪೭ ॥**

**ದಿವ್ಯಮಾಲಾನ್ವಿತಾ ಸಾ ಚ ಮುಕ್ತಾಹಾರವಿಲಂಬಿನೀ ।**
**ಗತಾ ಸಾ ವೈಷ್ಣವಂ ಲೋಕಂ ದಾಹಪ್ರಲಯವರ್ಜಿತಂ ॥ ೪೮ ॥**

**ಉಜ್ಜ್ವಲಸ್ತು ಸಮಾಯಾತಃ ಸ್ವಗೃಹಂ ಹರ್ಷಸಂಯುತಃ ।**
**ತತ್ಸರ್ವಂ ಕಥಯಾಮಾಸ ಪಿತರಂ ಪ್ರತಿ ಸತ್ತಮಃ ॥ ೪೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಅಷ್ಟಾಶೀತಿತಮೋಽಧ್ಯಾಯಃ**



---

೪೭. ಒಡನೆಯೇ ಆ ದಿವ್ಯಾದೇವಿಯು ಸೂರ್ಯತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿ ಪ್ರಕಾಶಿಸಿದಳು.

೪೮. ದಿವ್ಯಾಭರಣಗಳನ್ನು ತೊಟ್ಟು, ದಿವ್ಯವಾದ ಮಾಲೆಯನ್ನು ಹಾಕಿಕೊಂಡು, ಮುತ್ತಿನ ಹಾರವನ್ನು ಧರಿಸಿ, ದುಃಖವರ್ಜಿತವಾದ ವಿಷ್ಣುಲೋಕವನ್ನು ಕುರಿತು ಎಲ್ಲರೂ ನೋಡುತ್ತಿದ್ದಂತೆಯೇ ಹೋದಳು.

೪೯. ಉಜ್ವಲನೂ ಕೂಡ ಸಂತೋಷದಿಂದ ಹಿಂತಿರಿಗಿ ಬಂದು ತನ್ನ ತಂದೆಗೆ ಎಲ್ಲವನ್ನೂ ನಿವೇದಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ಎಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕೋನನವತಿತಮೋಽಧ್ಯಾಯಃ

॥ ವಿಷ್ಣುರುವಾಚ ॥

ಕುಂಜಲಸ್ತು ತತ್ರಶ್ರುತ್ವಾ ದ್ವಿತೀಯಂ ವಾಕ್ಯಮಬ್ರವೀತ್ ।
ಭವಾನ್ಕಥಯ ತತ್ಸರ್ವಂ ಕಿಮಪೂರ್ವಂ ಚ ದೃಷ್ಟವಾನ್ ।
ಶ್ರುತವಾಂಶ್ಚಾಪ್ಯಪೂರ್ವಂ ವಾ ಶ್ರೋತುಕಾಮೋಽಸ್ಮಿ ಸಾಂಪ್ರತಂ ॥ ೧ ॥

ಏವಂ ಪಿತ್ರಾ ಸಮಾದಿಷ್ಟಃ ಕುಂಜಲೇನ ಸಮುಜ್ಜ್ವಲಃ ।
ಪಿತರಂ ಪ್ರತ್ಯುವಾಚಾಥ ವಿನಯಾವನತಸ್ತತಃ ॥ ೨ ॥

॥ ಸಮುಜ್ಜ್ವಲ ಉವಾಚ ॥

ಹಿಮವಂತಂ ನಗಶ್ರೇಷ್ಠಂ ದೇವವೃಂದನಿಷೇವಿತಂ ।
ಆಹಾರಾರ್ಥಂ ಪ್ರಗಚ್ಛಾಮಿ ಭವತಶ್ಚಾತ್ಮನಃ ಪಿತಃ ॥ ೩ ॥

---

## ಎಂಭತ್ತೊಂಭತ್ತನೆಯ ಅಧ್ಯಾಯವು

೧-೨. ವಿಷ್ಣುವು ಹೇಳಿದನು:—ಕುಂಜಲನು ಆ ಮಾತನ್ನು ಕೇಳಿ ಎರಡನೆ ಯವನನ್ನು ಕುರಿತು ಕೇಳಿದನು. ಅಲ್ಲಿ ನೀನೇನು ಅಪೂರ್ವವಿಷಯಗಳನ್ನು ನೋಡಿದೆ? ಏನನ್ನು ಕೇಳಿದೆ? ಅವನ್ನು ಕೇಳಬೇಕೆಂದು ಇಷ್ಟಪಡುತ್ತೇನೆ. ಹೇಳು. ಎಂದು ತಂದೆಯು ಕೇಳಲು, ಸಮುಜ್ವಲನು ನಮ್ರನಾಗಿ ತಂದೆಗೆ ಹೇಳಿದನು.

೩. ಸಮುಜ್ವಲನು ಹೇಳಿದನು:—ದೇವತೆಗಳು ಸೇವಿಸುತ್ತಿರುವ ಹಿಮವತ್ಪರ್ವತಕ್ಕೆ ನಿನ್ನ ಮತ್ತು ನನ್ನ ಆಹಾರಕ್ಕೋಸ್ಕರ ಹೋಗುತ್ತಲೇ ಇರುವೆನು. ಅಲ್ಲಿ ದಿನವೂ ಯಾರೂ ಕಾಣದ, ಯಾರೂ ಕೇಳದ ಆಶ್ಚರ್ಯಗಳನ್ನು ನೋಡುತ್ತೇನೆ.

ಪಶ್ಯಾಮಿ ಕೌತುಕಂ ನಿತ್ಯಂ ಯನ್ನ ದೃಷ್ಟಂ ಶ್ರುತಂ ಕದಾ ।
ಗಂಧರ್ವಋಷಿಸಂಕೀರ್ಣಮಪ್ಸರೋಭಿಃ ಪ್ರಶೋಭಿತಂ ।
ಬಹುಕೌತುಕಶೋಭಾಢ್ಯಂ ಮಂಗಳಂ ಮಂಗಳೈರ್ಯುತಂ ॥ ೪ ॥

ಬಹುಪುಷ್ಪಫಲೋಪೇತೈರ್ವನೈರ್ನಾನಾವಿಧೈಸ್ತಥಾ ।
ಅನೇಕಕೌತುಕಭರೈರ್ಮಾನಸಂ ಪರಿರಾಜತೇ ॥ ೫ ॥

ತತ್ರ ದೃಷ್ಟಂ ಮಯಾ ತಾತ ಅಪೂರ್ವಂ ಕೌತುಕಂ ತದಾ ।
ಬಹುಹಂಸಸಮಾಕೀರ್ಣೋ ಹಂಸ ಏಕಸ್ಸಮಾಗತಃ ॥ ೬ ॥

ಸ ಚ ಕೃಷ್ಣೋ ಮಹಾಭಾಗ ತ್ರಯೋಽಪ್ಯನ್ಯೇ ಸಮಾಗತಾಃ ।
ಸಿತೇತರೈಶ್ಚಂಚುಪಾದೈರನ್ಯತಃ ಶುಕ್ಲವಿಗ್ರಹಾಃ ॥ ೭ ॥

ಚತಸ್ರಸ್ತತ್ರ ವೈ ಭಾರ್ಯಾ ರೌದ್ರಾಕಾರಾ ವಿಭೀಷಣಾಃ ।
ದಂಷ್ಟ್ರಾಕರಾಳಸಂಕ್ರೂರಾ ಊರ್ಧ್ವಕೇಶ್ಯೋ ಭಯಾನಕಾಃ ॥ ೮ ॥

---

೪-೫. ಗಂಧರ್ವರು, ಋಷಿಗಳು, ಅಪ್ಸರಸ್ಸುಗಳಿಂದ ಪ್ರಕಾಶಿಸುವ, ಬಹಳ ಆಶ್ಚರ್ಯಯುಕ್ತವಾದ, ಮಂಗಳಕರವಾದ, ಮಂಗಳದಿಂದ ಕೂಡಿದ, ಹಣ್ಣುಹೂಗಳಿಂದ ಕೂಡಿದ ಬಗೆಬಗೆಯ ಮರಗಳಿಂದಲೂ ಅನೇಕವಾದ ಆಶ್ಚರ್ಯಗಳಿಂದಲೂ ಅಲ್ಲಿ ಮಾನಸಸರೋವರವು ಪ್ರಕಾಶಿಸುತ್ತದೆ.

೬. ಅಲ್ಲಿ ಒಂದು ಅಪೂರ್ವವನ್ನು ನೋಡಿದೆ. ಬಹಳ ಹಂಸಗಳೊಡನೆ ಕೂಡಿದ ಒಂದು ಹಂಸವು ಅಲ್ಲಿಗೆ ಬಂದಿತು.

೭. ಆ ಹಂಸವು ಕಪ್ಪಾಗಿತ್ತು. ಇನ್ನು ಮೂರು ಬಂದವು. ಅವುಗಳಿಗೆ ಕಪ್ಪಗಿರುವ ಕೊಕ್ಕು ಕಾಲುಗಳೂ ಬೆಳ್ಳನೆಯ ದೇಹವೂ ಇದ್ದವು.

೮. ಆ ನಾಲ್ಕು ಹಂಸಗಳ ಹೆಂಡಿರು ಆ ಮೇಲೆ ಬಂದವು. ಅವುಗಳಿಗೆ ಕ್ರೂರವಾದ ಹಲ್ಲುಗಳೂ ಮೇಲು ಮುಖಕ್ಕೆ ನಿಂತುಕೊಂಡಿರುವ ಕೂದಲೂ ಇದ್ದವು. ಗಂಡು ಹಂಸಗಳನಂತರ ಅವು ಆ ಸರಸ್ಸಿಗೆ ಬಂದವು.

ಪಶ್ಚಾತ್ತೇಷಾಂ ಸಮಾಯಾತಾಸ್ತಸ್ಮಿನ್ಸರಸಿ ಮಾನಸೇ ।
ಕೃಷ್ಣಹಂಸಾಸ್ತು ಸಂಸ್ನಾತಾ ಮಾನಸೇ ತಾತ ಮತ್ಪುರಃ ।
ವಿಭ್ರಾಂತಾಃ ಪರಿತಶ್ಚಾನ್ಯೇ ನ ಸ್ನಾತಾಸ್ತತ್ರಮಾನಸೇ ॥ ೯ ॥

ಕೃಷ್ಣಾನ್ ಹಂಸಾಂಸ್ತು ಸಂಸ್ನಾತಾನ್ ಜಹಸುಸ್ತಾಸ್ತ್ರಿಯಸ್ತದಾ ।
ತತಃ ಪೂರ್ವಂ ವಿನಿಷ್ಕ್ರಾಂತೋ ಹಂಸ ಏಕೋ ಮಹಾತನುಃ ॥ ೧೦ ॥

ಪಶ್ಚಾತ್ತ್ರಯೋ ವಿನಿಷ್ಕ್ರಾಂತಾಸ್ತೈಶ್ಚಾಹಂ ಸಮುಪೇಕ್ಷಿತಃ ।
ವಿಹಾಯಸಾ ಪ್ರಯಾತಾಸ್ತೇ ವಿವದಂತಃ ಪರಸ್ಪರಂ ॥ ೧೧ ॥

ತಾಸ್ತು ಸ್ತ್ರಿಯೋ ಮಹಾಭೀತಾಃ ಸಮಂತಾದ್ದಿವಿ ಬಭ್ರಮುಃ ।
ವಿಂಧ್ಯಸ್ಯ ಶಿಖರೇ ಪುಣ್ಯೇ ವೃಕ್ಷಚ್ಛಾಯಾಸು ಪಕ್ಷಿಣಃ ॥ ೧೨ ॥

ನಿಷಣ್ಣಾಸ್ತತ್ರ ತೇ ಸರ್ವೇ ದಗ್ಧಾ ದುಃಖೈಸ್ಸುದಾರುಣೈಃ ।
ತೇಷಾಂ ಸಂಪಶ್ಯಮಾನಾನಾಂ ಲುಬ್ಧಕಸ್ಸಮುಪಾಗತಃ ॥ ೧೩ ॥

ಮೃಗಯಾಂ ಕ್ರೀಡಯಿತ್ವಾ ತು ಬಾಣಪಾಣಿರ್ಧನುರ್ಧರಃ ।
ಶಿಲಾತಲಂ ಸಮಾಸಾದ್ಯ ನಿಷಸಾದ ಸುಖೇನ ವೈ ॥ ೧೪ ॥

---

೯. ಕೃಷ್ಣಹಂಸಗಳು ಅಲ್ಲಿ ಸ್ನಾನಮಾಡಿದವು. ಮಿಕ್ಕವು ಆಶ್ಚರ್ಯಗೊಂಡು ಸ್ನಾನ ಮಾಡಲಿಲ್ಲ.

೧೦-೧೧. ಆ ಹೆಣ್ಣು ಹಂಸಗಳು ಸ್ನಾನಮಾಡಿ ಕಪ್ಪುಹಂಸಗಳನ್ನು ನೋಡಿ ಹಾಸ್ಯಮಾಡಿದವು. ಅದಕ್ಕೆ ಮೊದಲೇ ಒಂದು ದೊಡ್ಡ ಹಂಸವು ಹೊರಟು ಹೋಯಿತು. ಆ ಮೇಲೆ ಮಿಕ್ಕ ಮೂರು ಹಂಸಗಳೂ ಹೊರಟುಹೋದವು. ಅವು ಆಕಾಶದಲ್ಲಿ ಹೋಗುತ್ತ ಒಂದಕ್ಕೊಂದು ವಾಗ್ವಾದಮಾಡುತ್ತಿದ್ದವು. ಅದನ್ನು ನಾನು ನೋಡುತ್ತಿದ್ದೆ.

೧೨-೧೩. ಆ ಹೆಣ್ಣುಹಂಸಗಳು ಹೆದರಿ ಅಂತರಿಕ್ಷದಲ್ಲಿ ಎಲ್ಲಾ ಕಡೆಯಲ್ಲಿಯೂ ಸುತ್ತುತ್ತಿದ್ದವು. ಕಡೆಗೆ ದುಃಖಪಟ್ಟು ವಿಂಧ್ಯಪರ್ವತದ ಒಂದು ಮರದ ಕೆಳಗೆ ನೆರಳಿನಲ್ಲಿ ಕುಳಿತವು. ಅವು ನೋಡುತ್ತಿದ್ದಂತೆಯೇ ಒಬ್ಬ ಬೇಡನು ಬಂದನು.

೧೪. ಆ ಬೇಡನು ಬೇಟೆಯಾಡಿ ಬಾಣವನ್ನು ಕೈಯಲ್ಲಿ ಹಿಡಿದಿದ್ದನು. ಅಲ್ಲಿ ಒಂದು ಕಲ್ಲುಚಪ್ಪಡಿಯ ಮೇಲೆ ಸುಖವಾಗಿ ಕುಳಿತನು.

ಪಶ್ಚಾದ್ಭಿಲ್ಲೀ ಸಮಾಯಾತಾ ಅನ್ನಮಾದಾಯ ಚೋದಕಂ ।
ಸ್ವಪ್ರಿಯಂ ಪಶ್ಯತೇ ತಾವತ್ಸದೃಶೈರ್ಲಕ್ಷಣೈರ್ಯುತಂ ॥ ೧೫ ॥

ಅತ್ಯದ್ಭುತಂ ತಯಾ ದೃಷ್ಟಂ ಸ್ವಕಾಂತಸ್ತೇಜಸಾನ್ವಿತಃ ।
ದಿವ್ಯತೇಜಸ್ಸಮಾಕ್ರಾಂತೋ ಯಥಾ ಸೂರ್ಯೋ ದಿವಿ ಸ್ಥಿತಃ ।
ಪುಂಸಮನ್ಯಂ ಪರಿಜ್ಞಾಯ ತಂ ಪರಿತ್ಯಜ್ಯ ಸರ್ಪಿತಾ ॥ ೧೬ ॥

॥ ವ್ಯಾಧ ಉವಾಚ ॥

ಏಹ್ಯೇಹಿ ತ್ವಂ ಪ್ರಿಯೇ ಚಾತ್ರ ಕಸ್ಮಾನ್ಮಾಂ ತ್ವಂ ನ ಪಶ್ಯಸಿ ।
ಕ್ಷುಧಯಾ ಪೀಡ್ಯಮಾನೋಽಹಂ ತ್ವಾಮಹಂ ಚಾವಲೋಕಯೇ ॥ ೧೭ ॥

ತಸ್ಯ ವಾಕ್ಯಂ ಸಮಾಕರ್ಣ್ಯ ಶೀಘ್ರಂ ವ್ಯಾಧೀ ಸಮಾಗತಾ ।
ಭರ್ತುಃ ಪಾರ್ಶ್ವಂ ಸಮಾಸಾದ್ಯ ವಿಸ್ಮಿತಾ ಚಾಭವತ್ತದಾ । ॥ ೧೮ ॥

ಕೋಽಯಂ ತೇಜಸ್ಸಮಾಕಾರೋ ದೇವೋಪಮಃ ಸಮಾಹ್ವಯೇತ್ ।
ತಮುವಾಚ ತತೋ ವ್ಯಾಧೀ ಭರ್ತಾರಂ ದೀಪ್ತತೇಜಸಂ ।
ಅತ್ರ ಕಿಂ ತೇ ಕೃತಂ ವೀರ ಯದ್ಭವಾನ್ ದಿವ್ಯಲಕ್ಷಣಃ ॥ ೧೯ ॥

---

೧೫-೧೬. ಆ ಮೇಲೆ ಬೇಡತಿಯು ಅನ್ನವನ್ನೂ ನೀರನ್ನೂ ತೆಗೆದುಕೊಂಡು ಬಂದಳು. ಅಲ್ಲಿ ಕುಳಿತಿರುವ ತನ್ನ ಗಂಡನನ್ನು ಮೊದಲಿನ ಲಕ್ಷಣಗಳಿಂದ ಗುರ್ತಿಸಿದಳು. ಆದರೆ ಅವನಲ್ಲಿ ಒಂದು ಅದ್ಭುತವಿತ್ತು. ಅವನು ಮೊದಲಿನಂತಿರದೆ ಅದ್ಭುತವಾದ ತೇಜಸ್ಸಿನಿಂದ ಕೂಡಿ ಅಂತರಿಕ್ಷದಲ್ಲಿ ಸೂರ್ಯನು ಇರುವಂತಿದ್ದನು. ಆಗ ಆಕೆಯು ಈತನು ಬೇರೆಯವನೆಂದು ತಿಳಿದು ಅವನನ್ನು ಬಿಟ್ಟು ಮುಂದಕ್ಕೆ ಹೋದಳು.

೧೭. ಬೇಡನು ಹೇಳಿದನು:—ಎಲೈ ಪ್ರಿಯಳೇ! ಇಲ್ಲಿ ಬಾ. ನನ್ನನ್ನೇಕೆ ನೋಡಲಿಲ್ಲ? ಹಸಿವಿನಿಂದ ಕೂಡಿಕೊಂಡು ನಿನ್ನನ್ನೇ ಎದುರುನೋಡುತ್ತಿದ್ದೇನೆ. ಎನ್ನಲು,

೧೮. ಆ ಬೇಡನ ಮಾತನ್ನು ಕೇಳಿ ಬೇಡತಿಯು ಅವನ ಬಳಿಗೆ ಬಂದಳು. ಒಂದು ನೋಡಿ ತೇಜಸ್ಸಿನ ಸಮವಾದ ಆಕಾರವುಳ್ಳ, ದೇವತೆಯಂತಿರುವ ನನ್ನನ್ನು ಕರೆಯುತ್ತಿರುವ ಈತನಾರಿರಬಹುದು, ಎಂದು ಆಶ್ಚರ್ಯಪಟ್ಟಳು.

೧೯. ಎಲೈ ವೀರನೇ, ನೀನು ದಿವ್ಯವಾದ ಲಕ್ಷಣವನ್ನು ಹೊಂದಿದ್ದೀಯಲ್ಲ. ನೀನು ಇಲ್ಲಿ ಏನು ಮಾಡಿದೆ? ಎಂದು ಗಂಡನನ್ನು ಪ್ರಶ್ನಿಸಿದಳು.

॥ ಸೂತ ಉವಾಚ ॥

ಏವಮಾಭಾಷಿತೋ ವ್ಯಾಧ್ಯಾ ವ್ಯಾಧಃ ಪ್ರಿಯಾಮಭಾಷತ ।
ಅಹಂ ತೇ ವಲ್ಲಭಃ ಕಾಂತೇ ಭವತೀ ಚ ಮಮ ಪ್ರಿಯಾ ॥ ೨೦ ॥

ಕಸ್ಮಾತ್ತ್ವಾಂ ನೈವ ಜಾನಾಸಿ ಕಥಂ ಶಂಕಾಂ ಪ್ರವರ್ತಯೇಃ ।
ಕ್ಷುಧಯಾ ಪೀಡ್ಯಮಾನೋಽಹಂ ಪಯಾಶ್ಚಾನ್ನಂ ಪ್ರದೀಯತಾಂ ॥ ೨೧ ॥

॥ ವ್ಯಾಧ್ಯುವಾಚ ॥

ಬರ್ಬರಃ ಕೃಷ್ಣವರ್ಣಶ್ಚ ರಕ್ತಾಕ್ಷಃ ಕೃಷ್ಣಕಂಚುಕಃ ।
ಈದೃಶಶ್ಚಾಸ್ತಿ ಮೇ ಭರ್ತಾ ಸರ್ವಸತ್ತ್ವಭಯಂಕರಃ ॥ ೨೨ ॥

ಭವಾನ್ಕೋ ದಿವ್ಯದೇಹಸ್ತು ಪ್ರಿಯೇತ್ಯುಕ್ತ್ವಾ ಸಮಾಹ್ವಯೇತ್ ।
ಏವಂ ಮೇ ಸಂಶಯಂ ಜಾತಂ ವದ ಸತ್ಯಂ ಮಮಾಗ್ರತಃ ॥ ೨೩ ॥

ಕುಲಂ ನಾಮ ಸ್ವಕಂ ಗೋತ್ರಂ ಕ್ರೀಡಾಲಿಂಗಂ ತಥೈವ ಚ ।
ಸಮಾಚಷ್ಟೇ ಪ್ರಿಯಾಯಾಸ್ತು ತಸ್ಯಾಃ ಪ್ರತ್ಯಯ ಆಗತಃ ॥ ೨೪ ॥

---

೨೦-೨೧. ಸೂತನು ಹೇಳಿದನು:—ಆ ಬೇಡತಿಯು ಹೀಗೆ ಕೇಳಲು ಬೇಡನು ಹೇಳಿದನು. ಕಾಂತೆಯೇ, ನಾನು ನಿನ್ನ ಗಂಡನು. ನೀನು ನನ್ನ ಹೆಂಡತಿ. ನಿನಗೇತಕ್ಕೆ ನನ್ನ ಗುರುತು ಸಿಕ್ಕಲಿಲ್ಲ? ಸಂದೇಹಕ್ಕೆ ಕಾರಣವೇನು? ನನಗೆ ಹಸಿವು ಬಾಧಿಸುತ್ತದೆ. ಅನ್ನವನ್ನೂ ನೀರನ್ನೂ ಕೊಡು.

೨೨. ಬೇಡತಿಯು ಹೇಳಿದಳು:—ತಲೆಕೂದಲು ಕೆಂಚಗೂ ಮೈಬಣ್ಣ ಕಪ್ಪಗೂ ಕಣ್ಣು ಕೆಂಪಗೂ ಇದ್ದುಕೊಂಡಿರುವನು ಮತ್ತುಕಪ್ಪುಬಣ್ಣದ ಅಂಗಿಯನ್ನು ಹಾಕಿಕೊಳ್ಳುವನು. ಈ ರೀತಿಯಾಗಿರುವನು ನನ್ನ ಗಂಡನು. ಅಲ್ಲದೆ ಅವನನ್ನು ನೋಡಿದರೆ ಎಲ್ಲಾ ಪ್ರಾಣಿಗಳಿಗೂ ಹೆದರಿಕೆಯಾಗುತ್ತವೆ

೨೩. ಈ ದಿವ್ಯದೇಹವುಳ್ಳ ನೀನಾರು? ಪ್ರಿಯೆ, ಎಂದು ಕರೆಯುತಿರುವಿಯಲ್ಲಾ. ಏಕೆ? ಈ ರೀತಿಯಾದ ಸಂಶಯವು ನನಗುಂಟಾಗಿದೆ. ನಿಶ್ಚಯವಾದ ವಿಷಯವನ್ನು ನನ್ನ ಮುಂದೆ ಹೇಳು.

೨೪. ತನ್ನ ಕುಲ, ಗೋತ್ರ, ಹೆಸರು, ತಾನು ಕ್ರೀಡಿಸುತ್ತಾ ಇದ್ದಾಗ ಆದ ಗುರುತುಗಳು ಇವೆಲ್ಲವನ್ನೂ ಹೇಳಲು ಆಕೆಗೆ ಈತನು ತನ್ನ ಗಂಡನೆಂಬ ನಂಬುಗೆ ಬಂದಿತು.

**ಪ್ರತ್ಯುವಾಚಾಥ ಸಾ ವ್ಯಾಧೀ ಭರ್ತಾರಂ ಹೃಷ್ಟಮಾನಸಾ ।**
**ಕಸ್ಮಾತ್ತ್ವೇದೃಶಃ ಕಾಯಃ ಶ್ವೇತಕಂಚುಕಧಾರಕಃ ॥ ೨೫ ॥**

**ಕಥಂ ಜಾತಃ ಸಮಾಚಕ್ಷ್ವ ಮಹಾತೇಜಸ್ಸಮನ್ವಿತಃ ।**

**॥ ಸೂತ ಉವಾಚ ॥**

**ಏವಂ ಸಂಪೃಚ್ಛ್ಯಮಾನಸ್ತು ಭಾರ್ಯಯಾ ಮೃಗಘಾತಕಃ ।**
**ಪ್ರತ್ಯುವಾಚ ತತೋ ಲುಬ್ಧಸ್ತಾಂ ಪ್ರಿಯಾಂ ಸುಖದಾಯಿನೀಂ ॥ ೨೬ ॥**

**ನರ್ಮದೋತ್ತರಕೂಲೇ ತು ಸಂಗಮಶ್ಚಾಸ್ತಿ ಸುವ್ರತೇ ।**
**ಆತಪೇನಾಕುಲೋ ಜೀವೋ ಮಮ ಜಾತಸ್ತು ಸುಪ್ರಿಯೇ ॥ ೨೭ ॥**

**ಅಸ್ಮಿನ್ಹಿ ಸಂಗಮೇ ಕಾಂತೇ ಶ್ರಮಶ್ರಾಂತೋಽಸ್ಮಿ ಸತ್ವರಂ ।**
**ಗತಃ ಸ್ನಾತ್ವಾ ಜಲಂ ಪೀತ್ವಾ ಪಶ್ಚಾದಿಹ ಸಮಾಗತಃ ॥ ೨೮ ॥**

**ತದಾ ಪ್ರಭೃತಿ ಮೇ ಕಾಯ ಈದೃಶಸ್ತೇಜಸಾವೃತಃ ।**
**ಸಂಜಾತೋ ಬಹುಶೋಭಾಢ್ಯಃ ಕಂಚುಕಃ ಸುಪ್ರಭಾಂ ಗತಃ ॥ ೨೯ ॥**

---

೨೫. ಆಗ ಆ ಬೇಡತಿಯು ಸಂತೋಷಗೊಂಡು ನಿನಗೆ ಈ ರೀತಿಯಾದ ದೇಹವು ಬರಲು ಕಾರಣವೇನು? ಬಿಳಿಯ ಅಂಗಿ ಹೇಗೆ ಬಂತು? ಈ ಮಹಾ ತೇಜಸ್ಸು ಹೇಗೆ ಬಂದಿತು? ಎಂದು ಕೇಳಿದಳು.

೨೬. ಸೂತನು ಹೇಳಿದನು: —ಹೀಗೆ ಕೇಳಲು ಆ ಬೇಡನು ಹೆಂಡತಿಯನ್ನು ಕುರಿತು ಹೇಳಿದನು.

೨೭-೨೮. ನರ್ಮದಾ ನದಿಯ ಉತ್ತರದ ದಡದಲ್ಲಿ ಒಂದು ಸಂಗಮವಿದೆ. ಅಲ್ಲಿ ಬಿಸಿಲು ಹೆಚ್ಚಾದ್ದರಿಂದ ನನ್ನ ಜೀವವು ಆಯಾಸಗೊಂಡಿತು. ಆ ಶ್ರಮವನ್ನು ನಾಶಮಾಡಿಕೊಳ್ಳಲು ಆ ಸಂಗಮಕ್ಕೆ ಹೋಗಿ ಸ್ನಾನಮಾಡಿ ನೀರನ್ನು ಕುಡಿದು ಇಲ್ಲಿಗೆ ಆಮೇಲೆ ಬಂದೆನು.

೨೯. ಅದುಮೊದಲು ನನ್ನ ದೇಹವು ಈ ರೀತಿಯಾದ ತೇಜಸ್ಸಿನಿಂದ ಕೂಡಿದೆ ಅಂಗಿಯೂ ಕೂಡ ಒಳ್ಳೆಯ ಕಾಂತಿಯುಳ್ಳದ್ದಾಗಿದೆ.

ತೇನಾಖ್ಯಾತೇ ಕುಲಾದೌ ಚ ಪ್ರತ್ಯಕ್ಷಂ ಲಕ್ಷಿತೇ ತಥಾ ।
ನಿಶ್ಚಿತ್ಯ ಸಂಗಮೇ ಪುಣ್ಯಂ ವಿಜ್ಞಾತಂ ಚ ತಯಾ ತತಃ ॥ ೩೦ ॥

ಪ್ರತ್ಯುವಾಚಾಥ ಭರ್ತಾರಂ ಸಂಗಮಂ ಮಮ ದರ್ಶಯ ।
ತವ ಪಶ್ಚಾತ್ಪ್ರದಾಸ್ಯಾಮಿ ಭೋಜನಂ ಮಾನಸಂಯುತಂ ॥ ೩೧ ॥

ತತ್ಯುಕ್ತಃ ಪ್ರಿಯಯಾ ವ್ಯಾಧಃ ಸತ್ವರಂ ಪ್ರಜಗಾಮ ಹ ।
ಸಂಗಮೋ ದರ್ಶಿತಸ್ತಸ್ಯೈ ತೇನಾಸೌ ಪಾಪನಾಶನಃ ॥ ೩೨ ॥

ಸಭಾರ್ಯಾಸ್ತೇ ಮಹಾಭಾಗ ಪಕ್ಷಿಣೋಽಲಘುವಿಕ್ರಮಾಃ ।
ತಾಭ್ಯಾಂ ಸಾರ್ಧಂ ಯಯುಃ ಸರ್ವೇ ರೇವಾಸಂಗಮಮುತ್ತಮಂ ॥ ೩೩ ॥

ತೇಷಾಂ ತು ಪಶ್ಯಮಾನಾನಾಂ ಪಕ್ಷಿಣಾಂ ಮಮ ಪಶ್ಯತಃ ।
ತಯಾ ವಿಸ್ಮಾಪಿತೋ ಭರ್ತಾ ಪುನಃ ಸ್ನಾತಾ ಹಿ ಸಾಪಿ ಚ ॥ ೩೪ ॥

---

೩೦. ಅವನು ಹೇಳಿದ ತನ್ನ ಕುಲ ಮುಂತಾದುವನ್ನು ಕೇಳಿ ತಾನೂ ಪ್ರತ್ಯಕ್ಷವಾಗಿ ನೋಡಿ, ಅನಂತರ ಆ ಸಂಗಮದಲ್ಲಿ ಪುಣ್ಯವಿದೆಯೆಂದು ಆಕೆಯು ಗೊತ್ತು ಮಾಡಿಕೊಂಡಳು.

೩೧. ಆಮೇಲೆ ಗಂಡನನ್ನು ಕುರಿತು ನನಗೆ ಆ ಸಂಗಮವನ್ನು ತೋರಿಸು. ಆ ಮೇಲೆ ನಿನಗೆ ಗೌರವಯುತವಾಗಿ ಭೋಜನವನ್ನು ಬಡಿಸುತ್ತೇನೆ ಎಂದಳು.

೩೨. ಈ ರೀತಿ ಹೇಳುತ್ತಲೂ ಆಕೆಯನ್ನು ಕರೆದುಕೊಂಡು ಜಾಗ್ರತೆ ಬೇಡನು ಅಲ್ಲಿಗೆ ಹೋದನು. ತಾನು ಯಾವುದರಿಂದ ಪಾಪವನ್ನು ಕಳೆದುಕೊಂಡಿದ್ದನೋ ಆ ಸಂಗಮವನ್ನು ಆಕೆಗೆ ತೋರಿಸಿದು.

೩೩. ಆ ಪಕ್ಷಿಗಳೂ ಕೂಡ ಜಾಗ್ರತೆಯಾಗಿ ಆ ಬೇಡನು ಹೋದ ಆ ನರ್ಮದಾ ರೇವಾ ಸಂಗಮಕ್ಕೆ ಹೋದವು.

೩೪. ಆ ಪಕ್ಷಿಗಳು ನೋಡುತ್ತಿರುವಂತೆಯೇ ಆ ದಂಪತಿಗಳಿಬ್ಬರೂ ಸ್ನಾನ ಮಾಡಿದರು.

ದಿವ್ಯದೇಹಧರೌ ಚೋಭೌ ದಿವ್ಯಕಾಂತಿಸಮನ್ವಿತೌ ।
ಪಶ್ಯತಾಂ ಪಕ್ಷಿಣಾಂ ಚೈವ ದಿವ್ಯವಸ್ತ್ರಾನುಲೇಪನೌ ॥ ೩೫ ॥

ದಿವ್ಯಮಾಲಾಂಬರಧರೌ ದಿವ್ಯಗಂಧಾನುಲೇಪನೌ ।
ವೈಷ್ಣವಂ ಯಾನಮಾಸಾದ್ಯ ಮುನಿಗಂಧರ್ವಪೂಜಿತೌ ॥ ೩೬ ॥

ಗತೌ ತೌ ವೈಷ್ಣವಂ ಲೋಕಂ ವೈಷ್ಣವೈಃ ಪರಿಪೂಜಿತೌ ।
ಸ್ತೂಯಮಾನೌ ಮಹಾತ್ಮಾನೌ ದಂಪತೀ ದೃಷ್ಟವಾನಹಂ ॥ ೩೭ ॥

ವ್ರಜಂತೌ ಸ್ವರ್ಗಮಾರ್ಗೇಣ ಕೂಜಂತಿ ಪಕ್ಷಿಣಸ್ತದಾ ।
ತೀರ್ಥರಾಜವರಂ ದೃಷ್ಟ್ವಾ ಹರ್ಷಯುಕ್ತಾತ್ಪಕ್ಷೈಸ್ತಥಾ ॥ ೩೮ ॥

ಚತ್ವಾರಃ ಕೃಷ್ಣಹಂಸಾಸ್ತೇ ಸಂಗಮೇ ಪಾಪನಾಶನೇ ।
ಸ್ನಾತ್ವಾ ವೈ ಭಾವಶುದ್ಧಾಸ್ತೇ ಪ್ರಾಪ್ತಾ ಉಜ್ಜ್ವಲತಾಂ ತದಾ ॥ ೩೯ ॥

ಸ್ನಾತ್ವಾ ಪೀತ್ವಾ ಜಲಂ ತೇ ತು ಪುನರ್ಬಹಿರ್ವಿನಿರ್ಗತಾಃ ।
ತಾಶ್ಚ ಪತ್ನ್ಯಸ್ತದಾ ಕೃಷ್ಣಾ ಮೃತಾಸ್ತತ್ಸ್ನಾನಮಾತ್ರತಃ ॥ ೪೦ ॥

---

೩೫-೩೭. ಅವರಿಬ್ಬರೂ ದಿವ್ಯವಾದ ದೇಹವನ್ನು ಧರಿಸಿ, ದಿವ್ಯಕಾಂತಿಯನ್ನು ಹೊಂದಿ, ನಾನೂ ಆ ಪಕ್ಷಿಗಳೂ ನೋಡುತ್ತಿದ್ದಂತೆಯೇ ದಿವ್ಯಮಾಲೆಗಳನ್ನು ಧರಿಸಿ, ದಿವ್ಯಗಂಧವನ್ನು ಲೇಪಿಸಿಕೊಂಡು, ವೈಷ್ಣವಯಾನವನ್ನು ಹೊಂದಿ, ಮುನಿಗಳಿಂದಲೂ ಗಂಧರ್ವದಿಂದಲೂ ವೈಷ್ಣವರಿಂದಲೂ ಪೂಜಿಸಲ್ಪಡುತ್ತಾ ಆ ಇಬ್ಬರು ದಂಪತಿಗಳು ಹೊಗಳಲ್ಪಡುತ್ತಾ ವೈಷ್ಣವಲೋಕವನ್ನು ಹೊಂದಿದರು. ಅದನ್ನು ನಾನು ನೋಡಿದೆನು.

೩೮-೩೯. ಸ್ವರ್ಗಮಾರ್ಗದಿಂದ ಹೋದ ಅವರುಗಳನ್ನು ನೋಡಿ ಪಕ್ಷಿಗಳು ಕೂಗುತ್ತಾ ಆ ತೀರ್ಥರಾಜನನ್ನು ನೋಡಿ ಹರ್ಷಗೊಂಡು ಆ ನಾಲ್ಕು ಕಪ್ಪು ಹಕ್ಕಿಗಳೂ ಆ ಪಾಪನಾಶಕವಾದ ಆ ಜಾಗದಲ್ಲಿ ಸ್ನಾನಮಾಡಿ ಭಾವಶುದ್ಧಿಯನ್ನು ಹೊಂದಿ ಪ್ರಕಾಶವಾದವು.

೪೦. ಸ್ನಾನಮಾಡಿ ನೀರು ಕುಡಿದು ಹೊರಗೆ ಬಂದುವು. ಆದರೆ ಆ ಹೆಂಡರುಗಳು ಅಲ್ಲಿ ಸ್ನಾನಮಾಡಿ ಅಲ್ಲೇ ಸತ್ತವು.

ಕ್ರಂದಮಾನಾ ವಿಚೇಷ್ಟನ್ತ್ಯೇ ಹಾಹಾಕಾರೈರ್ಭೃಶಂ ಪಿತಃ ।
ಯಮಲೋಕಂ ಗತಾಸ್ತಾಸ್ತು ತಾತ ದೃಷ್ಟ್ವಾ ಮಯಾ ತದಾ ॥ ೪೧ ॥

ಉಡ್ಡೀನಾಸ್ತು ತತೋ ಹಂಸಾಃ ಸ್ವಸ್ಥಾನಂ ಪ್ರತಿಜಗ್ಮಿರೇ ।
ಏವಂ ತಾತ ಮಯಾ ದೃಷ್ಟಂ ಪ್ರತ್ಯಕ್ಷಂ ಕಥಿತಂ ತವ ॥ ೪೨ ॥

ಕೃಷ್ಣವರ್ಣಾ ಮಹಾಕಾಯಾ ಧಾರ್ತರಾಷ್ಟ್ರಾಸ್ತು ತತ್ಪ್ರಿಯಾಃ ।
ಕಥಯಸ್ವ ಪ್ರಸಾದೇನ ಕಿಂ ಭವಿಷ್ಯಂತಿ ವೈ ಪಿತಃ ॥ ೪೩ ॥

ನಿರ್ಗತಾನ್ಮಾನಸಾನ್ಮಧ್ಯಾದ್ಧಾರ್ತರಾಷ್ಟ್ರಾನ್ವದಸ್ವ ಮೇ ।
ಕೇ ಭವಿಷ್ಯಂತಿ ಮೇ ತಾತ ಕಥಯಸ್ವ ಚ ಸಾಂಪ್ರತಂ ॥ ೪೪ ॥

ಕಸ್ಮಾತ್ತೇ ಕೃಷ್ಣತಾಂ ಪ್ರಾಪ್ತಾಃ ಕಸ್ಮಾದ್ವೈ ಶುಕ್ಲತಾಂ ಪುನಃ ।
ಸಂಪ್ರಾಪ್ತಾಸ್ತತ್ಕ್ಷಣಾತ್ಸ್ನಾತಾಃ ಕಸ್ಮಾನ್ಮೃತಾಶ್ಚ ತಾಸ್ತ್ರಿಯಃ ॥ ೪೫ ॥

---

೪೧. ಹಾಹಾ ಎಂದು ಬಿದ್ದು ಒದ್ದಾಡುತ್ತಾ ಅಳುತ್ತಾ ಸತ್ತವು. ಇವನ್ನು ನಾನು ನೋಡಿದೆ.

೪೨. ಆ ಮೇಲೆ ಮಿಕ್ಕಹಂಸಗಳು ಹಾರಿ ತಮ್ಮ ಜಾಗಕ್ಕೆ ಹೋದವು. ಇದನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ನಿನಗೆ ಹೇಳಿದ್ದೇನೆ.

೪೩. ಆ ಕಪ್ಪಗಿದ್ದ ದಪ್ಪವಾಗಿದ್ದ ಧಾರ್ತರಾಷ್ಟ್ರವೆಂಬ ಜಾತಿಯ ಹಂಸಗಳು ಏನಾದವು? ಏನಾಗುತ್ತವೆ? ಎಂಬುದನ್ನು ಹೇಳು.

೪೪. ಅವುಗಳ ಮಧ್ಯದಿಂದ ಮಾನಸಸರೋವರನ್ನು ಕುರಿತು ಹೋದ ಆ ಧಾರ್ತರಾಷ್ಟ್ರಹಂಸಗಳಾವವು? ಎಂಬುದನ್ನು ಹೇಳು.

೪೫. ಅವು ಮೊದಲೇಕೆ ಕಪ್ಪಾದುವು? ಆ ಮೇಲೆ ಬೆಳ್ಳಗಾಗಲು ಕಾರಣ ವೇನು? ಆ ಹೆಣ್ಣು ಹಂಸಗಳೇಕೆ ಸತ್ತವು?

ಏವಂ ವೈ ಸಂಶಯಸ್ತಾತ ಸಂಜಾತೋ ದಾರುಣೋ ಮಮ ।
ಛೇತ್ತುಮರ್ಹತಿ ಚಾದ್ಯೈವ ಭವಾನ್ ಜ್ಞಾನವಿಚಕ್ಷಣಃ ।
ಪ್ರಸಾದಸುಮುಖೋ ಭೂತ್ವಾ ಪ್ರಣತಸ್ಯ ಸದೈವ ಮೇ ॥ ೪೬ ॥

ಏವಂ ಸಂಭಾಷ್ಯ ಪಿತರಂ ವಿರರಾಮ ಸಮುಜ್ಜ್ವಲಃ ।
ತತಃ ಪ್ರವಕ್ತುಮಾರೇಭೇ ಸ ಶುಕಃ ಕುಂಜಲಾಭಿದಃ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನೋಪಾಖ್ಯಾನೇ ಏಕೋನನವತಿತಮೋಽಧ್ಯಾಯಃ



---

೪೬. ಇದರ ಸಂಶಯವು ನನಗೆ ಬಹಳವಾಗಿದೆ. ಇದನ್ನು ಪರಿಹರಿಸು. ನೀನು ಜ್ಞಾನಿಯು ದಯವಿಟ್ಟು ಹೇಳು.

೪೭. ತಂದೆಗೆ ಹೀಗೆ ಹೇಳಿ ಆ ಸಮುಜ್ಜ್ವಲನು ಸುಮ್ಮನಾಯಿತು. ಆ ಮೇಲೆ ತಂದೆಯಾದ ಕುಂಜಲನು ಹೇಳಲು ಮೊದಲುಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ನವತಿತಮೋಽಧ್ಯಾಯಃ

---

॥ ಸೂತ ಉವಾಚ ॥

ಏವಂ ಪುಣ್ಯತಮಂ ಶ್ರುತ್ವಾ ಸಮುಜ್ಜ್ವಲಸುಭಾಷಿತಂ ।
ಕುಂಜಲಸ್ಸ ಹಿ ಧರ್ಮಾತ್ಮಾ ಪ್ರತ್ಯುವಾಚ ಸುತಂ ಪ್ರತಿ ॥ ೧ ॥

॥ ಕುಂಜಲ ಉವಾಚ ॥

ಸಂಪ್ರವಕ್ಷ್ಯಾಮ್ಯಹಂ ತಾತ ಶ್ರೂಯತಾಂ ಸ್ಥಿರಮಾನಸಃ ।
ಸರ್ವಸಂದೇಹವಿಧ್ವಂಸಂ ಪವಿತ್ರಂ ಪಾಪನಾಶನಂ ॥ ೨ ॥

ಇಂದ್ರಲೋಕಪ್ರವೃತ್ತಂ ತಂ ಸಂವಾದಂ ದೇವಕೌತುಕಂ ।
ಸಭಾಯಾಂ ತಸ್ಯ ದೇವಸ್ಯ ಇಂದ್ರಸ್ಯಾಪಿ ಮಹಾತ್ಮನಃ ॥ ೩ ॥

---

## ಎಂಭತ್ತೊಂಟನೆಯ ಅಧ್ಯಾಯವು

೧. ಸೂತನು ಹೇಳಿದನು:—ಈ ರೀತಿ ಪುಣ್ಯತಮವಾದ ವಿಷಯವನ್ನು ಕೇಳಿ ಕುಂಜಲನು ಮಗನಿಗೆ ಹೇಳಲು ಮೊದಲುಮಾಡಿತು.

೨-೩. ಕುಂಜಲನು ಹೇಳಿದನು:—ದೇವಲೋಕದಲ್ಲಿ ಇಂದ್ರನ ಸಭೆಯಲ್ಲಿ ನಡೆದ ಸಂವಾದದ ಆಶ್ಚರ್ಯಕರವಾದ ಆ ವಿಷಯವನ್ನು ಕೇಳು. ಅದು ಪವಿತ್ರವಾದುದು. ಪಾಪನಾಶಕವಾದುದು. ಮನಸಿಟ್ಟು ಕೇಳು,

ಏಕದಾ ತು ಮಹಾಪ್ರಾಜ್ಞೋ ನಾರದೋ ಮುನಿಸತ್ತಮಃ ।
ದೇವಂ ದ್ರಷ್ಟುಂ ಸಹಸ್ರಾಕ್ಷಂ ಜಗಾಮ ತ್ವರಿತಸ್ತದಾ ॥ ೪ ॥

ತಮಾಗತಂ ಸಹಸ್ರಾಕ್ಷಃ ಸೂರ್ಯತೇಜಸ್ಸಮಪ್ರಭಂ ।
ದದರ್ಶ ಹರ್ಷಮಾಪನ್ನಃ ಸಮುತ್ಥಾಯ ಮಹಾಮತಿಃ ॥ ೫ ॥

ದದಾವರ್ಘ್ಯಂ ಚ ಪಾದ್ಯಂ ಚ ಭಕ್ತ್ಯಾ ಪ್ರಣತಮಾನಸಃ ।
ಬದ್ಧಾಂಜಲಿಪುಟೋ ಭೂತ್ವಾ ಪ್ರಣಾಮಮಕರೋತ್ತದಾ ॥ ೬ ॥

ಆಸನೇ ಕೋಮಲೇ ಪುಣ್ಯೇ ವಿನಿವೇಶ್ಯ ದ್ವಿಜೋತ್ತಮಂ ।
ಪಪ್ರಚ್ಛ ಪ್ರಣತೋ ಭೂತ್ವಾ ಶ್ರದ್ಧಯಾ ಪರಯಾ ಯುತಃ ॥ ೭ ॥

ಕಸ್ಮಾಚ್ಚಾಗಮನಂ ತೇಽದ್ಯ ಕಾರಣಂ ವದ ಸಾಂಪ್ರತಂ ।
ಇತ್ಯುಕ್ತೇ ದೇವರಾಜೇನ ಪ್ರತ್ಯುವಾಚ ಮಹಾಮುನಿಃ ॥ ೮ ॥

ಭವಂತಂ ದ್ರಷ್ಟುಮಾಯಾತಃ ಪೃಥಿವೀಲೋಕತೋ ಹರೇ ।
ಸ್ನಾತ್ವಾ ಪುಣ್ಯಪ್ರದೇಶೇಷು ತೀರ್ಥೇಷು ಚ ಸುಶ್ರದ್ಧಯಾ ॥ ೯ ॥

---

೪. ಒಂದುಸಾರಿ ನಾರದ ಋಷಿಯು ದೇವೇಂದ್ರನನ್ನು ನೋಡಲು ದೇವಲೋಕಕ್ಕೆ ಹೋದನು.

೫. ಇಂದ್ರನು, ಬಂದ ನಾರದನನ್ನು ನೋಡಿ ಸಂತೋಷದಿಂದ ಮೇಲಕ್ಕೆ ಎದ್ದನು.

೬. ಅರ್ಘ್ಯಪಾದ್ಯಗಳನ್ನು ಕೊಟ್ಟು ಭಕ್ತಿಯಿಂದ ತಲೆಬಗ್ಗಿಸಿ ಕೈಮುಗಿದು ನಮಸ್ಕರಿಸಿದನು.

೭. ಉತ್ತಮವಾದ ಆಸನದಲ್ಲಿ ಕೂರಿಸಿ ಶ್ರದ್ಧೆಯಿಂದ ಇಂತೆಂದನು.

೮. ನೀನೇತಕ್ಕೆ ಬಂದೆ? ಕಾರಣವನ್ನು ಹೇಳೆನಲು, ಆ ಋಷಿಯು ಇಂತೆಂದನು.

೯-೧೦. ಭೂಲೋಕದಲ್ಲಿ ಪುಣ್ಯತೀರ್ಥಗಳಲ್ಲಿ ಶ್ರದ್ಧೆಯಿಂದ ಸ್ನಾನಮಾಡಿ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಿ, ಅನೇಕವಾದ ಪುಣ್ಯಕ್ಷೇತ್ರಗಳನ್ನು ನೋಡಿ

ದೇವಾನ್ ಪಿತೄನ್ ಸಮಭ್ಯರ್ಚ್ಯ ದೃಷ್ಟ್ವಾ ಕ್ಷೇತ್ರಾಣ್ಯನೇಕಧಾ ।
ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪೃಚ್ಛಿತಂ ಪುರಾ ॥ ೧೦ ॥

॥ ಇಂದ್ರ ಉವಾಚ ॥

ದೃಷ್ಟಾನಿ ಪುಣ್ಯತೀತೀರ್ಥಾನಿ ಕ್ಷೇತ್ರಾಣಿ ಚ ತ್ವಯಾ ಮುನೇ ।
ಕಿಂ ತೀರ್ಥಂ ಪ್ರಾಪ್ಯ ದೇವರ್ಷೇ ಮುಚ್ಯತೇ ಬ್ರಹ್ಮಹತ್ಯಯಾ ॥ ೧೧ ॥

ಸುರಾಪೋ ಮುಚ್ಯತೇ ಪಾಪಾದ್ಗೋಘ್ನೋ ಹೇಮಾಪಹಾರಕಃ ।
ಮಿತ್ರದ್ರೋಹಾನ್ಮಹಾಪಾಪೀ ಭಾರ್ಯಾಹರ್ತಾ ಚ ತದ್ವದ ॥ ೧೨ ॥

॥ ನಾರದ ಉವಾಚ ॥

ಯಾನಿ ಕಾನಿ ಚ ತೀರ್ಥಾನಿ ಗಯಾದೀನಿ ಸುರೇಶ್ವರ ।
ತೇಷಾಂ ನೈವ ಪ್ರಪಶ್ಯಾಮಿ ವಿಶೇಷಂ ಪಾಪನಾಶನಂ ॥ ೧೩ ॥

ಸುಪುಣ್ಯಾನಿ ಸುದಿವ್ಯಾನಿ ಪಾಪಘ್ನಾನಿ ಸಮಾನಿಚ ।
ಸರ್ವಾಣ್ಯೇವ ಸುತೀರ್ಥಾನಿ ಜಾನಾಮ್ಯಹಂ ಪುರಂದರ ॥ ೧೪ ॥

---

ಕೊಂಡು ಅಲ್ಲಿಂದ ನಿನ್ನನ್ನು ನೋಡುವುದಕ್ಕೆ ಬಂದೆನು. ಇದೇ ನಾನು ಬರಲು ಕಾರಣ ಎಂದನು.

೧೧-೧೨. ಇಂದ್ರನು ಹೇಳಿದನು:—ಎಲೈ ಋಷಿಯೇ! ನೀನು ಅನೇಕ ಕ್ಷೇತ್ರಗಳನ್ನು ನೋಡಿದೆಯಷ್ಟೆ? ಬ್ರಹ್ಮಹತ್ಯೆಮಾಡಿದವನು, ಸುರಾಪಾನ ಮಾಡಿದವನು, ಗೋವನ್ನು ಕೊಂದವನು, ಸುವರ್ಣಕಳ್ಳವನು, ಮಿತ್ರದ್ರೋಹಿಯು, ಪರರ ಹೆಂಡಿರನ್ನು ಕದಿಯುವವನು ಇವರು ಯಾವ ತೀರ್ಥದಲ್ಲಿ ಸ್ನಾನಮಾಡಿದರೆ ಪಾಪದಿಂದ ಮುಕ್ತರಾಗುತ್ತಾರೆ? ಹೇಳು.

೧೩. ನಾರದನು ಹೇಳಿದನು:—ಗಯೆಯೇ ಮೊದಲಾದ ತೀರ್ಥಗಳು ಅನೇಕವಿವೆ. ಅವುಗಳಲ್ಲಿ ಒಂದೊಂದಕ್ಕೂ ವಿಶೇಷವನ್ನೇನೂ ಕಾಣೆನು. ಎಲ್ಲವೂ ಪಾಪವನ್ನು ನಾಶಮಾಡುತ್ತವೆ.

೧೪. ಎಲ್ಲಾ ತೀರ್ಥಗಳೂ ಪುಣ್ಯವನ್ನು ಕೊಡುತ್ತವೆ. ಪಾಪವನ್ನು ನಾಶಮಾಡುತ್ತವೆ. ಇದನ್ನು ನಾನು ಚನ್ನಾಗಿ ಬಲ್ಲೆ.

**ಅವಿಶೇಷಂ ವಿಶೇಷಂ ಚ ನೈವ ಜಾನಾಮಿ ಸಾಂಪ್ರತಂ ।**
**ಪ್ರತ್ಯಕ್ಷಂ ಕ್ರಿಯತಾಂ ದೇವ ತೀರ್ಥಾನಾಂ ಗತಿದಾಯಕಂ ॥ ೧೫ ॥**

**ಏವಂ ವಾಕ್ಯಂ ಸಮಾಕರ್ಣ್ಯ ನಾರದಸ್ಯ ಮಹಾತ್ಮನಃ ।**
**ಸಮಾಹೂತಾನಿ ಚೇಂದ್ರೇಣ ತೀರ್ಥಾನಿ ಭೂಗತಾನಿಚ ॥ ೧೬ ॥**

**ಮೂರ್ತಿಮಂತಿ ಚ ದಿವ್ಯಾನಿ ಸಮಾಯಾತಾನಿ ಸಾಂಪ್ರತಂ ।**
**ಬದ್ಧಾಂಜಲೀನಿ ಸರ್ವಾಣಿ ಭೂಷಿತಾನಿ ಸುಭೂಷಣೈಃ ॥ ೧೭ ॥**

**ದಿವ್ಯಾಂಬರಾಣಿ ಸ್ನಿಗ್ಧಾನಿ ತೇಜೋವಂತಿ ಚ ಸುವ್ರತ ।**
**ಸ್ತ್ರೀಪುಂಸೋಸ್ತು ಸ್ವರೂಪಾಣಿ ಕೃತಾನಿ ಚ ವಿಶೇಷತಃ ॥ ೧೮ ॥**

**ಹಂಸಚಂದ್ರಪ್ರಕಾಶಾನಿ ದಿವ್ಯರೂಪಧರಾಣಿ ಚ ।**
**ಮುಕ್ತಾಫಲಸ್ಯ ವರ್ಣೇನ ಪ್ರಭಾಸಂತಿ ಸುರೇಶ್ವರ ॥ ೧೯ ॥**

**ತಪ್ತಕಾಂಚನವರ್ಣಾನಿ ಸಾರುಣಾನಿ ಚ ತತ್ರ ಚ ।**
**ಕಾಂತ್ಯಾ ಶುಕ್ಲಸುಪೀತಾನಿ ಪ್ರಭಾಸಂತಿ ಸಭಾಂತರೇ ॥ ೨೦ ॥**

---

೧೫. ಕೀಳನ್ನಾಗಲಿ ಮೇಲ್ಮೆಯನ್ನಾಗಲಿ ಒಂದರಲ್ಲೂ ಕಾಣೆ. ಅವುಗಳ ವಿಷಯವನ್ನು ಪ್ರತ್ಯಕ್ಷವಾಗಿ ನೋಡಬಹುದು.

೧೬. ನಾರದನ ಈ ಮಾತನ್ನು ಕೇಳಿ ಇಂದ್ರನು ಲೋಕದ ತೀರ್ಥಗಳನ್ನು ಬರಮಾಡಿದನು.

೧೭-೧೯. ಅವು ಆಕಾರವನ್ನು ಹೊಂದಿ ಒಡನೆಯೇ ಆ ಸಭೆಗೆ ಬಂದವು. ಅವು ಒಳ್ಳೆಯ ಒಡವೆಗಳನ್ನೂ ಬಟ್ಟೆಗಳನ್ನೂ ಹಾಕಿಕೊಂಡು ಕಾಂತಿಯಿಂದ ಕೂಡಿದ್ದವು. ಹೆಣ್ಣುಗಂಡುಗಳ ಆಕಾರವನ್ನು ಅವಕ್ಕೆ ತಕ್ಕಂತೆ ಹೊಂದಿದ್ದವು. ಹಂಸ, ಚಂದ್ರ, ಇವುಗಳನ್ನು ಅಲ್ಲಲ್ಲೇ ಚಿತ್ರಿಸಿರುವ ಪ್ರಕಾಶವಾದ ದುಕೂಲಗಳನ್ನುಟ್ಟು ಮುತ್ತಿನ ಸರದಿಂದಲೂ ಅದರ ಬಣ್ಣದಂತೆಯೂ ಇದ್ದು ಪ್ರಕಾಶಿಸುತ್ತ ಆ ಸಭೆಗೆ ಕೈಮುಗಿದುಕೊಂಡು ಬಂದವು.

೨೦. ಪುಟಹಾಕಿದ ಚಿನ್ನದ ಬಣ್ಣದಂತಿದ್ದು ಆ ಸಭೆಯಲ್ಲಿ ಪ್ರಕಾಶಿಸಿದವು.

ಕಾನಿ ಪದ್ಮಾನಿ ಭಾಂತ್ಯೇವ ಮೂರ್ತಿಮಂತೀತಿ ಭಾಂತಿ ಚ ।
ಸೂರ್ಯತೇಜಃಪ್ರಕಾಶಾನಿ ತಟಿದ್ವರ್ಣಾನಿ ಕಾನಿ ಚಿತ್ ॥ ೨೧ ॥

ಕಾನಿಚಿದ್ರೌಪ್ಯವರ್ಣಾನಿ ಹಾರಕೇಯೂರಕಂಕಣ್ಯೈಃ ।
ಮಾಲಾಭಿಶ್ಚ ಸುಶೋಭೀನಿ ಕಮಂಡಲುಕರಾಣಿ ಚ ।
ತತ್ಕಾಲಂ ಸ್ಮೃತಮಾತ್ರೇಣ ಆಯಾತಾನಿ ಸಭಾಂತರೇ ॥ ೨೨ ॥

ಗೋಮತೀ ನರ್ಮದಾ ಪುಣ್ಯಾ ಚಂದ್ರಭಾಗಾ ಸರಸ್ವತೀ ।
ದೇವಿಕಾ ಬಿಂಬಿಕಾ ಕುಬ್ಜಾ ಕುಂಜಲಾ ಮಂಜುಳಾ ಸ್ರುತಾ ॥ ೨೩ ॥

ರಂಭಾ ಭಾನುಮತೀ ಪುಣ್ಯಾ ಪಾರಾ ಚೈವ ಸುಘೌರ್ಘರಾ ।
ಶೋಣಾ ಚ ಸಿಂಧುಸೌವೀರಾ ಕಾವೇರೀ ಕಪಿಲಾ ತಥಾ ॥ ೨೪ ॥

ಮುಕುಂದಾ ಭೇದಿನೀ ಪುಣ್ಯಾ ಸುಪುಣ್ಯಾ ಚ ಮಹೇಶ್ವರೀ ।
ಚರ್ಮಣ್ವತೀ ತಥಾ ಖ್ಯಾತಾ ಲೋಪಾ ಚಾನ್ಯಾ ಸುಕೌಶಿಕೀ ॥ ೨೫ ॥

ಸುಹಂಸಾ ಹಂಸವಾಹಾ ಚ ಹಂಸವೇಗಾ ಮನೋರಥಾ ।
ಸುರಥಾ ಸಾರುಣಾ ವೇಗಾ ಸುಷೇಣಾ ಚ ಸುಪದ್ಮಿನೀ ॥ ೨೬ ॥

ವಾಹಿನೀ ಸರಘಾ ಚಾನ್ಯಾ ಪುಣ್ಯಾ ಚಾನ್ಯಾ ಪುಳಿಂದಿಕಾ ।
ಹಿಮಾ ಮನೋರಥಾ ದಿವ್ಯಾ ಚಂದ್ರಿಕಾ ವೇದಸಂಕ್ರಮಾ ॥ ೨೭ ॥

---

೨೧-೨೨. ಕೆಲವು ಪದ್ಮವರ್ಣಗಳಾಗಿಯೂ ಕೆಲವು ಸೂರ್ಯ ತೇಜಸ್ಸಿನಂತೆಯೂ ಕೆಲವು ಮಿಂಚಿನಂತೆಯೂ ಕೆಲವು ಬೆಳ್ಳಿಯಬಣ್ಣಪ್ರಭ್ಯವುಗಳಾಗಿಯೂ ಇದ್ದುಕೊಂಡು ಇಂದ್ರನು ಸ್ಮರಿಸಿದ ಕೂಡಲೇ ಹಾರಕೇಯೂರಗಳನ್ನು ತೊಟ್ಟು, ಮಾಲೆಗಳನ್ನು ಹಾಕಿಕೊಂಡು, ಕೈಯಲ್ಲಿ ಕಮಂಡಲವನ್ನು ಹಿಡಿದು ಸಭೆಯ ಮಧ್ಯಕ್ಕೆ ಬಂದವು.

೨೩-೩೦. ಗೋಮತೀ, ಚಂದ್ರಭಾಗಾ, ನರ್ಮದಾ, ಸರಸ್ವತೀ, ದೇವಿಕೆ, ಬಿಂಬಿಕೆ, ಕುಬ್ಜೆ, ಕುಂಜಲ, ಮಂಜುಲ, ಸ್ರುತೆ, ರಂಭೆ, ಭಾನುಮತಿ, ಪಾರಾ, ಘರ್ಘರಾಶೋಣಾ, ಸಿಂಧು, ಸೌವೀರ, ಕಾವೇರೀ, ಕಪಿಲಾ, ಮುಕುಂದೆ, ಮೇದಿನೀ, ಪುಣ್ಯಾ, ಸುಪುಣ್ಯಾ, ಮಹೇಶ್ವರೀ, ಚರ್ಮಣ್ವತೀ, ಲೋಪೆ, ಕೌಶಿಕೆ, ಸುಹಂಸೆ ಹಂಸ ವಾಹೆ, ಹಂಸವೇಗಾ, ಮನೋರಥಾ, ಸಾರುಣೆ, ವೇಗೆ, ಸುಷೇಣಾ, ಸುಪದ್ಮಿನೀ, ವಾಹಿನೀ, ಸರಘಾ, ಪುಳಿಂದಿಕೆ, ಹಿಮೆ, ಮನೋರಥೆ, ಚಂದ್ರಿಕೆ, ವೇದಸಂಕ್ರಮೆ,

ಜ್ವಾಲಾ ಹುತಾಶಿನೀ ಸ್ವಾಹಾ ಕಾಲಾ ಚೈವ ಕಪಿಂಜಲೀ ।
ಸ್ವಧಾ ಸುಕಾಲಾ ಕಾಲಿಂಗಾ ಗಂಭೀರಾ ಹಿಮವಾಹಿನೀ ॥ ೨೮ ॥

ದೇವದ್ರವೀ ವೀರವಾಹಾ ಲಕ್ಷಹೋಮಾಪ್ಯಘಾಪಹಾ ।
ಪಾರಾಶರೀ ವೇದಗರ್ಭಾ ಹೇಮವೇಶಾ ಸುಪುಂಡ್ರಕೀ ॥ ೨೯ ॥

ಏತಾ ನದ್ಯೋ ಮಹಾಪುಣ್ಯಾ ಮೂರ್ತಿಮತ್ಯೋಽಪ್ಯಘಾಪಹಾಃ ।
ಸರ್ವಾಭರಣಶೋಭಾಢ್ಯಾಃ ಕುಂಭಹಸ್ತಾಸ್ಸುಪೂಜಿತಾಃ ॥ ೩೦ ॥

ಪ್ರಯಾಗಃ ಪುಷ್ಕರಶ್ಚೈವ ಸರ್ವತೀರ್ಥಮನೋರಮಃ ।
ವಾರಾಣಸೀ ಮಹಾಪುಣ್ಯಾ ಬ್ರಹ್ಮಹತ್ಯಾವ್ಯಪೋಹಿನೀ ॥ ೩೧ ॥

ದ್ವಾರಾವತೀ ಪ್ರಭಾಸಶ್ಚ ಹ್ಯವಂತೀ ನೈಮಿಷಸ್ತಥಾ ।
ದಂಡಕಶ್ಚ ದಶಾರಣ್ಯಂ ಮಹೇಶ್ವರಕಳೇಬರೌ ॥ ೩೨ ॥

ಕಾಲಂಜರೋ ಬ್ರಹ್ಮಕ್ಷೇತ್ರಂ ಮಧುರೋ ನಾಮ ವಾಹಕಃ ।
ಮಾಯಾ ಕಾಂಚೀ ತಥಾನ್ಯಾನಿ ದಿವ್ಯಾನಿ ವಿವಿಧಾನಿ ಚ ॥ ೩೩ ॥

ಅಷ್ಟಷಷ್ಟಿಸ್ತು ತೀರ್ಥಾನಿ ನದೀನಾಂ ದಶ ಕೋಟಯಃ ।
ಗೋದಾವರೀಮುಖಾಸ್ಸರ್ವಾಃ ಸಮಾಯಾತಾಸ್ತದಾ ಜ್ಞಯಾ ॥ ೩೪ ॥

---

ಜ್ವಾಲೆ, ಹುತಾಶಿನೀ, ಸ್ವಾಹಾ, ಕಾಲೆ, ಕಪಿಂಜಲೀ, ಸ್ವಧಾ, ಸುಕಾಲಾ, ಕಾಳಿಂಗಾ, ಗಂಭೀರಾ, ಹಿಮಾವಾಹಿನೀ, ದೇವದ್ರವೀ, ವೀರವಾಹೆ, ಲಕ್ಷಹೋಮಾ, ಅಘಾಪಹೆ, ಪಾರಾಶರಿ, ವೇದಗರ್ಭೆ, ಹೇಮವೇಶ, ಸುಪುಂಡ್ರಿಕೀ, ಈ ನದಿಗಳು ಮಹಾಪುಣ್ಯಗಳು, ಪಾಪನಾಶಕಗಳು. ಸರ್ವಾಭರಣಭೂಷಿತಗಳಾಗಿ ಕೈಯಲ್ಲಿ ಕಲಶವನ್ನು ಹಿಡಿದು ಮೂರ್ತಿಮತ್ತಾಗಿ ಸಭೆಗೆ ಬಂದವು.

೩೧-೩೪. ಪ್ರಯಾಗ, ಪುಷ್ಕರ, ವಾರಾಣಸೀ, ದ್ವಾರಾವತೀ, ಪ್ರಭಾಸ, ಅವಂತೀ, ನೈಮಿಷ, ದಂಡಕ, ದಶಾರಣ್ಯ, ಮಹೇಶ್ವರ, ಕಳೇಬರ, ಕಾಳಂಜರ, ಬ್ರಹ್ಮ ಕ್ಷೇತ್ರ ಮಧುರ, ವಾಹಕ, ಮಾಯಾ, ಕಾಂಚಿ, ಇವೇ ಮುಂತಾದ ಅರವತ್ತೆಂಟು ತೀರ್ಥಗಳೂ, ಗೋದಾವರಿಯೇ ಮೊದಲಾದ ಹತ್ತುಕೋಟಿ ನದಿಗಳೂ ಆ ಇಂದ್ರನ ಆಜ್ಞೆಯಂತೆ ಸಭೆಗೆ ಬಂದವು.

ದ್ವೀಪಾನಾಂ ತು ಸಮಸ್ತಾನಿ ತೀರ್ಥಾನಿ ಚ ಮಹಾಂತಿ ಚ ।
ಮೂರ್ತಿಲಿಂಗಧರಾಣ್ಯೇವ ಸಹಸ್ರಾಕ್ಷಂ ಸುರೇಶ್ವರಂ ॥ ೩೫ ॥

ಸಮಾಜಗ್ಮುಸ್ಸಮಸ್ತಾನಿ ತದಾದೇಶಕರಾಣಿ ಚ ।
ಪ್ರಣೇಮುರ್ದೇವದೇವೇಶಂ ನತಶೀರ್ಷಾಣಿ ಸರ್ವಶಃ ॥ ೩೬ ॥

ತೈಸ್ತು ಪ್ರೋಕ್ತೋ ಮಹಾತೀರ್ಥೈರ್ದೇವರಾಜಸ್ತು ಸಾದರಂ ।
ಕಸ್ಮಾತ್ತ್ವಯಾ ಸಮಾಹೂತಾ ದೇವರಾಜ ವದಸ್ವ ನಃ ॥ ೩೭ ॥

ಬ್ರೂಹಿ ನಃ ಕಾರಣಂ ಸರ್ವಂ ನಮಸ್ತುಭ್ಯಂ ಸುರಾಧಿಪ ।
ಏವಮಾಕರ್ಣಿತಂ ಸರ್ವಂ ತೀರ್ಥಾನಾಂ ವಚನಂ ತದಾ ।
ಏವಮಾಕರ್ಣ್ಯ ತದ್ವಾಕ್ಯಂ ದೇವರಾಜೋಽಭ್ಯಭಾಷತ ॥ ೩೮ ॥

ಕಸ್ಸಮರ್ಥೋ ಮಹಾಭಾಗಾ ಬ್ರಹ್ಮಹತ್ಯಾಂ ವ್ಯಪೋಹಿತುಂ ।
ಗೋವಧಾಖ್ಯಂ ಮಹಾಪಾಪಂ ಸ್ತ್ರೀವಧಾಖ್ಯಮನುತ್ತಮಂ ॥ ೩೯ ॥

ಸ್ವಾಮಿದ್ರೋಹಾತ್ಸಮುದ್ಭೂತಂ ಸುರಾಪಾನಾಚ್ಚ ದಾರುಣಂ ।
ಹೇಮಸ್ತೆಯೋದ್ಗತಂ ಪಾಪಂ ಗುರುನಿಂದಾಸಮುದ್ಭವಂ ॥ ೪೦ ॥

ಭ್ರೂಣಹತ್ಯಾಂ ಮಹಾಘೋರಾಂ ಕಸ್ಸಮರ್ಥೋ ನಿವರ್ತಿತುಂ ।
ರಾಜದ್ರೋಹಂ ಮಹಾಪಾಪಂ ಬಹುಪೀಡಾಪ್ರದಾಯಕಂ ॥ ೪೧ ॥

---

೩೫-೩೬. ಸಮಸ್ತ ದ್ವೀಪಗಳ ತೀರ್ಥಗಳೂ ಮೂರ್ತಿಮತ್ತಾಗಿ ಇಂದ್ರನನ್ನು ನೋಡಲು ಅವನ ಅಪ್ಪಣೆಯಂತೆ ಬಂದವು.

೩೭. ಆ ಮಹಾತೀರ್ಥಗಳು ದೇವರಾಜನನ್ನು ಕುರಿತು ನೀನೇಕೆ ನಮ್ಮನ್ನು ಕರೆಸಿದೆ?

೩೮. ಅದರ ಕಾರಣಗಳನ್ನು ಹೇಳು. ನಿನಗೆ ನಮಸ್ಕಾರ ಎಂದವು. ಇಂತು ಸರ್ವತೀರ್ಥಗಳ ಮಾತನ್ನು ಕೇಳಿದ ಆ ಇಂದ್ರನು ಹೇಳಿದನು.

೩೯-೪೬. ಬ್ರಹ್ಮಹತ್ಯೆ, ಗೋವಧೆ, ಸ್ತ್ರೀವಧೆ, ಸ್ವಾಮಿದ್ರೋಹ, ಸುರಾಪಾನ, ಸ್ವರ್ಣಸ್ತೇಯ ಗುರುನಿಂದೆ, ಭ್ರೂಣಹತ್ಯೆ, ರಾಜದ್ರೋಹ, ಮಿತ್ರದ್ರೋಹ, ವಿಶ್ವಾಸ

**ಮಿತ್ರದ್ರೋಹಂ ತಥಾಚಾನ್ಯ ಸರ್ವವಿಶ್ವಾಸಘಾತಕಂ ।**
**ದೇವಭೇದಂ ತಥಾ ಚಾನ್ಯ ಲ್ಲಿಂಗಭೇದಂ ತತಃ ಪರಂ ।**
**ವಿತ್ತಿಚ್ಛೇದಂ ಚ ವಿಪ್ರಾಣಾಂ ಗೋಪ್ರಚಾರಪ್ರಣಾಶನಂ ॥ ೪೨ ॥**

**ಅಗಾರದಾಹನಂ ಚಾನ್ಯದ್ಗ್ರಾಮದೀಪನಕಂ ಪರಂ ॥ ೪೩ ॥**

**ಷೋಡಶ್ಯೈತೇ ಮಹಾಪಾಪಾ ಅಗಮ್ಯಾಗಮನಂ ತಥಾ ।**
**ಸ್ವಾಮಿತ್ಯಾಗಾತ್ಸಮುದ್ಭೂತಂ ರಣಸ್ಥಾನಾತ್ಪಲಾಯನಂ ॥ ೪೪ ॥**

**ಏತಾನಿ ನಾಶಯೇತ್ಕೋ ವೈ ಸಮರ್ಥಸ್ತೀರ್ಥಸತ್ತಮಃ ।**
**ಸಮರ್ಥೋ ಭವತಾಂ ಮಧ್ಯೇ ಪ್ರಾಯಶ್ಚಿತ್ತಂ ವಿನಾ ಧ್ರುವಂ ॥ ೪೫ ॥**

**ಪಶ್ಯತಾಂ ದೇವತಾನಾಂ ಚ ನಾರದಸ್ಯ ಚ ಪಶ್ಯತಃ ।**
**ಬ್ರುವಂತು ಸರ್ವೇ ಸಂಚಿಂತ್ಯ ನಿಶ್ಚಿತಂ ಪಾಪನಾಶನಂ ॥ ೪೬ ॥**

**ಏವಮುಕ್ತೇ ಶುಭೇ ವಾಕ್ಯೇ ದೇವೇಶೇನ ಮಹಾತ್ಮನಾ ।**
**ಸಮ್ಮಂತ್ರ್ಯ ತೀರ್ಥರಾಜೇನ ಊಚುಃ ಶಕ್ರಂ ಸಭಾಗತಂ ॥ ೪೭ ॥**

**॥ ತೀರ್ಥಾನ್ಯೂಚುಃ ॥**

**ಶ್ರೂಯತಾಮಭಿದಾಸ್ಯಾಮೋ ದೇವರಾಜ ನಮೋಽಸ್ತು ತೇ ।**
**ಯಾವಂತಿ ಸರ್ವತೀರ್ಥಾನಿ ಸರ್ವಪಾಪಹರಾಣಿ ಚ ॥ ೪೮ ॥**

---

ಘಾತಕತನ, ದೇವಭೇದ, ಲಿಂಗಭೇದ, ಬ್ರಾಹ್ಮಣರ ವೃತ್ತಿಚ್ಛೇದ, ಗೋಮಾಳನಾಶನ, ಮನೆಯನ್ನು ಸುಡುವದು, ಊರನ್ನು ಸುಡುವದು, ಅಗಮ್ಯಾಗಮನ, ಸ್ವಾಮಿತ್ಯಾಗ, ಯುದ್ಧಭೂಮಿಯಿಂದ ಪಲಾಯನ, ಈ ಹದಿನಾರು ಮಹಾಪಾಪಗಳನ್ನು ಪ್ರಾಯಶ್ಚಿತ್ತ ವಿಲ್ಲದೆ ನಿಮ್ಮಗಳಲ್ಲಿ ಯಾರು ಹೋಗಲಾಡಿಸಲು ಶಕ್ತಿ ಹೊಂದಿದ್ದೀರಿ? ಎಲ್ಲವನ್ನೂ ಸರಿಯಾಗಿ ಯೋಚಿಸಿ ದೇವತೆಗಳ ಎದುರಿಗೂ ನಾರದರ ಎದುರಿಗೂ ಹೇಳಿ. ಎಂದನು.

೪೭. ದೇವೇಂದ್ರನು ಹೀಗೆ ಹೇಳಲು ಅವೆಲ್ಲವೂ ತೀರ್ಥರಾಜನೊಡನೆ ಯೋಚಿಸಿ ಸಭೆಯಲ್ಲಿ ಶಕ್ರನಿಗೆ ಹೇಳಿದವು.

೪೮-೪೯. ತೀರ್ಥಗಳು ಹೇಳಿದವು:—ಎಲೈ, ದೇವರಾಜನೇ, ನಿನಗೆ ನಮ

ಬ್ರಹ್ಮಹತ್ಯಾದಿಕಾನ್ಯೇವ ತ್ವಯೋಕ್ತಾನಿ ಸುರೇಶ್ವರ ।
ಮಹಾಘೋರಾಣಿ ಪಾಪಾನಿ ನಾಶಿತುಂ ನೈವ ಶಕ್ನುಮಃ ॥ ೪೯ ॥

ಪ್ರಯಾಗಃ ಪುಷ್ಕರಶ್ಚೈವ ಸರ್ವತೀರ್ಥಮನುತ್ತಮಂ ।
ವಾರಾಣಸೀ ಮಹಾಭಾಗಾ ಸರ್ವಪಾತಕನಾಶಿನೀ ।
ಮಹಾಪಾತಕನಾಶಾಯ ಚತ್ವಾರೋಽಮಿತವಿಕ್ರಮಾಃ ॥ ೫೦ ॥

ಉಪಪಾತಕನಾಶಾಯ ವಯಂ ಧಾತ್ರಾ ವಿನಿರ್ಮಿತಾಃ ।
ಮಹಾಪಾಪೋಪಪಾಪಾರ್ಥಂ ಸೃಷ್ಟೋಽಸೌ ಪುಷ್ಕರೋ ಧ್ರುವಂ ॥ ೫೧ ॥

ಏವಮಾಕರ್ಣ್ಯ ತದ್ವಾಕ್ಯಂ ತೀರ್ಥಾನಾಂ ಸುರರಾಟ್ ತತಃ ।
ಹರ್ಷೇಣ ಮಹತಾವಿಷ್ಟಸ್ತೇಷಾಂ ಸ್ತೋತ್ರಂ ಚಕಾರ ಹ ॥ ೫೨ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ನವತಿತಮೋಽಧ್ಯಾಯಃ**



---

ಸಾರ್ಥವು, ಹೇಳುತ್ತೇನೆ ಕೇಳು, ನೀನು ಹೇಳಿದ ಮಹಾಘೋರವಾದ ಬ್ರಹ್ಮಹತ್ಯಾದಿಗಳನ್ನು ನಾಶಮಾಡಲು ನಮಗೆ ಶಕ್ತಿಯೇ ಇಲ್ಲ.

೫೦. ಪ್ರಯಾಗ, ಪುಷ್ಕರ, ವಾರಾಣಸೀ, ಸರ್ವತೀರ್ಥ, ಈ ನಾಲ್ಕು ಮಾತ್ರ ಮಹಾಪಾಪವನ್ನು ನಾಶಮಾಡುವುದರಲ್ಲಿ ಸಮರ್ಥಗಳು.

೫೧. ಉಪಪಾತಕಗಳನ್ನು ನಾಶಮಾಡಲು ಮಾತ್ರ ಬ್ರಹ್ಮನು ನಮ್ಮನ್ನು ಸೃಷ್ಟಿಸಿದ್ದಾನೆ ಎಂದವು.

೫೨. ಈ ಮಾತನ್ನು ಕೇಳಿ ಇಂದ್ರನು ಸಂತೋಷದಿಂದ ಅವನ್ನು ಹೊಗಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕನವತಿತಮೋಽಧ್ಯಾಯಃ

॥ ಕುಂಜಲ ಉವಾಚ ॥

ಬ್ರಹ್ಮಹತ್ಯಾಭಿಭೂತಶ್ಚ ಸಹಸ್ರಾಕ್ಷೋ ಯದಾ ಪುರಾ ।
ಗೌತಮಸ್ಯ ಪ್ರಿಯಾಸಂಗಾದಗಮ್ಯಾಗಮನಾತ್ತಥಾ ॥ ೧ ॥

ಸಂಜಾತಂ ಪಾತಕಂ ತಸ್ಯ ತ್ಯಕ್ತ್ವಂ ದೇವೈಶ್ಚ ಬ್ರಾಹ್ಮಣೈಃ ।
ಸಹಸ್ರಾಕ್ಷಸ್ತಪಸ್ತೇಪೇ ನಿರಾಲಂಬೋ ನಿರಾಶ್ರಯಃ ॥ ೨ ॥

ತಪಂತಿ ದೇವತಾಸ್ಸರ್ವಾ ಋಷಯೋ ಯಕ್ಷಕಿನ್ನರಾಃ ।
ದೇವರಾಜಸ್ಯ ಪೂಜಾರ್ಥಮಭಿಷೇಕಂ ಪ್ರಚಕ್ರಿರೇ ॥ ೩ ॥

---

## ತೊಂಭತ್ತೊಂದನೆಯ ಅಧ್ಯಾಯವು

೧-೨. ಕುಂಜಲನು ಹೇಳಿದನು :—ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಕೊಂದಾಗ ಬ್ರಹ್ಮಹತ್ಯೆ ಬಂದಿತು. ಅಲ್ಲದೆ ಗೌತಮನ ಹೆಂಡತಿಯನ್ನು ಗಮಿಸಿದಾಗ ಅಗಮ್ಯಾಗಮನ ಪಾಪ ಬಂದಿತು. ಆಗ ದೇವತೆಗಳೂ ಬ್ರಾಹ್ಮಣರೂ ಈ ಇಂದ್ರನನ್ನು ಬಿಟ್ಟುಬಿಟ್ಟರು. ಆಗ ಇಂದ್ರನು ಆಶ್ರಯರಹಿತನಾಗಿ ತಪಸ್ಸು ಮಾಡಿದನು.

೩. ಆ ದೇವರಾಜನಿಗೋಸ್ಕರ ದೇವತೆಗಳೂ ಋಷಿಗಳೂ ಕಿನ್ನರರೂ ತಪಸ್ಸು ಮಾಡುತ್ತಾ ಒಳ್ಳೆಯ ಕ್ಷೇತ್ರಗಳಲ್ಲಿ ಹೋಗಿ ತಾವೂ ಸ್ನಾನಮಾಡಿ ಆತನಿಗೂ ಸ್ನಾನ ಮಾಡಿಸುತ್ತಿದ್ದರು.

ದೇಶೇ ಮಾಲವಕೇ ನೀತ್ವಾ ದೇವರಾಜಂ ಸುರೋತ್ತಮಾಃ ।
ಚಕ್ರುಃ ಸ್ನಾನಂ ಮಹಾಭಾಗಾಃ ಕುಂಭೈರುದಕಪೂರಿತೈಃ ॥ ೪ ॥

ಸ್ನಾಪಿತುಂ ಪ್ರಥಮಂ ನೀತೋ ವಾರಾಣಸ್ಯಾಂ ಸ್ವಯಂ ತತಃ ।
ಪ್ರಯಾಗೇ ಚ ಸಹಸ್ರಾಕ್ಷಃ ಸರ್ವತೀರ್ಥೇ ತತಃ ಪುನಃ ॥ ೫ ॥

ಮಹಾತ್ಮನಾ ಪುಷ್ಕರೇಣ ಸ್ನಾಪಿತಸ್ಸ್ವಯಮೇವ ಚ ।
ಬ್ರಹ್ಮಾದಿಭಿಸ್ಸುರೈಸ್ಸರ್ವೈರ್ಮುನಿವೃಂದೈರ್ದ್ವಿಜೋತ್ತಮೈಃ ॥ ೬ ॥

ನಾಗವೃಂದೈರ್ನಗೈಸ್ಸರ್ವೈರ್ಗಂಧರ್ವೈಶ್ಚ ಸಕಿಂನರೈಃ ।
ಸ್ನಾಪಿತೋ ದೇವರಾಜಸ್ತು ವೇದಮಂತ್ರೈಃ ಸುಸಂಸ್ಕೃತಃ ॥ ೭ ॥

ಮುನಿಭಿಸ್ಸರ್ವಪಾಪಘ್ನೈಸ್ತಸ್ಮಿನ್ಕಾಲೇ ದ್ವಿಜೋತ್ತಮ ।
ಶುದ್ಧೇ ತಸ್ಮಿನ್ಸಹಸ್ರಾಕ್ಷೇ ಮಹಾಭಾಗೇ ಮಹಾಮತೌ ।
ಬ್ರಹ್ಮಹತ್ಯಾ ಗತಾ ತಸ್ಯ ಅಗಮ್ಯಾಗಮನೋದ್ಭವಾ ॥ ೮ ॥

---

೪. ಮೊದಲು ಮಾಲಪದೇಶಕ್ಕೆ ಹೋಗಿ ದೇವರಾಜನಿಗೆ ಅಲ್ಲಿ ಸ್ನಾನಮಾಡಿಸಿದರು.

೫. ಬಳಿಕ ವಾರಾಣಸಿಯಲ್ಲಿ ಸ್ನಾನಮಾಡಿಸಿ ಆಮೇಲೆ ಪ್ರಯಾಗದಲ್ಲೂ ಆಮೇಲೆ ಸರ್ವತೀರ್ಥದಲ್ಲೂ ಸ್ನಾನಮಾಡಿಸಿದರು.

೬-೭. ಮಹಾತ್ಮನಾದ ಪುಷ್ಕರನು ತಾನೇ ಸ್ನಾನಮಾಡಿಸಿದನು. ಬ್ರಹ್ಮನೇ ಮೊದಲಾದ ದೇವತೆಗಳೂ ಮುನಿಗಳೂ ಬ್ರಾಹ್ಮಣರೂ ನಾಗರೂ ಪರ್ವತಗಳೂ ಗಂಧರ್ವರೂ ಕಿನ್ನರರೂ ವೇದಮಂತ್ರಗಳಿಂದ ಆಗ ಆ ದೇವರಾಜನನ್ನು ಸ್ನಾನಮಾಡಿಸಿದರು.

೮. ಆ ಪುಣ್ಯಾತ್ಮನಾದ ಇಂದ್ರನು ಶುದ್ಧನಾಗುತ್ತಲೂ ಬ್ರಹ್ಮಹತ್ಯೆಯೂ ಅಗಮ್ಯಾಗಮನ ಪಾಪವೂ ಹೋದವು

**ಪಾಪೇನ ತೇನ ಘೋರೇಣ ಸಾರ್ಧಮಿಂದ್ರಸ್ಯ ಭೂತಳೇ ।**
**ಸುಪ್ರಸನ್ನಸ್ಸಹಸ್ರಾಕ್ಷಸ್ತೀರ್ಥೇಭ್ಯೋಽಪಿ ವರಂ ದದೌ ॥ ೯ ॥**

**ಭವಂತಸ್ತೀರ್ಥರಾಜಾನೋ ಭವಿಷ್ಯಥ ನ ಸಂಶಯಃ ।**
**ಮತ್ಪ್ರಸಾದಾತ್ಪವಿತ್ರಾಶ್ಚ ಯಸ್ಮಾದಹಂ ವಿನೋಕ್ಷಿತಃ ।**
**ಸುಘೋರಾತ್ಕಿಲ್ಬಿಷಾದತ್ರ ಯುಷ್ಮಾಭಿರ್ವಿಮಲೈರಹಂ ॥ ೧೦ ॥**

**ಏವಂ ತೇಭ್ಯೋ ವರಂ ದತ್ವಾ ಮಾಲವಾಯ ವರಂ ದದೌ ।**
**ಯಸ್ಮಾತ್ತ್ವಯಂ ತ್ವಯಾಪ್ಯೇತದ್ಧ್ವಿಧೃತಂ ಮಮ ಪಾತಕಂ ।**
**ತಸ್ಮಾತ್ತ್ವಮನ್ನಪಾನೈಶ್ಚ ಧನಧಾನ್ಯೈರಲಂಕೃತಃ ॥ ೧೧ ॥**

**ಭವಿಷ್ಯಸಿ ನ ಸಂದೇಹೋ ಮತ್ಪ್ರಸಾದಾನ್ನಸಂಶಯಃ ।**
**ಸುದುಷ್ಕಾಲೈರ್ವಿನಾ ತ್ವಂ ತು ಭವಿಷ್ಯಸಿ ನ ಸಂಶಯಃ ॥ ೧೨ ॥**

**ಏವಂ ತಸ್ಮೈ ವರಂ ದತ್ವಾ ಸಹಸ್ರಾಕ್ಷಃ ಪುರಂದರಃ ।**
**ಕ್ಷೇತ್ರಾಣಿ ಸರ್ವತೀರ್ಥಾನಿ ದೇಶಾನ್ಮಾಲವಕಾಂಸ್ತಥಾ ॥ ೧೩ ॥**

---

೯, ಆ ಘೋರವಾದ ಪಾಪದೊಡನೆ ಇತರ ಪಾಪಗಳೂ ಆತನಿಗೆ ಹೋದವು. ಆಗ ಪ್ರಸನ್ನನಾಗಿ ಇಂದ್ರನು ಆ ತೀರ್ಥಗಳಿಗೆ ವರವನ್ನು ಕೊಟ್ಟನು.

೧೦. ನನ್ನ ಘೋರವಾದ ಪಾಪಗಳು ಪವಿತ್ರರಾದ ನಿಮ್ಮಿಂದ ನಾಶವಾದ ಕಾರಣ ನನ್ನ ಅನುಗ್ರಹದಿಂದ ನೀವು ತೀರ್ಥರಾಜರಾಗಿರಿ, ಸಂಶಯವಿಲ್ಲ.

೧೧-೧೨. ಹೀಗೆ ಆ ತೀರ್ಥಗಳಿಗೆ ವರವನ್ನು ಕೊಟ್ಟು, ಮಾಳವವನ್ನು ಕುರಿತು ನನ್ನ ಪಾಪವನ್ನು ನೀನು ಧರಿಸಿರುವುದರಿಂದ ನೀನು ಅನ್ನಪಾನಗಳಿಂದಲೂ ಧನ ಧಾನ್ಯಗಳಿಂದಲೂ ಸಮೃದ್ಧನಾಗಿರು. ಕ್ಷಾಮಕಾಲವು ನಿನಗೆ ಬರಲೇ ಬೇಡ ಎಂದು ವರವನ್ನು ಕೊಟ್ಟನು.

೧೩. ಹೀಗೆ ವರವನ್ನು ಹೊಂದಿ ಅವು ತಮ್ಮ ತಮ್ಮ ಸ್ಥಾನಗಳಿಗೆ ಹೋದವು. ಇಂದ್ರನೂ ತನ್ನ ದೇಶಕ್ಕೆ ಹೋದನು.

ಆಖಂಡಲೇನ ಸಾರ್ಧಂ ತೇ ಸ್ವಸ್ಥಾನಂ ಪ್ರತಿ ಜಗ್ಮಿರೇ ।

॥ ಸೂತ ಉವಾಚ ॥

ತದಾಪ್ರಭೃತಿ ಚತ್ವಾರಃ ಪ್ರಯಾಗಃ ಪುಷ್ಕರಸ್ತಥಾ ।
ವಾರಾಣಸೀ ಸರ್ವತೀರ್ಥಂ ಪ್ರಾಪುಃ ಸ್ವಸ್ಥಾನಮುತ್ತಮಂ ॥ ೧೪ ॥

॥ ಕುಂಜಲ ಉವಾಚ ॥

ಅಸ್ತಿ ಪಾಂಚಾಲದೇಶೇ ತು ವಿದುರೋ ನಾಮ ಕ್ಷತ್ರಿಯಃ ।
ತೇನ ಲೋಭಪ್ರಸಂಗೇನ ಬ್ರಾಹ್ಮಣೋ ನಿಹತಃ ಪುರಾ ॥ ೧೫ ॥

ಶಿಖಾಸೂತ್ರವಿಹೀನಸ್ತು ತಿಲಕೇನ ವಿವರ್ಜಿತಃ ।
ಭಿಕ್ಷಾರ್ಥಮಟತೇ ಸೋಽಹ್ನಿ ಬ್ರಹ್ಮಘ್ನೋಽಹಂ ಸಮಾಗತಃ ॥ ೧೬ ॥

ಬ್ರಹ್ಮಘ್ನಾಯ ಸುರಾಪಾಯ ಭಿಕ್ಷಾ ಚಾನ್ನಂ ಪ್ರದೀಯತಾಂ ।
ಗೃಹೇಷ್ವೇವಂ ಸಮಸ್ತೇಷು ಭ್ರಮತೇ ಯಾಚತೇ ಪುರಾ ॥ ೧೭ ॥

ಏವಂ ಸರ್ವೇಷು ತೀರ್ಥೇಷು ಅಟನ್ನೇವ ಸಮಾಗತಃ ।
ಬ್ರಹ್ಮಹತ್ಯಾ ತತಸ್ತಸ್ಯ ನ ಯಾತಿ ದ್ವಿಜಸತ್ತಮ ॥ ೧೮ ॥

---

೧೪. ಸೂತನು ಹೇಳಿದನು:—ಆಗ ಪ್ರಯಾಗ, ಪುಷ್ಕರ, ವಾರಾಣಸೀ, ಮೊದಲಾದ ಸರ್ವತೀರ್ಥಗಳು ಸ್ವಸ್ಥಾನಕ್ಕೆ ಬಂದವು.

೧೫. ಕುಂಜಲನು ಹೇಳಿದನು:—ಪಾಂಚಾಲ ದೇಶದಲ್ಲಿ ವಿದುರನೆಂಬ ಕ್ಷತ್ರಿಯನಿದ್ದನು. ಆತನು ಯಾವುದೋ ಲೋಭದಿಂದ ಒಬ್ಬ ಬ್ರಾಹ್ಮಣನನ್ನು ಕೊಂದನು.

೧೬-೧೭. ಜುಟ್ಟುಜನಿವಾರಗಳಿಲ್ಲದೆ, ಹಣೆಗಿಟ್ಟುಕೊಳ್ಳದೆ, ಭಿಕ್ಷೆಗೋಸ್ಕರ ಬ್ರಹ್ಮಘ್ನನು ಬಂದಿದ್ದೇನೆ. ಬ್ರಹ್ಮಘ್ನನೂ ಸುರಾಪಾಯಿಯೂ ಆದ ನನಗೆ ಭಿಕ್ಷೆಯನ್ನು ಕೊಡಿ ಎಂದು ಎಲ್ಲರ ಮನೆಯಲ್ಲಿಯೂ ಯಾಚಿಸುತ್ತಿದ್ದನು.

೧೮. ಹೀಗೆಯೇ ಎಲ್ಲಾ ತೀರ್ಥಗಳಲ್ಲೂ ಸುತ್ತಿದನು. ಅವನ ಬ್ರಹ್ಮಹತ್ಯೆಯು ಎಲ್ಲೆಲ್ಲಿಯೂ ಹೋಗಲೇ ಇಲ್ಲ.

ವೃಕ್ಷಚ್ಛಾಯಾಂ ಸಮಾಶ್ರಿತ್ಯ ದಹ್ಯಮಾನೇನ ತೇಜಸಾ ।
ಸಂಸ್ಥಿತೋ ವಿದುರಃ ಪಾಪೀ ದುಃಖಶೋಕಸಮನ್ವಿತಃ ॥ ೧೯ ॥

ಚಂದ್ರಶರ್ಮಾ ತತೋ ವಿಪ್ರೋ ಮಹಾಮೋಹೇನ ಪೀಡಿತಃ ।
ನಿವಸನ್ಮಾಗಧೇ ದೇಶೇ ಗುರುಘಾತಕ ಉಚ್ಯತೇ ॥ ೨೦ ॥

ಸ್ವಜನೈರ್ಬಂಧುವರ್ಗೈಶ್ಚ ಪರಿತ್ಯಕ್ತೋ ದುರಾತ್ಮವಾನ್ ।
ಸ ತತ್ರ ಹಿ ಸಮಾಯಾತೋ ಯತ್ರಾಸೌ ವಿದುರಸ್ಸ್ಥಿತಃ ॥ ೨೧ ॥

ಶಿಖಾಸೂತ್ರವಿಹೀನಸ್ತು ವಿಪ್ರಲಿಂಗೈರ್ವಿವರ್ಜಿತಃ ।
ತದಾಸೌ ಪೃಚ್ಛಿತಸ್ತೇನ ವಿದುರೇಣ ದುರಾತ್ಮನಾ ।
ಭವಾನ್ಕೋ ಹಿ ಸಮಾಯಾತೋ ದುರ್ಭಗೋ ದಗ್ಧಮಾನಸಃ ।
ವಿಪ್ರಲಿಂಗೈರ್ವಿಹೀನಸ್ತು ಕಸ್ಮಾತ್ತ್ವಂ ಭ್ರಮತೇ ಮಹೀಂ ॥ ೨೨ ॥

ವಿದುರೇಣೋದಿತಃ ಸೋಽಪಿ ಚಂದ್ರಶರ್ಮಾ ದ್ವಿಜೋತ್ತಮಃ ।
ಆಚಷ್ಟೇ ಸರ್ವಮೇವಾಪಿ ಯಥಾಪೂರ್ವಂ ಕೃತಂ ಸ್ವಕಂ ॥ ೨೩ ॥

---

೧೯. ಹೀಗಿರಲು ಕ್ರೂರವಾದ ತೇಜಸ್ಸಿನಿಂದ ಕೂಡಿದ ಆ ಪಾಪಿಯಾದ ವಿದುರನು ದುಃಖದಿಂದ ಕೂಡಿ ಒಂದು ಮರದ ನೆರಳಿನಲ್ಲಿ ಕುಳಿತ್ತಿದ್ದನು.

೨೦. ಮಹಾಮೋಹದಿಂದ ಕೂಡಿದ ಚಂದ್ರಶರ್ಮನೆಂಬ ಗುರುಘಾತಕಿಯಾದ ಒಬ್ಬ ಬ್ರಾಹ್ಮಣನು ಮಗಧದೇಶದಲ್ಲಿದ್ದನು.

೨೧. ಆ ದುಷ್ಟನು ಬಂಧುಗಳಿಂದಲೂ ಮಿತ್ತರಿಂದಲೂ ಬಿಡಲ್ಪಟ್ಟು ಜುಟ್ಟು ಜನಿವಾರ ಮುಂತಾದ ಬ್ರಾಹ್ಮಣಸೂಚಕವಾದ ಚಿಹ್ನೆಗಳನ್ನು ತ್ಯಜಿಸಿ ಸುತ್ತುತ್ತಾ ಈ ವಿದುರನು ಕುಳಿತಿದ್ದಲ್ಲಿಗೆ ಬಂದನು.

೨೨. ದರಿದ್ರನಾಗಿ ಶೂನ್ಯ ಮನಸ್ಸುಳ್ಳವನಾಗಿ ಬ್ರಾಹ್ಮಣನ ಗುರುತುಗಳಿಲ್ಲದೆ ಬಂದಿರುವ ನೀನಾರು? ಏತಕ್ಕೋಸ್ಕರ ಭೂಮಿಯನ್ನು ಸುತ್ತುತ್ತಿದ್ದೀಯೆ? ಎಂದು ಆ ವಿದುರನು ಕೇಳಿದನು.

೨೩. ವಿದುರನು ಹೀಗೆ ಕೇಳಲು ಚಂದ್ರಶರ್ಮನು ತನ್ನ ಹಿಂದಿನ ವಿಷಯವನ್ನೆಲ್ಲಾ ಕ್ರಮವಾಗಿ ಹೇಳಿದನು.

ಪಾತಕಂ ಚ ಮಹಾಘೋರಂ ವಸತಾ ಚ ಗುರೋರ್ಗೃಹೇ ।
ಮಹಾಮೋಹಗತೇನಾಪಿ ಕ್ರೋಧೇನಾಕುಲಚೇತಸಾ ॥ ೨೪ ॥

ಗುರೋರ್ಘಾತಃ ಕೃತಃ ಪೂರ್ವಂ ಯೇನ ದಗ್ಧೋಽಸ್ಮಿ ಸಾಂಪ್ರತಂ ।
ಸ್ವವೃತ್ತಾಂತಂ ನಿವೇದ್ಯೈವಂ ಚಂದ್ರಶರ್ಮಾಪ್ಯಪೃಚ್ಛತ ॥ ೨೫ ॥

ಭವಾನ್ಕೋ ಹಿ ಸುದುಃಖಾತ್ಮಾ ವೃಕ್ಷಚ್ಛಾಯಾಂ ಸಮಾಶ್ರಿತಃ ।
ವಿದುರೇಣ ಸಮಾಸೇನ ಆತ್ಮಪಾಪಂ ನಿವೇದಿತಂ ॥ ೨೬ ॥

ಅಥ ಕಶ್ಚಿದ್ದ್ವಿಜಃ ಪ್ರಾಪ್ತಸ್ತೃತೀಯಃ ಶ್ರಮಕರ್ಷಿತಃ ।
ವೇದಶರ್ಮೇತಿ ವೈ ನಾಮ್ನಾ ಬಹುಪಾತಕಸಂಚಯಃ ॥ ೨೭ ॥

ದ್ವಾಭ್ಯಾಮಪಿ ಚ ಸಂಪೃಷ್ಟಃ ಕೋ ಭವಾನ್ದುಷ್ಕೃತಾಕೃತಿಃ ।
ಕಸ್ಮಾದ್ಭ್ರಮಸಿ ಪೃಥ್ವೀಂ ತ್ವಮಾತ್ಮಭಾವಂ ನಿವೇದಯ ॥ ೨೮ ॥

ವೇದಶರ್ಮಾ ತತಸ್ಸರ್ವಮಾತ್ಮಚೇಷ್ಟಿತಮೇವ ಚ ।
ಕಥಯಾಮಾಸ ತಾಭ್ಯಾಂ ವೈ ಹ್ಯಗಮ್ಯಾಗಮನಂ ಕೃತಂ ॥ ೨೯ ॥

---

೨೪. ಗುರುವಿನ ಮನೆಯಲ್ಲಿದ್ದುಕೊಂಡಿದ್ದಾಗ ಮಹಾಮೋಹದಿಂದ ಗುರುಹತ್ಯವೆಂಬ ಮಹಾಪಾಪವನ್ನು ಮಾಡಿದೆನು. ಆದ್ದರಿಂದ ಈಗ ಈ ದುಃಸ್ಥಿತಿಯನ್ನು ಹೊಂದಿದ್ದೇನೆ.

೨೫-೨೬. ಚಂದ್ರಶರ್ಮನು ತನ್ನ ವಿಷಯವನ್ನು ಹೇಳಿ ಆ ವಿದುರನನ್ನು ಕುರಿತು, ನೀನಾರು? ಏಕೆ ದುಃಖವನ್ನು ಹೊಂದಿದ್ದೀಯೆ? ಏತಕ್ಕೆ ಈ ಮರದ ನೆರಳಿನಲ್ಲಿ ಕೂತಿದ್ದೀಯೆ? ಎನ್ನಲು ವಿದುರನು ಸಂಗ್ರಹವಾಗಿ ಎಲ್ಲವನ್ನೂ ತಿಳಿಸಿದನು.

೨೭. ಬಹು ಪಾತಕಿಯಾದ ವೇದಶರ್ಮನೆಂಬ ಮತ್ತೊಬ್ಬನು ಶ್ರಮದಿಂದ ಕೂಡಿದವನಾಗಿ ಅಲ್ಲಿಗೆ ಬಂದನು.

೨೮. ಪಾಪಿಯಾದ ಶರೀರವುಳ್ಳ ನೀನಾರು? ಭೂಮಿಯನ್ನೇಕೆ ಸುತ್ತುತ್ತೀಯೆ? ನಿನ್ನ ವಿಷಯವನ್ನು ಹೇಳು. ಎಂದು ಅವರಿಬ್ಬರೂ ಕೇಳಿದರು.

೨೯-೩೦. ನಾನು ಅಗಮ್ಯಾಗಮನವನ್ನು ಮಾಡಿದೆನು. ಜನರೆಲ್ಲರೂ ಧಿಕ್ಕರಿಸಿದರು. ಸ್ವಜನಬಾಂಧವರೂ ಕೂಡ ತಿರಸ್ಕರಿಸಿದರು. ಆ ಪಾಪದಿಂದ ಲಿಪ್ತನಾಗಿ

ಧಿಕ್ಕೃತಸ್ಸರ್ವಲೋಕೈಶ್ಚ ಅನ್ಯೈಸ್ಸ್ವಜನಬಾಂಧವೈಃ ।
ತೇನ ಪಾಪೇನ ಸಂಲಿಪ್ತೋ ಭ್ರಮಾಮ್ಯೇವಂ ಮಹೀಮಿಮಾಂ ॥ ೩೦ ॥

ಮಂಜುಳೋ ನಾಮ ವೈಶ್ಯೋಽಥ ಸುರಾಪಾಯೀ ಸಮಾಗತಃ ।
ಸ ಗೋಘ್ನಸ್ತು ವಿಶೇಷೇಣ ತೈಶ್ಚ ಪೃಷ್ಟೋ ಯಥಾ ಪುರಾ ॥ ೩೧ ॥

ತೇಭ್ಯ ಆವೇದಿತಂ ತೇನ ಯಥಾಜಾತಂ ಸ್ವಪಾತಕಂ ।
ತೈಸ್ತಥಾಕರ್ಣಿತಂ ಸರ್ವಂ ಸಮುಕ್ತಸ್ಯ ಪ್ರಭಾಷಿತಂ ॥ ೩೨ ॥

ಚತ್ವಾರ ಏವಂ ಪಾಪಿಷ್ಠಾ ಏಕಸ್ಥಾನಂ ಸಮಾಗತಾಃ ।
ಕಃ ಕಸ್ಯಾಪಿ ನ ಸಂಪರ್ಕಂ ಭೋಜನಾಚ್ಛಾದನೇನ ಚ ॥ ೩೩ ॥

ಕರೋತಿ ಚ ಮಹಾಭಾಗ ವಾರ್ತಾಂ ಚಕ್ರುಃ ಪರಸ್ಪರಂ ।
ನ ವಿಶಂತ್ಯಾಸನೇ ಚೈಕೇ ನ ಸ್ವಪಂತ್ಯೇಕಸಂಸ್ತರೇ ॥ ೩೪ ॥

ಏವಂ ದುಃಖಸಮಾವಿಷ್ಟಾ ನಾನಾತೀರ್ಥೇಷು ತೇ ಗತಾಃ ।
ಏತೇಷಾಂ ಪಾತಕಾ ಘೋರಾ ನ ನಶ್ಯಂತಿ ಚ ನಂದನ ॥ ೩೫ ॥

---

ದ್ದೇನೆ. ಆದ್ದರಿಂದ ಹೀಗೆ ಭೂಮಿಯನ್ನು ಸುತ್ತುತ್ತಿದ್ದೇನೆ. ಎಂದು ವೇದಶರ್ಮನು ತಾನು ಮಾಡಿದುದನ್ನೆಲ್ಲಾ ಹೇಳಿದನು

೩೧. ಗೋಹತ್ಯಮಾಡಿದ, ಸುರೆಯನ್ನು ಪಾನಮಾಡುತ್ತಿದ್ದ ಮಂಜುಳನೆಂಬ ವೈಶ್ಯನೋರ್ವನು ಅಲ್ಲಿಗೆ ಬಂದನು. ಅವನನ್ನು ಸಮಾಚಾರವೇನೆಂದರು.

೩೨. ತಾನು ಮಾಡಿದ ಪಾಪವನ್ನು ಸ್ವಲ್ಪವೂ ಬಿಡದೆ ಅವರಿಗೆ ಹೇಳಿದನು. ಅವನ ಮಾತೆಲ್ಲವನ್ನೂ ಅವರು ಚನ್ನಾಗಿ ಕೇಳಿದರು.

೩೩-೩೪. ಹೀಗೆ ಆ ನಾಲ್ಕು ಜನ ಪಾಪಿಷ್ಠರೂ ಒಂದೆಡೆಯಲ್ಲಿ ಸೇರಿದರು. ಊಟಉಡಿಗೆಗಳಲ್ಲಿ ಒಬ್ಬರೊಬ್ಬರಿಗೆ ಸಂಪರ್ಕವಿಲ್ಲ. ಒಂದೇ ಆಸನದಲ್ಲಿ ಏಕವಾಗು ವಂತೆ ಮಲಗುವುದಿಲ್ಲ. ಆದರೆ ಒಂದೇ ಕಡೆ ಇದ್ದುಕೊಂಡು ಮಾತುಕಥೆಗಳ ನ್ನಾಡುತ್ತಿದ್ದರು.

೩೫. ಈ ರೀತಿ ದುಃಖಗೊಂಡು ಎಲ್ಲಾ ತೀರ್ಥಗಳನ್ನು ಹೊಂದಿ ಅವರು ಸೇವಿಸುತ್ತಿದ್ದರು. ಆದರೂ ಇವರ ಪಾಪಗಳು ಹೋಗಲೇ ಇಲ್ಲ.

**ಸಾಮರ್ಥ್ಯಂ ನಾಸ್ತಿ ತೀರ್ಥಾನಾಂ ಮಹಾಪಾತಕನಾಶನೇ ।**
**ವಿದುರಾದ್ಯಾಸ್ತತಸ್ತೇತು ಗತಾಂ ಕಾಲಂಜರಂ ಗಿರಿಂ ॥ ೩೬ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಏಕನವತಿತಮೋಽಧ್ಯಾಯಃ**



---

೩೬. ಈ ತೀರ್ಥಗಳಿಗೆ ಮಹಾಪಾಪವನ್ನು ನಾಶಮಾಡುವುದಕ್ಕೆ ಶಕ್ತಿಯೇ ಇಲ್ಲ. ಅನಂತರ ವಿದುರಾದಿ ನಾಲ್ಕು ಜನರೂ ಕಾಲಂಜರಗಿರಿಗೆ ಹೋದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವಿನವತಿತಮೋಽಧ್ಯಾಯಃ

---

॥ ಕುಂಜಲ ಉವಾಚ ॥

ಕಾಲಂಜರಂ ಸಮಾಸಾದ್ಯ ನಿವಸಂತಿ ಸುದುಃಖಿತಾಃ ।
ಮಹಾಪಾಪೈಸ್ತು ಸಂದಗ್ಧಾ ಹಾಹಾಭೂತಾ ವಿಚೇತನಾಃ ॥ ೧ ॥

ತತ್ರ ಕಶ್ಚಿತ್ಸಮಾಯಾತಃ ಸಿದ್ಧರೂಪೀ ದ್ವಿಜೋತ್ತಮಃ ।
ತೇನ ಪೃಷ್ಟಾಸ್ತು ದುಃಖಾರ್ತಾ ಭವಂತಃ ಕೇನ ದುಃಖಿತಾಃ ॥ ೨ ॥

ಸ ತೈಃ ಪ್ರೋಕ್ತೋ ಮಹಾಪ್ರಾಜ್ಞಃ ಸರ್ವಜ್ಞಾನವಿಶಾರದಃ ।
ತೇಷಾಂ ಜ್ಞಾತ್ವಾ ಮಹಾಪಾಪಾನ್ ಕೃಪಾಂ ಚಕ್ರೇ ಸುಪುಣ್ಯಭಾಕ್ ॥ ೩ ॥

---

## ತೊಂಭತ್ತೆರಡನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಮಹಾಪಾಪಗಳಿಂದ ಕೂಡಿದ ಇವರು ದುಃಖಗೊಂಡ ಮನಸ್ಸುಳ್ಳವರಾಗಿ ಆ ಕಾಲಂಜರಗಿರಿಯಲ್ಲಿ ವಾಸಿಸುತ್ತಿದ್ದರು.

೨. ಅಲ್ಲಿಗೆ ಒಬ್ಬ ಸಿದ್ಧನಂತಿರುವ ಬ್ರಾಹ್ಮಣನು ಬಂದು ಇವರನ್ನು ನೀವೇಕೆ ದುಃಖಗೊಂಡಿದ್ದೀರೆಂದು ಕೇಳಿದನು.

೩. ಅವರು ಹೇಳಿದುದನ್ನೆಲ್ಲಾ ಕೇಳಿ ಆ ಜ್ಞಾನಿಯು ಅವರು ಮಹಾಪಾತಕಿಗಳೆಂದು ತಿಳಿದು ಅವರಲ್ಲಿ ಕೃಪೆ ತೋರಿಸಿದನು.

॥ ಸಿದ್ಧ ಉವಾಚ ॥

ಅಮಾಸೋಮಾಸಮಾಯೋಗೇ ಪ್ರಯಾಗಃ ಪುಷ್ಕರಸ್ತಥಾ ।
ಸರ್ವತೀರ್ಥಸ್ತೃತೀಯಸ್ತು ವಾರಾಣಸೀ ಚತುರ್ಥಿಕಾ ॥ ೪ ॥

ಗಚ್ಛಥೈಷು ಚ ವೈ ಯೂಯಂ ಚತ್ವಾರಃ ಪಾಪಕಾರಿಣಃ ।
ಗಂಗಾಂಭಸಿ ಯದಾ ಸ್ನಾತಾಸ್ತದಾ ಮುಕ್ತಾ ಭವಿಷ್ಯಥ ।
ಪಾತಕೇಭ್ಯೋ ನ ಸಂದೇಹೋ ನಿರ್ಮಲತ್ವಂ ಗಮಿಷ್ಯಥ ॥ ೫ ॥

ಆದಿಷ್ಟಾಸ್ತೇನ ತೇ ಸರ್ವೇ ಪ್ರಣೇಮುಸ್ತಂ ಪ್ರಯತ್ನತಃ ।
ಕಾಲಂಜರಾತ್ತತೋ ಜಗ್ಮುಃ ಸತ್ವರಂ ಪಾಪಪೀಡಿತಾಃ ॥ ೬ ॥

ವಾರಾಣಸೀಂ ಸಮಾಸಾದ್ಯ ಸ್ನಾತ್ವಾ ಚೈವ ದ್ವಿಜೋತ್ತಮ ।
ಪ್ರಯಾಗಂ ಪುಷ್ಕರಂ ಚೈವ ಸರ್ವತೀರ್ಥಂ ತು ಸತ್ವರಾಃ ॥ ೭ ॥

ಅಮಾಸೋಮಸಮಾಯೋಗೇ ಜಗ್ಮುಸ್ತೇ ಪಾಪಕೃತ್ತಮಾಃ ।
ವಿದುರಶ್ಚಂದ್ರಶರ್ಮಾ ಚ ವೇದಶರ್ಮಾ ತೃತೀಯಕಃ ।
ಗೋಘ್ನೋಽಥ ವಂಜುಳಶ್ಚೈವ ಸುರಾಪಃ ಪಾಪಚೇತನಃ ॥ ೮ ॥

---

೪. ಸಿದ್ಧನು ಹೇಳಿದನು:—ಅಮಾವಾಸ್ಯೆ ಸೋಮವಾರದ ದಿನ ಪ್ರಯಾಗ, ಪುಷ್ಕರ, ವಾರಣಾಸಿ, ಸರ್ವತೀರ್ಥ ಎಂಬ ನಾಲ್ಕು ತೀರ್ಥಗಳಿವೆ. ಮಹಾಪಾಪ ಮಾಡಿದ ನೀವು ಆ ಜಾಗಗಳಿಗೆ ಹೋಗಿರಿ.

೫. ಈ ನಾಲ್ಕು ಜಾಗದಲ್ಲಿಯೂ ಗಂಗೆಯು ಹರಿಯುತ್ತದೆ. ಆ ಸ್ಥಳದ ಗಂಗೆಯ ಪ್ರವಾಹದಲ್ಲಿ ನೀವು ಸ್ನಾನ ಮಾಡಿದರೆ ಪಾತಕದಿಂದ ಮುಕ್ತರಾಗುತ್ತೀರಿ.

೬. ಅವನು ಅಪ್ಪಣೆಮಾಡಿದಂತೆ ಅವರು ಅವನಿಗೆ ನಮಸ್ಕಾರ ಮಾಡಿ ಹೊರಟರು. ಪಾಪಪೀಡಿತರಾದ ಅವರು ಕಾಲಂಜರದಿಂದ ಜಾಗ್ರತೆ ಹೊರಟರು.

೭. ವಾರಾಣಸಿಗೆ ಹೋಗಿ ಅಲ್ಲಿ ಸ್ನಾನಮಾಡಿ ಅನಂತರ ಪ್ರಯಾಗ, ಪುಷ್ಕರ, ಸರ್ವತೀರ್ಥ ಇವುಗಳಿಗೂ ಹೋಗಿ ಅಮಾವಾಸ್ಯೆ ಸೋಮವಾರದ ಯೋಗದಲ್ಲಿ ಸ್ನಾನ ಮಾಡಿದರು.

೮-೯. ವಿದುರ, ಚಂದ್ರಶರ್ಮ, ವೇದಶರ್ಮ, ವಂಜುಳ, ಈ ಮಹಾಪಾತಕಿ

ತಸ್ಮಿನ್ಪರ್ವಣಿ ಸಂಪ್ರಾಪ್ತೇ ಸ್ನಾತಾ ಗಂಗಾಂಭಸಿ ದ್ವಿಜ ।
ಸ್ನಾನಮಾತ್ರೇಣ ಮುಕ್ತಾಸ್ತು ಗೋವಧಾದ್ಯೈಸ್ತು ಕಿಲ್ಬಿಷೈಃ ॥ ೯ ॥

ಬ್ರಹ್ಮಹತ್ಯಾಗುರುಹತ್ಯಾಸುರಾಪಾನಾದಿಪಾತಕೈಃ ।
ಲಿಪ್ತಾನಿ ತಾನಿ ತೀರ್ಥಾನಿ ಪರಿಭ್ರಮಂತಿ ಮೇದಿನೀಂ ॥ ೧೦ ॥

ಪುಷ್ಕರಸ್ಸರ್ವತೀರ್ಥಶ್ಚ ಪ್ರಯಾಗಃ ಪಾಪನಾಶನಃ ।
ವಾರಾಣಸೀ ಚತುರ್ಥಾ ತು ಲಿಪ್ತಾ ಪಾಪೈರ್ದ್ವಿಜೋತ್ತಮ ॥ ೧೧ ॥

ಕೃಷ್ಣತ್ವಂ ಪೇದಿರೆ ಸರ್ವೇ ಹಂಸರೂಪೇಣ ಬಭ್ರಮುಃ ।
ಸರ್ವೇಷ್ವೇವ ಸುತೀರ್ಥೇಷು ಸ್ನಾನಂ ಚಕ್ರುರ್ದ್ವಿಜೋತ್ತಮಾಃ ॥ ೧೨ ॥

ಕೃಷ್ಣತ್ವಂ ಮುಚ್ಯತೇ ನೈವ ತೇಷಾಂ ಪಾಪೇನ ಚಾಗತಂ ।
ಸುತೀರ್ಥೇಷು ಮಹಾರಾಜ ಸ್ನಾತಾಸ್ಸರ್ವೇಷು ವೈ ಪುನಃ ॥ ೧೩ ॥

ಯದ್ಯತ್ತೀರ್ಥಂ ಪ್ರಯಾಂತ್ಯೇತೇ ಸರ್ವತೀರ್ಥಾ ದ್ವಿಜೋತ್ತಮ ।
ಹಂಸರೂಪೇಣ ತೇ ಯಾಂತಿ ತೈಶ್ಚ ಸಾರ್ಥಂ ಸುದುಃಖಿತಾಃ ॥ ೧೪ ॥

---

ಗಳು ಆ ಪರ್ವತಿಥಿಯಲ್ಲಿ ಗಂಗಾಜಲದಲ್ಲಿ ಸ್ನಾನಮಾಡಿದರು. ಸ್ನಾನಮಾಡಿದ ಮಾತ್ರದಿಂದಲೇ ಆ ಗೋವಧಾದಿ ಪಾಪಗಳಿಂದ ಮುಕ್ತರಾದರು.

೧೦. ಬ್ರಹ್ಮಹತ್ಯೆ, ಗುರುಹತ್ಯೆ, ಸುರಾಪಾನ ಮೊದಲಾದ ಪಾಪಗಳಿಂದ ಆ ತೀರ್ಥಗಳು ಲೇಪಹೊಂದಿವೆ. ಆದ್ದರಿಂದ ಭೂಮಿಯನ್ನು ಸುತ್ತುತ್ತವೆ.

೧೧-೧೨. ಪುಷ್ಕರ, ಸರ್ವತೀರ್ಥ, ವಾರಾಣಸಿ, ಪ್ರಯಾಗ, ಇವು ಪಾಪಗಳಿಂದ ಲಿಪ್ತವಾಗಿ ಕಪ್ಪಾದವು. ಅವು ಹಾಗೆ ಕಪ್ಪಾಗಿ ಹಂಸರೂಪದಿಂದ ಪ್ರಪಂಚವನ್ನು ಸುತ್ತಿದವು. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದವು.

೧೩. ಆ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದರೂ ಅವರ ಪಾಪದಿಂದ ಬಂದ ಕಪ್ಪು ಹೋಗಲೇ ಇಲ್ಲ.

೧೪. ಆ ನಾಲ್ಕು ತೀರ್ಥಗಳು ಸ್ನಾನಕ್ಕೋಸ್ಕರ ಯಾವಯಾವ ತೀರ್ಥಕ್ಕೆ ಹೋಗುತ್ತವೆಯೋ ಅವುಗಳ ಹಿಂದೆ ಉಳಿದ ತೀರ್ಥಗಳು ಅವುಗಳಿಗೋಸ್ಕರ ದುಃಖ ಪಡುತ್ತಾ ಹಂಸರೂಪವನ್ನು ಹೊಂದಿ ಹಿಂದೆ ಹೋಗುತ್ತಿರುತ್ತವೆ.

ಭಾರ್ಯಾಃ ಪಾತಕರೂಪಾಶ್ಚ ಭ್ರಮಂತಿ ಪರಿತಸ್ತಥಾ ।
ಅಷ್ಟಷಷ್ಟಿಸ್ತೀರ್ಥಾನಿ ಹಂಸರೂಪೇಣ ಬಭ್ರಮುಃ ॥ ೧೫ ॥

ತೈಶ್ಚ ಸಾರ್ಧಂ ಮಹಾರಾಜ ಮಹಾತೀರ್ಥಸಮಂ ಪುನಃ ।
ಮಾನಸಂ ಚ ಗತಾ ಸ್ತೇ ಚ ಪಾತಕಾಕುಲಮಾನಸಾಃ ॥ ೧೬ ॥

ತತ್ರ ಸ್ನಾತಾ ಮಹಾರಾಜ ನ ಜಹಾತಿ ಚ ಪಾತಕಂ ।
ಲಜ್ಜಯಾವಿಷ್ಟಮನಸಾ ಮಾನಸೋ ಹಂಸರೂಪಧೃಕ್ ।
ಸಂಜಾತಃ ಕೃಷ್ಣಕಾಯಶ್ಚ ಯಂ ತ್ವಂ ವೈ ದೃಷ್ಟವಾನ್ಪುರಾ ॥ ೧೭ ॥

ರೇವಾತೀರಂ ತತೋ ಜಗ್ಮುಸ್ತ್ವತ್ಸಾರ್ಧಂ ಪಾಪನಾಶನಂ ।
ರೇವಾಯಾಃ ಸಂಗಮೇ ಪುಣ್ಯೇ ಸುರಸಿದ್ಧನಿಷೇವಿತೇ ॥ ೧೮ ॥

ಸ್ನಾನಮಾತ್ರೇಣ ಮುಕ್ತಾಸ್ತೇ ಪಾಪೇಭ್ಯೋ ದ್ವಿಜಸತ್ತಮ ।
ವಿಹಾಯ ಏವಂ ತಂ ವರ್ಣಂ ಶುದ್ಧಿತ್ವಂ ಪ್ರತಿಜಗ್ಮಿರೇ ॥ ೧೯ ॥

---

೧೫. ಪಾತಕರೂಪವಾದ ಅವುಗಳ ಹೆಂಡಿರುಗಳು ಹಂಸರೂಪಿನಿಂದ ಅರವತ್ತೆಂಟು ತೀರ್ಥಗಳನ್ನು ಸುತ್ತಿದುವು.

೧೬. ಅವುಗಳ ಆ ಹೆಂಡಿರೂ ಮಹಾತೀರ್ಥಕ್ಕೆ ಸಮವಾದ ಮಾನಸವನ್ನು ಪಾಪನಾಶಕ್ಕೋಸ್ಕರ ಹೊಂದಿದುವು. ಅಲ್ಲಿ ಸ್ನಾನಮಾಡಿದರೂ ಅದು ಹೋಗಲಿಲ್ಲ.

೧೭. ಆಗ ಮಾನಸಸರೋವರವು ಲಜ್ಜೆಯಿಂದ ಕಪ್ಪುರೂಪವನ್ನು ಧರಿಸಿದ ಹಂಸವಾಯಿತು. ಅದನ್ನೇ ನೀನು ಮೊದಲು ನೋಡಿದುದು.

೧೮. ಆ ಹಂಸರೂಪಧಾರಿಗಳು ಮಾನಸದೊಡನೆ ರೇವಾತೀರಕ್ಕೆ ಹೋದವು. ದೇವತೆಗಳು, ಸಿದ್ಧರುಗಳಿಂದ ಸೇವಿಸಲ್ಪಟ್ಟ ರೇವಾಸಂಗಮದಲ್ಲಿ ಸ್ನಾನಮಾಡಿದ ಮಾತ್ರದಿಂದ ಅವು ಆ ಪಾಪದಿಂದ ಮುಕ್ತವಾದವು.

೧೯. ಆ ಕಪ್ಪುಬಣ್ಣವನ್ನು ಬಿಟ್ಟು ಅವು ಶುದ್ಧವಾದ ಬಣ್ಣವನ್ನು ಹೊಂದಿದವು.

ಯಂ ಯಂ ತೀರ್ಥಂ ಪ್ರಯಾಂತ್ಯೇತೇ ಗತ್ವಾ ಸ್ನಾನಂ ಪ್ರಚಕ್ರಮುಃ ।
ಜಹಸುಸ್ತಾಸ್ತ್ರಿಯೋ ದೃಷ್ಟ್ವಾ ಕೃಷ್ಣತ್ವಂ ನೈವ ಗಚ್ಛತಿ ॥ ೨೦ ॥

ತೋಯಾನಲೇನ ಕುಬ್ಜಾಯಾಃ ಪಾತಕಂ ಪರಮೇವ ಚ ।
ಭಸ್ಮಾವಶೇಷಂ ಸಂಜಾತಂ ತದಾ ಮೃತಾಸ್ತು ತಾಸ್ತ್ರಿಯಃ ॥ ೨೧ ॥

ಬ್ರಹ್ಮಹತ್ಯಾಗುರುಹತ್ಯಾಸುರಾಪಾನಾಗಮಾಗಮಾಃ ।
ಭಸ್ಮೀಭೂತಾಸ್ತು ಸಂಜಾತಾ ರೇವಯಾ ಕುಬ್ಜಯಾ ಹತಾಃ ॥ ೨೨ ॥

ತಾಸ್ತು ಹತಾ ಮಹಾಭಾಗ ಯಾ ಮೃತಾಸ್ತು ಸರಿತ್ತಟೇ ।
ಅಷ್ಟಷಷ್ಟಿಸ್ತು ತೀರ್ಥಾನಾಂ ಹಂಸರೂಪೇಣ ಬಭ್ರಮುಃ ॥ ೨೩ ॥

ಸಾರ್ಥಂ ಹಂಸಃ ಸಮಾಯಾತೋ ವಿದ್ಧಿ ತ್ವಂ ತತ್ತು ಮಾನಸಂ ।
ಕೃಷ್ಣಹಂಸಾಸ್ತು ಚತ್ವಾರಸ್ತೇಷಾಂ ನಾಮಾನಿ ಮೇ ಶೃಣು ॥ ೨೪ ॥

ಪ್ರಯಾಗಃ ಪುಷ್ಕರಶ್ಚೈವ ಸರ್ವತೀರ್ಥಸ್ತಥೈವ ಚ ।
ವಾರಾಣಸೀ ಚತುರ್ಥೀ ಚ ಪುತ್ರ ಜಾತಾಘನಾಶನಾ ॥ ೨೫ ॥

---

೨೦. ಯಾವಯಾವ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೂ ಕಪ್ಪು ಹೋಗದಿರಲು ನೋಡಿ ಆ ಹೆಣ್ಣು ಹಂಸಗಳು ಹಾಸ್ಯಮಾಡಿ ನಕ್ಕವು.

೨೧. ಕುಬ್ಜಾ ನದಿಯ ಸಂಗಮದ ತೀರ್ಥದಲ್ಲಿ ಆ ಪಾತಕವು ನಾಶವಾಯಿತು. ಆಗ ಆ ಸ್ತ್ರೀಹಂಸಗಳು ಮೃತವಾದವು.

೨೨. ಬ್ರಹ್ಮಹತ್ಯೆ, ಗುರುಹತ್ಯೆ ಸುರಾಪಾನ, ಅಗಮ್ಯಾಗಮನಗಳು ಭಸ್ಮವಾದವು. ರೇವಾಕುಬ್ಜೆಗಳ ಸಂಗಮದ ಮಹಿಮೆಯು ಅಂಥಾದ್ದು.

೨೩. ಆ ನದಿಯ ದಡದಲ್ಲಿ ಯಾವವು ಸತ್ತವೋ ಆ ಪಾಪವೆಲ್ಲಾ ಹತವಾದವು. ಅರವತ್ತೆಂಟು ತೀರ್ಥಗಳು ಹಂಸರೂಪದಿಂದ ಸುತ್ತಿದವು.

೨೪. ಅವುಗಳ ಜೊತೆಯಲ್ಲಿ ಆಮೇಲೆ ಬಂದ ಹಂಸವನ್ನು ಮಾನಸವೆಂದು ತಿಳಿ. ನಾಲ್ಕು ಕಪ್ಪುಹಂಸಗಳೆಂದೆಯಲ್ಲಾ, ಅವುಗಳ ಹೆಸರನ್ನು ಕೇಳು.

೨೫. ಪ್ರಯಾಗ, ಪುಷ್ಕರ, ಸರ್ವತೀರ್ಥ, ವಾರಾಣಸೀ, ಇವುಗಳು ಪಾಪನಾಶಕಗಳಾದವು.

ಬ್ರಹ್ಮಹತ್ಯಾಭಿಭೂತಾಶ್ಚ ಬಭ್ರಮುಃ ಸರ್ವತೋ ಮಹೀಂ ।
ತೀರ್ಥಾನ್ಯೇತಾನಿ ದುಃಖೇನ ತೀರ್ಥೇಷು ಚ ಮಹಾಮತೇ ॥ ೨೬ ॥

ನ ಗತಂ ಪಾತಕಂ ಘೋರಂ ತೇಷಾಂ ಚ ಭ್ರಮತಾಂ ಸುತ ।
ಕುಬ್ಜಾಯಾಃ ಸಂಗಮೇ ಶುದ್ಧಾ ವಿಮುಕ್ತಾಃ ಕಿಲ್ಬಿಷಾತ್ಕಿಲ ॥ ೨೭ ॥

ತೀರ್ಥಾನಾಮೇವ ಸರ್ವೇಷಾಂ ಪುಣ್ಯಾನಾಮಿಹ ಸಂಮತಃ ।
ರಾಜಾ ಪ್ರಯಾಗಸ್ಸಂಜಾತ ಇಂದ್ರಸ್ಯ ಪುರತಃ ಕಿಲ ॥ ೨೮ ॥

ತಾವದ್ರಾಜಂತಿ ತೀರ್ಥಾನಿ ಯಾವದ್ರೇವಾ ನ ದೃಶ್ಯತೇ ।
ತಾವದ್ಗರ್ಜಂತಿ ತೀರ್ಥಾನಿ ಯಾವದ್ರೇವಾ ನ ದೃಶ್ಯತೇ ॥ ೨೯ ॥

ಬ್ರಹ್ಮಹತ್ಯಾದಿಕಾನಾಂ ತು ನಾಶನೇ ಸಾ ಪ್ರತಿಷ್ಠಿತಾ ।
ಕಪಿಲಾಸಂಗಮೇ ಪುಣ್ಯೇ ರೇವಾಯಾಃ ಸಂಗಮೇ ತಥಾ ॥ ೩೦ ॥

ಮೇಘನಾದಸಮಾಯೋಗೇ ತಥಾ ಚೈವೋರುಸಂಗಮೇ ।
ಮಹಾಪುಣ್ಯಾ ಮಹಾಧನ್ಯಾ ರೇವಾ ಸರ್ವತ್ರ ದುರ್ಲಭಾ ॥ ೩೧ ॥

---

೨೬. ಇವು ಬ್ರಹ್ಮಹತ್ಯೆಯಿಂದ ತಿರಸ್ಕರಿಸಲ್ಪಟ್ಟು ಭೂಮಿಯಲ್ಲಿರುವ ಎಲ್ಲಾ ತೀರ್ಥಗಳನ್ನು ಸುತ್ತಿದವು.

೨೭. ಅವು ಹಾಗೆ ಸುತ್ತುತ್ತಿದ್ದರೂ ಅವುಗಳ ಪಾಪ ಹೋಗಲಿಲ್ಲ, ಕುಬ್ಜೆಯ ಸಂಗಮದಲ್ಲಿ ಅವುಗಳ ಪಾಪ ಹೋಯಿತು.

೨೮. ಎಲ್ಲಾ ತೀರ್ಥಗಳಿಗೂ ಪ್ರೀತಿಪಾತ್ರವಾದ ಪ್ರಯಾಗವು ಅವೆಲ್ಲಕ್ಕೂ ಇಂದ್ರನ ಮುಂದೆ ರಾಜನಾಗಿ ಮಾಡಲ್ಪಟ್ಟಿತು.

೨೯. ರೇವಾ ನದಿಯ ತೀರ್ಥವು ಕಾಣದಿರುವವರೆಗೂ ತೀರ್ಥಗಳು ಪ್ರಕಾಶಿಸುತ್ತವೆ. ರೇವಾ ತೀರ್ಥವು ಬಾರದಿರುವವರೆಗೆ ತೀರ್ಥಗಳು ಹೆಮ್ಮೆ ಪಡುತ್ತವೆ. ಅನಂತರ ಬಾಯಿ ಮುಚ್ಚಿಕೊಳ್ಳುತ್ತವೆ.

೩೦-೩೧. ಬ್ರಹ್ಮಹತ್ಯಾದಿಗಳ ನಾಶನದಲ್ಲಿ ಆ ರೇವೆಯು ಇಡಲ್ಪಟ್ಟಿದೆ. ಕಪಿಲಾಸಂಗಮ, ರೇವಾಸಂಗಮ, ಮೇಘನಾದಸಂಗಮ, ಊರುಸಂಗಮ, ಇವುಗಳು ಬ್ರಹ್ಮಹತ್ಯಾನಾಶಕಗಳು. ಆದರೆ ರೇವಾಸಂಗಮವು ಎಲ್ಲಾ ಕಡೆಯಲ್ಲಿಯೂ ಸಿಕ್ಕುವುದಿಲ್ಲ. ಅದು ಸಿಕ್ಕುವುದು ಕಷ್ಟ.

**ಸ್ಯೈವೊಂಕಾರೇ ಭೃಗುಕ್ಷೇತ್ರೇ ನರ್ಮದಾ ಕುಬ್ಜಸಂಗಮೇ ।**
**ದುಷ್ಪ್ರಾಪ್ಯಾ ಸಾ ನರೈ ರೇವಾ ಮಾಹಿಷ್ಮತ್ಯಾಂ ಸುತೋತ್ತಮ ॥ ૩೨ ॥**

**ವಿಟಂಕಾಸಂಗಮೇ ಪುಣ್ಯೇ ಕೀಟಕೇ ಮಂಗಳೇಶ್ವರೇ ।**
**ಸರ್ವತ್ರ ದುರ್ಲಭಾ ರೇವಾ ಸುರಪುಣ್ಯಸಮಾಕುಲಾ ॥ ૩૩ ॥**

**ತೀರ್ಥಮಾತಾ ಮಹಾದೇವೀ ಅಘರಾಶಿವಿನಾಶಿನೀ ।**
**ಉಭಯೋಃ ಕೂಲಯೋರ್ಮಧ್ಯೇ ಯತ್ರ ತತ್ರ ನರಸ್ಸುಧೀಃ ॥ ૩೪ ॥**

**ಅಶ್ವಮೇಧಫಲಂ ಭುಂಕ್ತೇ ಸ್ನಾನೇನೈಕೇನ ಮಾನವಃ ।**
**ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ।**
**ಸರ್ವಪಾಪಾಪಹಂ ಪುಣ್ಯಂ ಗತಿದಂ ಚಾಪಿ ಶೃಣ್ವತಾಂ ॥ ૩೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ದ್ವಿನವತಿತಮೋಽಧ್ಯಾಯಃ**

---

૩೨. ಓಂಕಾರದಲ್ಲಿ, ಭೃಗುಕ್ಷೇತ್ರದಲ್ಲಿ, ನರ್ಮದಾ ಕುಬ್ಜ ಸಂಗಮದಲ್ಲಿ, ಮಾಹಿಷ್ಮತಿಯಲ್ಲಿ ರೇವೆಯು ಸಿಕ್ಕುವದು ದುರ್ಲಭವು.

૩૩. ವಿಟಂಕಾ ಸಂಗಮ, ಕೀಟಕ, ಮಂಗಳೇಶ್ವರ, ಇಲ್ಲೆಲ್ಲಿಯೂ ಕೂಡ ಪುಣ್ಯವತಿಯಾದ ರೇವೆಯು ಸಿಕ್ಕುವುದು ಕಷ್ಟ.

૩೪. ಆ ರೇವೆಯು ತೀರ್ಥಗಳಿಗೆ ತಾಯಿಯು. ಪಾಪರಾಶಿಗಳನ್ನು ನಾಶ ಮಾಡುತ್ತದೆ. ಅದರ ಎರಡು ದಡಗಳಲ್ಲಿ ಎಲ್ಲಾದರೂ ಸರಿಯೆ, ಸ್ನಾನ ಮಾಡಿದರೆ ಮನುಷ್ಯನಿಗೆ ಅಶ್ವಮೇಧಫಲ ಲಭಿಸುತ್ತದೆ. ಹೆಚ್ಚು ಬೇಕಿಲ್ಲ. ಒಂದೇ ಸ್ನಾನ ಸಾಕು.

૩೫. ಸರ್ವಪಾಪನಾಶಕವಾದ, ಕೇಳುವವರಿಗೂ ಗತಿದಾಯಕವಾದ ಇದನ್ನು ನೀನು ಕೇಳಿದುದರಿಂದ ಹೇಳಿದೆನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ತೊಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಿನವತಿತಮೋಽಧ್ಯಾಯಃ

॥ ಕುಂಜಲ ಉವಾಚ ॥

ಕಿಂ ವಿಜ್ವಲ ತ್ವಯಾ ದೃಷ್ಟಮದ್ಭುತಂ ಭ್ರಮತಾ ಮಹೀಂ ।
ಆಶ್ಚರ್ಯೇಣ ಸಮಾಯುಕ್ತಂ ತನ್ಮೇ ಕಥಯ ಸುವ್ರತ ॥ ೧ ॥

ಇತಃ ಪ್ರಯಾಸಿ ಯಂ ದೇಶಮಾಹಾರಾರ್ಥಂ ತು ಸಾಂಪ್ರತಂ ।
ತತ್ರ ದೃಷ್ಟಂ ಸಮಾಚಕ್ಷ್ವ ಚಿತ್ರಂ ಕೌತುಕಮೇವ ವಾ ॥ ೨ ॥

॥ ವಿಜ್ವಲ ಉವಾಚ ॥

ಅಸ್ತಿ ಮೇರುಗಿರೇಃ ಪೃಷ್ಠ ಆನಂದಂ ನಾಮ ಕಾನನಂ ।
ದಿವ್ಯವೃಕ್ಷೈಸ್ಸಮಾಕೀರ್ಣಂ ಫಲಪುಷ್ಪಮಯೈಸ್ಸದಾ ॥ ೩ ॥

---

## ತೊಂಭತ್ತಮೂರನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಎಲೈ, ವಿಜ್ವಲನೇ, ಭೂಮಿಯನ್ನು ಸುತ್ತುತ್ತಿರುವ ನೀನು ಯಾವ ಆಶ್ಚರ್ಯವನ್ನು ನೋಡಿದೆ? ಅದನ್ನು ನನಗೆ ಹೇಳು.

೨. ಇಲ್ಲಿಂದ ನೀನು ಎಲ್ಲಿಗೆ ಹೋಗುತ್ತಿರುವೆಯೋ ಅಲ್ಲಿ ಏನೇನು ಆಶ್ಚರ್ಯವನ್ನು ನೋಡಿದೆ? ಆ ಆಶ್ಚರ್ಯವನ್ನು ಹೇಳು, ಕೇಳೋಣ. ಎಂದನು.

೩. ವಿಜ್ವಲನು ಹೇಳಿದನು:—ಮೇರುವಿನ ಸಮೀಪದಲ್ಲಿ ಫಲಪುಷ್ಪಭರಿತವಾದ ಉತ್ತಮ ವೃಕ್ಷಗಳಿಂದ ಕೂಡಿದ ಆನಂದವೆಂಬ ಒಂದು ಕಾನನವಿದೆ.

ದೇವವೃಂದೈಸ್ಸಮಾಕೀರ್ಣಂ ಮುನಿಸಿದ್ಧಸಮನ್ವಿತಂ ।
ಅಪ್ಸರೋಭಿಸ್ಸುರೂಪಾಭಿರ್ಗಂಧರ್ವೈಃ ಕಿನ್ನರೋರಗೈಃ ॥ ೪ ॥

ವಾಪೀಕೂಪತಟಾಗೈಶ್ಚ ನದೀಪ್ರಸ್ರವಣೈಸ್ತಥಾ ।
ಆನಂದಕಾನನಂ ಪುಣ್ಯಂ ದಿವ್ಯಭಾವೈಃ ಪ್ರಭಾಸತೇ ॥ ೫ ॥

ವಿಮಾನೈಃ ಕೋಟಿಸಂಖ್ಯಾಭಿರ್ಹಂಸಕುಂದೇಂದುಸನ್ನಿಭೈಃ ।
ಗೀತಕೋಲಾಹಲೈ ರಮ್ಯೈ ರ್ಮೇಘಧ್ವನಿನಿನಾದಿತಂ ॥ ೬ ॥

ಷಟ್ಪದಾನಾಂ ನಿನಾದೈಶ್ಚ ಸರ್ವತ್ರ ಮಧುರಾಯತೇ ।
ಚಂದನೈಶ್ಚ ಸುವೃಕ್ಷೈಶ್ಚ ಚಂಪಕೈಃ ಪುಷ್ಪಿತೈರ್ವೃತಂ ॥ ೭ ॥

ನಾನಾವೃಕ್ಷೈಃ ಪ್ರಭಾತ್ಯೇವಮಾನಂದವನಮುತ್ತಮಂ ।
ನಾನಾಪಕ್ಷಿನಿನಾದೈಶ್ಚ ವನಂ ಕೋಲಾಹಲಾನ್ವಿತಂ ॥ ೮ ॥

ಏವಮಾನಂದಕಂ ದೃಷ್ಟಂ ಮಯಾ ತತ್ರ ಸುಶೋಭನಂ ।
ವಿಮಲಂ ಚ ಸರಸ್ತಾತ ಶೋಭತೇ ಸಾಗರೋಪಮಂ ॥ ೯ ॥

---

೪-೫. ಆ ಆನಂದಕಾನನವು ದೇವತೆಗಳ ಗುಂಪಿನಿಂದ ಕೂಡಿದೆ. ಮುನಿ ಸಿದ್ಧರುಗಳಿಂದ ಸೇವಿಸಲ್ಪಡುತ್ತದೆ. ಅಪ್ಸರಸ್ಸುಗಳು, ಗಂಧರ್ವರು, ಕಿನ್ನರರು, ನಾಗರುಗಳಿಂದ ಆವೃತವಾಗಿದೆ. ಬಾವಿ, ಕೊಳ, ಕೆರೆಗಳಿಂದಲೂ ನದಿಗಳಿಂದಲೂ ಕೂಡಿಕೊಂಡು ಪ್ರಕಾಶಿಸುತ್ತದೆ.

೬. ಕೋಟಿ ವಿಮಾನಗಳಿಂದಲೂ, ಗೀತಗಳ ಧ್ವನಿಯಿಂದಲೂ, ಮೇಘ ಧ್ವನಿಗಳಿಂದಲೂ ಕೂಡಿದೆ. ದುಂಬಿಗಳ ಧ್ವನಿಯು ಮಧುರವಾಗಿ ಕೇಳಿ ಬರುತ್ತದೆ.

೭. ಸಂಪಿಗೆ, ಚಂದನ, ಇನ್ನೂ ಅನೇಕ ಹೂಬಿಟ್ಟ, ಹಣ್ಣುಬಿಟ್ಟ ಮರಗಳಿಂದ ಆ ಪರ್ವತವು ಕೂಡಿದೆ.

೮. ಆ ಆನಂದವನವು ನಾನಾ ವೃಕ್ಷಗಳಿಂದ ಪ್ರಕಾಶಿಸುತ್ತದೆ. ಅನೇಕ ಬಗೆಯಾದ ಪಕ್ಷಿಗಳ ಕೋಲಾಹಲದಿಂದ ಕೂಡಿದೆ.

೯. ಈ ರೀತಿಯಾದ ಆನಂದವನವನ್ನು ನಾನು ನೋಡಿದೆನು. ಅಲ್ಲಿ ಸಮುದ್ರದಂತಿರುವ ಒಂದು ಸರೋವರವಿದೆ.

ಸಂಪೂರ್ಣಂ ಪುಣ್ಯತೋಯೇನ ಪದ್ಮಸೌಗಂಧಿಕೈಶ್ಶುಭೈಃ ।
ಜಲಜಂತುಸಮಾಯುಕ್ತಂ ಹಂಸಕಾರಂಡವಾನ್ವಿತಂ ॥ ೧೦ ॥

ಏವಮಾಸೀತ್ಸರಸ್ತಸ್ಯ ಸುಮಧ್ಯೇ ಕಾನನಸ್ಯ ಹಿ ।
ದೇವಗಂಧರ್ವಸಂಬಾಧೈರ್ಮುನಿವೃಂದೈರಲಂಕೃತಂ ॥ ೧೧ ॥

ಕಿನ್ನರರೋಗಗಂಧರ್ವೈಶ್ಚಾರಣೈಶ್ಚ ಸುಶೋಭತೇ ।
ತತ್ರಾಶ್ಚರ್ಯಂ ಮಯಾ ದೃಷ್ಟಂ ತಾತ ವಕ್ತುಂ ನ ಶಕ್ಯತೇ ॥ ೧೨ ॥

ವಿಮಾನೇ ದಿವ್ಯಭೋಗಾಢ್ಯೇ ಕಲಶೈರುಪಶೋಭಿತೇ ।
ಛತ್ರದಂಡಪತಾಕಾಭೀ ರಾಜಮಾನೋಽಥ ತತ್ರ ಹಿ ॥ ೧೩ ॥

ಸರ್ವಭೋಗಯುತೇನಾಪಿ ಗೀಯಮಾನೋಽಥ ಕಿನ್ನರೈಃ ।
ಗಂಧರ್ವೈಶ್ಚಾಪ್ಸರೋಭಿಶ್ಚ ಶೋಭಮಾನೋಽಥ ಸುವ್ರತ ॥ ೧೪ ॥

---

೧೦. ಪದ್ಮದ ಸುವಾಸನೆಯಿಂದ ಅದರ ನೀರು ವಾಸಿತವಾಗಿರುತ್ತದೆ. ನೀರು ಪ್ರಾಣಿಗಳಿಂದ ಕೂಡಿದೆ. ಮತ್ತು ಹಂಸ, ಬಕಗಳಿಂದ ವಾಸಿತವಾಗಿದೆ.

೧೧. ಈ ರೀತಿಯಾದ ಸರೋವರವು ಆ ಕಾಡಿನ ಮಧ್ಯದಲ್ಲಿದೆ. ಅಲ್ಲಿಗೆ ದೇವತೆಗಳೂ ಗಂಧರ್ವರೂ ಅನೇಕವಾಗಿ ಬರುವರು.

೧೨. ಕಿಂನರರು, ಗಂಧರ್ವರು, ಚಾರಣರು, ಇವರಿಂದ ಶೋಭಿಸಲ್ಪಟ್ಟ ಆ ಸರೋವರದಲ್ಲಿ ಒಂದು ಆಶ್ಚರ್ಯವು ಕಾಣಲ್ಪಟ್ಟಿತು. ಅದನ್ನು ಹೇಳಲು ಸಾಧ್ಯವಿಲ್ಲ. ಹಾಗಿದ್ದಿತು.

೧೩. ಕಲಶದಿಂದ ಶೋಭಿತವಾದ ದಿವ್ಯಭೋಗವುಳ್ಳ ಛತ್ರದಂಡಗಳಿಂದ ಆ ವಿಮಾನವು ಕೂಡಿದೆ.

೧೪. ಅದು ಸರ್ವಭೋಗಗಳಿಂದ ಕೂಡಿದೆ. ಕಿನ್ನರರು, ಗಂಧರ್ವರು, ಅಪ್ಸರಸ್ಸುಗಳಿಂದ ಶೋಭಿತವಾಗಿದೆ.

**ಸ್ತೂಯಮಾನೋ ಮಹಾಸಿದ್ಧೈರ್ಋಷಿಭಿಸ್ತತ್ತ್ವವೇದಿಭಿಃ ।**
**ರೂಪೇಣಾಪ್ರತಿಮೋ ಲೋಕೇ ನದೃಷ್ಟಸ್ತಾದೃಶಃ ಕ್ವಚಿತ್ ॥ ೧೫ ॥**

**ಸರ್ವಾಭರಣಶೋಭಾಂಗೋ ದಿವ್ಯಮಾಲಾವಿಭೂಷಿತಃ ।**
**ಮಹಾರತ್ನಕೃತಾ ಮಾಲಾ ತಸ್ಯೋರಸಿ ವಿರಾಜತೇ ॥ ೧೬ ॥**

**ತತ್ಸಮೀಪೇ ಸ್ಥಿತಾ ಚೈಕಾ ನಾರೀ ದೃಷ್ಟಾ ವರಾನನಾ ।**
**ಮುಕ್ತಾಹಾರೈಸ್ಸಮಾಯುಕ್ತಾ ವಲಯೈಃ ಕಂಕಣೈರ್ಯುತಾ ॥ ೧೭ ॥**

**ದಿವ್ಯವಸ್ತ್ರಪರೀಧಾನಾ ಚಂದನಾದ್ಯನುಲೇಪನಾ ।**
**ಸ್ತೂಯಮಾನಾ ಗೀಯಮಾನಾ ಪುರುಷೇಣ ಸಹಾಸ್ಥಿತಾ ॥ ೧೮ ॥**

**ರತಿರೂಪಾ ವರಾರೋಹಾ ಪೀನಶ್ರೋಣಿಪಯೋಧರಾ ।**
**ಸರ್ವಾಭರಣಶೋಭಾಂಗೀ ತಾದೃಶೀ ರೂಪಸಂಪದಾ ॥ ೧೯ ॥**

---

೧೫. ಮಹಾಸಿದ್ಧರಿಂದಲೂ ಋಷಿಗಳಿಂದಲೂ ಹೊಗಳಲ್ಪಡುತ್ತಾ ಸುಂದರನಾದ ಒಬ್ಬ ಪುರುಷನಿದ್ದನು. ಅಂಥವನು ಲೋಕದಲ್ಲೆಲ್ಲೂ ಇಲ್ಲವೇ ಇಲ್ಲ.

೧೬. ಸರ್ವಾಭರಣಗಳಿಂದ ಕೂಡಿರುವನು. ದಿವ್ಯಮಾಲೆಯನ್ನು ಹಾಕಿಕೊಂಡಿರುವನು. ಮಹಾರತ್ನದ ಮಾಲೆಯೊಂದು ಅವನ ಹೃದಯದ ಮೇಲೆ ಇಳಿಬಿದ್ದು ರಾರಾಜಿಸುತ್ತಿರುವುದು.

೧೭. ಮುತ್ತಿನ ಮಾಲೆಗಳನ್ನು ಧರಿಸಿ, ಬಳೆಗಳನ್ನು ತೊಟ್ಟಿರುವ ಓರ್ವ ಸುಂದರಿಯನ್ನು ಆತನ ಸಮೀಪದಲ್ಲಿ ನೋಡಿದೆನು.

೧೮. ಆ ಯುವತಿಯು ಒಳ್ಳೆಯ ಬಟ್ಟೆಯನ್ನು ಉಟ್ಟು, ಚಂದನವನ್ನು ಹಚ್ಚಿಕೊಂಡಿದ್ದಾಳೆ, ಗಾನದಿಂದ ಸ್ತೋತ್ರಮಾಡುತ್ತಿದ್ದಾಳೆ. ಹೀಗೆ ಆ ಪುರುಷನ ಬಳಿ ನಿಂತಿದ್ದಳು.

೧೯. ಮತ್ತು ಅವಳು ರತಿಯಂತಿದ್ದಳು. ದುಂಡಾದ ಸ್ತನಗಳಿಂದಲೂ ಸಣ್ಣ ನಡುವಿನಿಂದಲೂ ಕೂಡಿದ್ದಳು. ಸರ್ವಾಭರಣಗಳಿಂದಲೂ ಶೋಭಿತಳಾಗಿದ್ದಳು. ಬಹು ಸುಂದರಿಯಾಗಿದ್ದಳು.

ದ್ವಾವೇತೌ ತು ಮಯಾ ದೃಷ್ಟ್ವಾ ವಿಮಾನೇನಾಪಿ ಚಾಗತೌ ।
ರೂಪಲಾವಣ್ಯಮಾಧುರ್ಯಸಂಯುಕ್ತೌ ಹೃಷ್ಟಮಾನಸೌ ॥ ೨೦ ॥

ಸಮುತ್ತೀರ್ಯ ವಿಮಾನಾತ್ತು ಗತೌ ತೌ ಸರಸೋಂತಿಕೇ
ಸ್ನಾತೌ ತತ್ರ ಮಹಾತ್ಮಾನೌ ಸ್ತ್ರೀಪುಂಸೌ ಕಮಲೇಕ್ಷಣೌ ॥ ೨೧ ॥

ಪ್ರಗೃಹ್ಯ ತೌ ಮಹಾಶಸ್ತ್ರೌ ದಂಪತೀ ಚ ಪರಸ್ಪರಂ ।
ತಾದೃಶೌ ಚ ಶವೌ ತತ್ರ ಪತಿತೌ ಸರಸಸ್ತಟೇ ॥ ೨೨ ॥

ಪ್ರಭಾಸೇತೇ ತದಾ ತೌ ತು ಸ್ತ್ರೀಪುಂಸೌ ಕಮಲೇಕ್ಷಣೌ ।
ರೂಪೇಣಾಪಿ ಮಹಾಭಾಗ ತಾದೃಶಾವೇವ ತೌ ಶವೌ ॥ ೨೩ ॥

ದೇವರೂಪೋಪಮಸ್ತಾತ ಯಥಾಪೂರ್ವಂ ತಥಾ ಪುನಃ ।
ಯಥಾರೂಪಂ ಹಿ ತಸ್ಯಾಸ್ತಿ ತಾದೃಶಸ್ಸ ಚ ದೃಶ್ಯತೇ ।
ಯಾದೃಗ್ರೂಪಾ ಚ ಸಾ ನಾರೀ ಶವರೂಪಾ ಚ ತಾದೃಶೀ ॥ ೨೪ ॥

---

೨೦. ರೂಪಲಾವಣ್ಯಗಳಿಂದ ಕೂಡಿದ ಆ ಇಬ್ಬರೂ ಸಂತುಷ್ಟರಾಗಿ ವಿಮಾನದಲ್ಲಿ ಬಂದರು.

೨೧. ವಿಮಾನದಿಂದ ಇಳಿದು ಸರೋವರದ ಬಳಿಗೆ ಹೋದರು. ಅಲ್ಲಿ ಇಬ್ಬರೂ ಸ್ನಾನಮಾಡಿದರು.

೨೨. ಆ ದಂಪತಿಗಳು ಕೈಯಲ್ಲಿ ಕತ್ತಿಹಿಡಿದು ನಿಂತರು. ಅವರಂತೆಯೇ ಎರಡು ಶವಗಳು ಅಲ್ಲಿ ಬಿದ್ದಿದ್ದುವು.

೨೩. ಆ ದಂಪತಿಗಳು ಹೇಗಿದ್ದರೋ ಆ ಎರಡು ಶವಗಳೂ ರೂಪದಲ್ಲಿ ಅವರಂತೆಯೇ ಇದ್ದವು.

೨೪. ಆ ಶವಗಳು ದೇವರೂಪವಾಗಿದ್ದವು. ಆ ಜೀವವಂತರ ರೂಪದಂತೆಯೇ ಶವಗಳ ರೂಪಗಳೂ ಇರುತ್ತವೆ. ಹೆಂಗಸು ಹೇಗಿದ್ದಳೋ ಹಾಗೆಯೇ ಆ ಹೆಂಗಸಿನ ಶವವೂ ಇದ್ದಿತು.

ಸ್ತ್ರೀಶವಸ್ಯ ಚ ಯನ್ಮಾಂಸಂ ಶಸ್ತ್ರೇಣೋತ್ಕೀರ್ಯ ಸಾ ತತಃ ।
ಭಕ್ಷತೇ ತಸ್ಯ ಮಾಂಸಾನಿ ರಕ್ತಾಪ್ಲುತಾನಿ ಯಾನಿ ಚ ॥ ೨೫ ॥

ಪುರುಷೋ ಭಕ್ಷತೇ ತದ್ವಚ್ಛವಮಾಂಸಂ ಸಮಾತುರಃ ।
ಕ್ಷುಧಯಾ ಪೀಡ್ಯಮಾನೌ ತೌ ಭಕ್ಷೇತೇ ಪಿಶಿತಂ ತಯೋಃ ॥ ೨೬ ॥

ಯಾವತ್ತೃಪ್ತಿಂ ಸಮಾಯಾತೌ ತಾವನ್ಮಾಂಸಂ ಪ್ರಭಕ್ಷಿತಂ ।
ಸರಸಶ್ಚ ಜಲಂ ಪೀತ್ವಾ ಸಂಜಾತೌ ಸುಖಿತೌ ಪಿತಃ ।
ಕಿಯತ್ಕಾಲಂ ಸ್ಥಿತೌ ತತ್ರ ವಿಮಾನೇನ ಗತೌ ಪುನಃ ॥ ೨೭ ॥

ಅನ್ಯೇ ದ್ವೇ ಚ ಸ್ತ್ರಿಯೌ ತಾತ ಮಯಾ ದೃಷ್ಟೇ ಚ ತತ್ರ ವೈ ।
ರೂಪಸೌಭಾಗ್ಯಸಂಪನ್ನೇ ತೇ ಸ್ತ್ರಿಯೌ ಚಾರುಲಕ್ಷಣೇ ॥ ೨೮ ॥

ತಾಭ್ಯಾಂ ಪ್ರಭಕ್ಷಿತಂ ಮಾಂಸಂ ಯದಾ ತಾತ ಮಹಾವನೇ ।
ಸಹಸಾ ತೇ ತದಾ ತೇ ದ್ವೇ ಹಾಸ್ಯೈರಟ್ಟಾಟ್ಟಕೈಃ ಪುನಃ ।
ಭಕ್ಷೇತೇ ಚ ಸ್ವಮಾಂಸಾನಿ ದ್ವಾವೇತೌ ಪರಿನಿತ್ಯಶಃ ॥ ೨೯ ॥

---

೨೫. ಆ ಹೆಂಗಸು ಹೆಣ್ಣುಶವದ ಮಾಂಸವನ್ನು ಕತ್ತಿಯಿಂದ ಕತ್ತರಿಸಿ ತಿನ್ನುತ್ತಿದ್ದಳು.

೨೬. ಗಂಡಸೂ ಕೂಡಲೇ ಹೆಂಗಸಿನಂತೆಯೇ ಪುರುಷಶವದ ಮಾಂಸವನ್ನು ಕತ್ತರಿಸಿ ತಿನ್ನುತ್ತಿದ್ದನು. ಹಸಿವಿನಿಂದ ಪೀಡಿತರಾಗಿ ಅವರು ಅವುಗಳ ಮಾಂಸವನ್ನು ಈ ರೀತಿ ತಿನ್ನುತ್ತಿದ್ದರು.

೨೭. ತಮಗೆ ತೃಪ್ತಿಯಾಗುವವರೆವಿಗೂ ಅವರು ಅವುಗಳ ಮಾಂಸವನ್ನು ತಿಂದರು. ಆ ಮೇಲೆ ಸರೋವರದ ನೀರನ್ನು ಕುಡಿದು ಸುಖದಿಂದಿದ್ದರು. ಅನಂತರ ಸ್ವಲ್ಪಕಾಲವಿದ್ದು ವಿಮಾನದಿಂದ ಹೊರಟುಹೋದರು.

೨೮. ಅಲ್ಲಿ ರೂಪವತಿಯರೂ ಲಕ್ಷಣವತಿಯರೂ ಆದ ಇನ್ನೂ ಇಬ್ಬರು ಹೆಂಗಸರನ್ನು ನೋಡಿದೆನು.

೨೯. ಅವರು ಹಾಸ್ಯಮಾಡುತ್ತಾ, ನಗುತ್ತಾ, ತಮ್ಮ ತಮ್ಮ ಮಾಂಸವನ್ನೇ ಆ ಕಾಡಿನಲ್ಲಿ ನಿತ್ಯವೂ ತಿನ್ನುತ್ತಿದ್ದರು.

ಕೃತ್ವಾ ಸ್ನಾನಾದಿಕಂ ಮಾಂಸಂ ಪಶ್ಯತೋ ಮಮ ತತ್ರ ಹಿ ।
ಅನ್ಯೇ ಸ್ತ್ರಿಯೌ ಮಹಾಭಾಗ ರೌದ್ರಾಕಾರಸಮನ್ವಿತೇ ॥ ೩೦ ॥

ದಂಷ್ಟ್ರಾಕರಾಳವದನೇ ತತ್ರೈವಾತಿವಿಭೀಷಣೇ ।
ಊಚತುಃ ಖಾದಮಾನೇ ತು ದೇಹಿ ದೇಹೀತಿ ವೈ ಪುನಃ ॥ ೩೧ ॥

ಏವಂ ದೃಷ್ಟಂ ಮಯಾ ತಾತ ಆಶ್ಚರ್ಯಂ ಸರಸಸ್ತಟೇ ।
ನಿತ್ಯಮುತ್ತೀರ್ಯ ತಾವೇವಂ ತೇ ಚಾಪ್ಯನ್ಯೇ ಚ ವೈ ಪಿತಃ ।
ಕುರ್ವಂತಿ ಸದೃಶೀಂ ಚೇಷ್ಟಾಂ ಪೂರ್ವೋಕ್ತಾಂ ಮಮ ಪಶ್ಯತಃ ॥ ೩೨ ॥

ಭವತಾ ಪೃಚ್ಛಿತಂ ತಾತ ಯತ್ಕಥಾಶ್ಚರ್ಯಮೇವ ಚ ।
ಮಯಾ ಪ್ರೋಕ್ತಂ ತವಾಗ್ರೇ ವೈ ಸರ್ವಸಂದೇಹಕಾರಣಂ ॥ ೩೩ ॥

ಕಥಯಸ್ವ ಪ್ರಸಾದಾಚ್ಚ ಪ್ರೀಯಮಾಣೇನ ಚೇತಸಾ ।
ವಿಮಾನೇನಾಗತೋ ಯೋಽಸೌ ಸ್ತ್ರಿಯಾ ಸಾರ್ಧಂ ದ್ವಿಜೋತ್ತಮ ॥ ೩೪ ॥

ದಿವ್ಯರೂಪಧರೋ ಯಸ್ತು ಸ ಕಸ್ತು ಕಮಲೇಕ್ಷಣಃ ।
ಕಾ ಚ ನಾರೀ ಮಹಾಭಾಗ ಮಹಾಮಾಂಸಂ ಪ್ರಭಕ್ಷತಿ ॥ ೩೫ ॥

---

೩೦-೩೧. ಮತ್ತಿಬ್ಬರು ಭಯಂಕರವಾದ ಹೆಂಗಸರು ಅಲ್ಲೇ ಸ್ನಾನಮಾಡಿ ನನ್ನ ಕಣ್ಣೆದುರಿಗೇ ತಿನ್ನುತ್ತ ತಿನ್ನುತ್ತ ಕೊಡುಕೊಡೆಂದು ಕೇಳುತ್ತಿದ್ದರು.

೩೨. ಈ ರೀತಿಯಾದ ಆಶ್ಚರ್ಯವನ್ನು ಆ ಸರೋವರದ ದಡದಲ್ಲಿ ನೋಡುತ್ತಿದ್ದೆನು. ಅವರೂ, ಮಿಕ್ಕವರೂ ನಿತ್ಯವೂ ಹೀಗೆ ಅಲ್ಲಿಗೆ ಬಂದು ಹಿಂದೆ ಮಾಡಿದಂತೆಯೇ ಮಾಡುತ್ತಿದ್ದರು.

೩೩. ಎಲೈ, ತಂದೆಯೇ! ನೀನು ಕೇಳಿದ್ದರಿಂದ ಈ ಆಶ್ಚರ್ಯವನ್ನು ಹೇಳಿದೆನು. ಇವೆಲ್ಲವೂ ಸಂದೇಹಕ್ಕೆ ಕಾರಣವಾದ ವಿಷಯ.

೩೪-೩೫. ಎಲೈ ಪಕ್ಷಿಶ್ರೇಷ್ಠನೇ! ವಿಮಾನದಲ್ಲಿ ಬಂದ ಆ ಗಂಡಹೆಂಡಿರು ಯಾರು? ಸುಂದರನಾದ ಆ ಕಮಲೇಕ್ಷಣನು ಯಾರು? ಮಹಾಮಾಂಸವನ್ನು ತಿನ್ನುತ್ತಿದ್ದ ಹೆಂಗಸು ಯಾರು? ಹೊಸದಾಗಿಯೇ ಅಲ್ಲಿಗೆ ಬಂದ ಗಂಡಸೂ ಹೆಂಗಸೂ ಯಾರು? ಅನ್ಯೋನ್ಯವಾಗಿ ಹಾಸ್ಯಮಾಡುತ್ತಿದ್ದುದೇಕೆ? ಕೊಡು ಕೊಡು ಎಂದು

ಸ ಕಶ್ಚಾಸ್ಯಾಗತಸ್ತಾತ ಸಾ ಚೈವಾಗತ್ಯ ಭಕ್ಷತಿ ।
ಪ್ರಹಸೇತೆ ತದಾ ತೇ ದ್ವೇ ಸ್ತ್ರಿಯೌ ತಾತ ವದಸ್ವ ನಃ ॥ ೩೬ ॥

ತೌ ದಂಪತೀ ಸಮಾಚಕ್ಷ್ವ ದ್ವೇ ಸ್ತ್ರಿಯೌ ಚಾಪಿ ತತ್ಪರೇ ।
ದೇಹಿ ದೇಹೀತಿ ವಾದಿನ್ಯೌ ಸಂಶಯಂ ಛಿಂದಿ ಸುವ್ರತ ॥ ೩೭ ॥

ಏವಂ ಪೃಷ್ಟಸ್ತೃತೀಯೇನ ವಿಜ್ವಲೇನಾತ್ಮಜೇನ ಸಃ ।
ಪ್ರೋವಾಚ ಸರ್ವಂ ವೃತ್ತಾಂತಂ ಚ್ಯವನಸ್ಯಾಪಿ ಶೃಣ್ವತಃ ॥ ೩೮ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ತ್ರಿನವತಿತಮೋಽಧ್ಯಾಯಃ**



---

ಹೇಳುತ್ತಾ ತಿನ್ನುತ್ತಿದ್ದ ಆ ಸ್ತ್ರೀಯರಾರು? ಆ ದಂಪತಿಗಳಾರು? ಇದನ್ನೆಲ್ಲಾ ಹೇಳಿ ನಮ್ಮ ಸಂಶಯವನ್ನು ನಿವಾರಿಸು. ಎಂದಿತು.

೩೮. ಮೂರನೆಯವನಾದ ವಿಜ್ವಲನು ಹೀಗೆ ಕೇಳಲು, ಕುಂಜಲನಿಂತೆಂದಿತು. ಇದನ್ನೆಲ್ಲಾ ಆ ಮರದಡಿಯಲ್ಲಿದ್ದ ಚ್ಯವನನು ಕೇಳುತ್ತಲಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುರ್ನವತಿತಮೋಽಧ್ಯಾಯಃ

॥ ಕುಂಜಲ ಉವಾಚ ॥

ಶ್ರೂಯತಾಮಭಿಧಾಸ್ಯಾಮಿ ತತ್ಸರ್ವಂ ಕಾರಣಂ ಸುತ ।
ಯಸ್ಮಾತ್ತೌ ತಾದೃಶೌ ಜಾತೌ ಸ್ವಮಾಂಸಪರಿಭಕ್ಷಕೌ ॥ ೧ ॥

ಸರ್ವತ್ರ ಕಾರಣಂ ಕರ್ಮ ಶುಭಂ ವಾಽಶುಭಮೇವ ಚ ।
ಪುಣ್ಯೇನ ಕರ್ಮಣಾ ಪುತ್ರ ಜನ್ತುಸ್ಸೌಖ್ಯಂ ಭುನಕ್ತಿ ಚ ।
ದುಷ್ಕೃತಂ ಭುಂಕ್ತೆ ಏವಾಪಿ ಪಾಪಯುಕ್ತೇನ ಕರ್ಮಣಾ ॥ ೨ ॥

ಸೂಕ್ಷ್ಮಧರ್ಮಂ ವಿಚಾರ್ಯೈವ ಶಾಸ್ತ್ರಜ್ಞಾನೇನ ಚಕ್ಷುಷಾ ।
ಸ್ಥೂಲಧರ್ಮಂ ಪ್ರದೃಷ್ಟ್ವೈವ ಸುವಿಚಾರ್ಯ ಪುನಃಪುನಃ ॥ ೩ ॥

---

## ತೊಂಭತ್ತನಾಲ್ಕನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಅವರು ತಮ್ಮ ಮಾಂಸವನ್ನು ತಿನ್ನತಕ್ಕವರೇಕಾದರೆಂಬುದನ್ನೂ, ಅದರ ಕಾರಣಗಳನ್ನೂ ತಿಳಿಸುತ್ತೇನೆ. ಕೇಳು.

೨. ಎಲ್ಲದಕ್ಕೂ ಒಳ್ಳೆಯ ಮತ್ತು ಕೆಟ್ಟಕರ್ಮಗಳೇ ಕಾರಣವು. ಪುರುಷನು ಪುಣ್ಯಕರ್ಮದಿಂದ ಸುಖವನ್ನೂ, ಪಾಪಕರ್ಮದಿಂದ ದುಃಖವನ್ನೂ ಅನುಭವಿಸುತ್ತಾನೆ.

೩-೪. ಶಾಸ್ತ್ರಜ್ಞಾನವೆಂಬ ಕಣ್ಣಿನಿಂದ ಧರ್ಮಸೂಕ್ಷ್ಮವನ್ನು ವಿಚಾರಿಸಿ ತಿಳಿಯಬೇಕು. ಸ್ಥೂಲವಾದ ಧರ್ಮಗಳನ್ನು ಪದೇಪದೇ ವಿಚಾರಿಸಿ ತಿಳಿಯಬೇಕು. ದೊಡ್ಡ ಮೂರ್ತಿಯನ್ನು ಮಾಡುವ ಶಿಲ್ಪಿಯು ಹೇಗೆ ಪದೇಪದೇ ಆ ಶಿಲಾಮೂರ್ತಿಯನ್ನು

**ಸಮಾರಭೇತ್ತತಃ ಕರ್ಮ ಮನಸಾ ವಿಪುಲೇನ ವಾ ।**
**ಸ ಮೂರ್ತಿಕಾರಕಃ ಶಿಲ್ಪೀ ಸಮಾವರ್ತಯತೇ ಯಥಾ ॥ ೪ ॥**

**ಅಗ್ನೇಶ್ಚ ತೇಜಸಾ ಪುತ್ರ ಜ್ವಾಲಾಭಿಶ್ಚ ಸಮಂತತಃ ।**
**ದ್ರವೀಭೂತೋ ಭವೇದ್ಧಾತುರ್ವಹ್ನಿನಾ ತಾಪಿತಃ ಶನೈಃ ॥ ೫ ॥**

**ಯಾ ದೃಶಂ ವತ್ಸ ಭಕ್ಷ್ಯಂತು ರಸಯುಕ್ತಂ ಚ ಸೇವ್ಯತೇ ।**
**ತಾದೃಶಂ ಜಾಯತೇ ವತ್ಸ ರೂಪಂ ಚೈವ ನ ಸಂಶಯಃ ।**
**ಕರ್ಮ ಏವ ಪ್ರಧಾನಂ ಯಜ್ಜೀವರೂಪೇಣ ವರ್ತತೇ ॥ ೬ ॥**

**ಯಾದೃಶಂ ವಪತೇ ಬೀಜಂ ಕ್ಷೇತ್ರೇ ಚ ಕೃಷಿಕಾರಕಃ ।**
**ಭುನಕ್ತಿ ತಾದೃಶಂ ವತ್ಸ ಫಲಮೇವ ನ ಸಂಶಯಃ ॥ ೭ ॥**

**ಯಾದೃಶಂ ಕ್ರಿಯತೇ ಕರ್ಮ ತಾದೃಶಂ ಪರಿಭುಜ್ಯತೇ ।**
**ವಿನಾಶಹೇತುಃ ಕರ್ಮಾಸ್ಯ ಸರ್ವೇ ಕರ್ಮವಶಾ ವಯಂ ॥ ೮ ॥**

---

ಮೊದಲು ದಪ್ಪದಪ್ಪವಾಗಿಯೂ ಆ ಮೇಲೆ ನಯಗೆಲಸದಿಂದಲೂ ಸರಿಮಾಡುತ್ತಾನೋ ಹಾಗೆ ಕೆಲಸವನ್ನು ಮಾಡಬೇಕು.

೫. ಅಗ್ನಿಯ ತೇಜಸ್ಸಿನಿಂದಲೂ ಜ್ವಾಲೆಗಳಿಂದಲೂ ಧಾತುವು ನೀರಾಗುವಂತೆ ಮಾಡುತ್ತಾನೆ.

೬. ಬೆಂಕಿ ಮೊದಲಾದವುಗಳಿಂದ ಕಾಯಿಸಿ, ಬೇಯಿಸಿ ಭಕ್ಷ್ಯಗಳನ್ನು ರುಚಿಯಾಗುವಂತೆ ಮಾಡುತ್ತಾನೋ ಹಾಗೆ ರೂಪ, ಆಕಾರ ಮೊದಲಾದವು, ಕರ್ಮ ಪರಿಪಾಕದಿಂದ ಆಗುತ್ತವೆ. ಸಂಶಯವಿಲ್ಲ. ಕರ್ಮವೇ ಪ್ರಧಾನವಾಗಿ ಜೀವರೂಪದಿಂದಿರುತ್ತದೆ.

೭. ರೈತನು ಹೊಲದಲ್ಲಿ ಯಾವರೀತಿಯಾದ ಬೀಜವನ್ನು ಬಿತ್ತುತ್ತಾನೋ ಅಂತಹ ಫಲವನ್ನೇ ಊಟಮಾಡುತ್ತಾನೆ, ಸಂಶಯವಿಲ್ಲ.

೮. ಅದರಂತೆ ಯಾವ ರೀತಿಯಾದ ಕರ್ಮವನ್ನು ಮಾಡುತ್ತಾನೆಯೋ ಅಂತಹ ಫಲವನ್ನೇ ಊಟಮಾಡುತ್ತಾನೆ. ಅವನ ವಿನಾಶಕ್ಕೂ ಅವನ ಕರ್ಮವೇ ಕಾರಣವು. ನಾವೆಲ್ಲರೂ ಕರ್ಮಾಧೀನರು.

**ಕರ್ಮದಾಯಾದಕಾ ಲೋಕೇ ಕರ್ಮ ಏವ ಚ ಬಾಂಧವಾಃ ।**
**ಕರ್ಮಾಣಿ ಚೋದಯಂತೀಹ ಪುರುಷಂ ಸುಖದುಃಖಯೋಃ ॥ ೯॥**

**ಸುವರ್ಣಂ ರಜತಂ ವಾಪಿ ಯಥಾ ರೂಪಂ ನಿಷೇವ್ಯತೇ ।**
**ತಥಾ ನಿಷೇವ್ಯತೇ ಜನ್ತುಃ ಪೂರ್ವಕರ್ಮವಶಾನುಗಃ ॥ ೧೦ ॥**

**ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ।**
**ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ॥ ೧೧ ॥**

**ಯಥಾ ಕೃಷಿಫಲಂ ಕರ್ತುಃ ಪ್ರಾಪ್ಯತೇ ಯದ್ಯದೀಹತಿ ।**
**ತಥಾ ಪೂರ್ವಕೃತಂ ಕರ್ಮ ಕರ್ತಾರಂ ಪ್ರತಿಪದ್ಯತೇ ॥ ೧೨ ॥**

**ದೇವತ್ವಮಥ ಮಾನುಷ್ಯಂ ಪಶುತಾಂ ಪಕ್ಷಿತಾಂ ತಥಾ ।**
**ತಿರ್ಯಕ್ತ್ವಂ ಸ್ಥಾವರತ್ವಂ ಚ ಯಾತಿ ಜನ್ತುಸ್ಸ್ವಕರ್ಮಭಿಃ ॥ ೧೩ ॥**

---

೯. ಕರ್ಮವೇ ನಮಗೆ ಲೋಕದಲ್ಲಿ ದಾಯಾದಿಯು, ಕರ್ಮವೇ ಬಂಧುವು. ಕರ್ಮವೇ ಮನುಷ್ಯನನ್ನು ಸುಖದುಃಖಗಳಲ್ಲಿ ಪ್ರೇರಿಸುತ್ತದೆ.

೧೦. ಒಡವೆಗಳಲ್ಲಿ ಚಿನ್ನವಾಗಲಿ, ಬೆಳ್ಳಿಯಾಗಲಿ, ತಮ್ಮತಮ್ಮ ರೂಪವನ್ನು ಹೇಗೆ ಹೊಂದುತ್ತವೋ ಹಾಗೆ ಜಂತುವು ಪೂರ್ವಕರ್ಮಕ್ಕೆ ಅಧೀನವಾಗಿ ಅದರಿಂದ ಕೂಡಿಕೊಳ್ಳುತ್ತದೆ.

೧೧. ಆಯುಸ್ಸು, ಕರ್ಮ, ಧನ, ವಿದ್ಯಾ, ಸಾವು, ಈ ಐದೂ ಕೂಡ ಪ್ರಾಣಿಗೆ ಗರ್ಭದಲ್ಲಿರುವಾಗಲೇ ಸೃಷ್ಟಿಸಲ್ಪಡುತ್ತದೆ. ಎಂದರೆ ಆಗಲೇ ನಿಶ್ಚಿತವಾಗಿರುತ್ತವೆ.

೧೨. ಕೃಷಿಯ ಫಲವನ್ನು ರೈತನು ಹೊಂದುವಂತೆ ಪೂರ್ವದಲ್ಲಿ ಮಾಡಿದ ಕರ್ಮಫಲವನ್ನು, ಮಾಡಿದವನು ಹೊಂದುತ್ತಾನೆ.

೧೩. ದೇವತ್ವವಾಗಲಿ, ಮನುಷ್ಯತ್ವವಾಗಲಿ, ಪಕ್ಷಿತ್ವವೇ ಆಗಲಿ, ತಿರ್ಯಕ್ತ್ವವೇ ಆಗಲಿ, ಸ್ಥಾವರತ್ವ ಜಂಗಮತ್ತ್ವಗಳೇ ಆಗಲಿ, ಜಂತುವಿಗೆ ಪೂರ್ವಜನ್ಮದ ಕರ್ಮಗಳಿಗೆ ಅನುಸಾರವಾಗಿ ಬರುತ್ತವೆ.

ಸ ಏವ ತು ತಥಾ ಭುಂಕ್ತೇ ನಿತ್ಯಂ ವಿಹಿತಮಾತ್ಮನಃ ।
ಆತ್ಮನಾ ವಿಹಿತಂ ದುಃಖಮಾತ್ಮನಾ ವಿಹಿತಂ ಸುಖಂ ॥ ೧೪ ॥

ಗರ್ಭಶಯ್ಯಾಮುಪಾದಾಯ ಭುಂಕ್ತೇ ತೇ ಪೂರ್ವದೈಹಿಕೇ ।
ಪೂರ್ವದೇಹಕೃತಂ ಕರ್ಮ ನ ಕಶ್ಚಿತ್ಪುರುಷೋ ಭುವಿ ।
ಬಲೇನ ಪ್ರಜಯಾ ವಾಪಿ ಸಮರ್ಥಃ ಕರ್ತುಮನ್ಯಥಾ ॥ ೧೫ ॥

ಸ್ವಕೃತಾನ್ಯೇವ ಭುಂಜಂತಿ ದುಃಖಾನಿ ಚ ಸುಖಾನಿ ಚ ।
ಹೇತುಭಿಃ ಕರಣೈರ್ವಾಪಿ ಸೋಽಹಂಕಾರೇಣ ಬಧ್ಯತೇ ॥ ೧೬ ॥

ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।
ತದ್ವಚ್ಛುಭಾಶುಭಂ ಕರ್ಮ ಕರ್ತಾರಮನುಗಚ್ಛತಿ ॥ ೧೭ ॥

ಉಪಭೋಗಾದೃತೇ ತಸ್ಯ ನಾಶ ಏವ ನ ವಿದ್ಯತೇ ।
ಪ್ರಾಕ್ತನಂ ಬಂಧನಂ ಕರ್ಮ ಕೋಽನ್ಯಥಾ ಕರ್ತುಮರ್ಹತಿ ।
ಸುಶೀಘ್ರಮಪಿ ಧಾವಂತಂ ವಿಧಾನಮಪಿ ಧಾವತಿ ॥ ೧೮ ॥

---

೧೪. ಪ್ರಾಣಿಯು ತಾನು ಮಾಡಿದುದನ್ನೇ ನಿತ್ಯವೂ ತಿನ್ನಬೇಕು. ತಾನು ಹಿಂದಿನ ಜನ್ಮದಲ್ಲಿ ಮಾಡಿದ ದುಃಖವನ್ನಾಗಲಿ, ಸುಖವನ್ನಾಗಲಿ ಜಂತುವು ಗರ್ಭದಿಂದ ಮೊದಲು ಮಾಡಿಕೊಂಡು ಅನುಭವಿಸಬೇಕು.

೧೫. ಪೂರ್ವಜನ್ಮದಲ್ಲಿ ಮಾಡಿದ ಕರ್ಮವನ್ನು ಬಲದಿಂದಾಗಲಿ, ತಮ್ಮ ಮಕ್ಕಳ ಅಧೀನದಿಂದಾಗಲಿ ಬೇರೆ ರೀತಿ ತಿರುಗಿಸುವುದಕ್ಕೆ ಆಗುವುದೇ ಇಲ್ಲ.

೧೬. ತಾನು ಮಾಡಿದ ಕರ್ಮಗಳಿಗೆ ಅನುಸಾರವಾಗಿ ಅನುಭವಿಸತಕ್ಕದ್ದು. ಕೆಲವು ಕಾರಣಗಳಿಂದ ನಾನೇ ಮಾಡಿದೆನೆಂಬ ಅಹಂಕಾರದಿಂದ ಕೂಡಿರುತ್ತಾನೆ.

೧೭. ಅನೇಕ ಹಸುಗಳ ಮಧ್ಯದಲ್ಲಿ ಕರುವು ತಾಯಿಯನ್ನು ಕಂಡುಹಿಡಿಯುವಂತೆ ಶುಭಾಶುಭಕರ್ಮಗಳು ಕರ್ಮಮಾಡಿದವನನ್ನು ಹುಡುಕಿಕೊಂಡು ಬಂದು ಸೇರುತ್ತವೆ. ಆ ಕರ್ಮಗಳಿಗೆ ಉಪಭೋಗ ಹೊರತಾಗಿ ನಾಶವೇ ಇಲ್ಲ.

೧೮. ಹಿಂದಿನ ಜನ್ಮದ ಕರ್ಮವನ್ನು ಯಾವನು ತಾನೇ ಮೀರಲು ಸಾಧ್ಯ? ಬಹಳ ಶೀಘ್ರವಾಗಿ ಹೋಗುತ್ತಿದ್ದರೂ ಅವನನ್ನು ಅನುಸರಿಸಿಕೊಂಡು ಓಡಿಬರುತ್ತವೆ.

**ಶೋಭತೇ ಸನ್ನಿಪಾತೇನ ಪುರಾ ಕರ್ಮ ಯಥಾಕೃತಂ ।**
**ಉಪತಿಷ್ಠತಿ ತಿಷ್ಠಂತಂ ಗಚ್ಛಂತಮನುಗಚ್ಛತಿ ॥ ೧೯ ॥**

**ಕರೋತಿ ಕುರ್ವತಃ ಕರ್ಮ ಛಾಯೇವಾನುವಿಧೀಯತೇ ।**
**ಯಥಾ ಛಾಯಾತಪೌ ನಿತ್ಯಂ ಸುಸಂಬಂಧೌ ಪರಸ್ಪರಂ ॥ ೨೦ ॥**

ಉಪಸರ್ಗಾ ಹಿ ವಿಷಯಾ ಉಪಸರ್ಗಾ ಜರಾದಯಃ ।
**ಪೀಡಯಂತಿ ನರಂ ಪಶ್ಚಾತ್ಪೀಡಿತಂ ಪೂರ್ವಕರ್ಮಣಾ ॥ ೨೧ ॥**

**ಯೇನ ಯತ್ರೋಪಭೋಕ್ತವ್ಯಂ ಸುಖಂ ವಾ ದುಃಖಮೇವ ವಾ ।**
**ಸ ತತ್ರ ಬಧ್ಯತೇ ಜಂತುರ್ಬಲಾದ್ದೈವೇನ ನೀಯತೇ ॥ ೨೨ ॥**

**ದೈವಂ ಪ್ರಾಹುಶ್ಚ ಜೀವಾನಾಂ ಸುಖದುಃಖೋಪಪಾದನಂ ।**
**ಅನ್ಯಥಾ ಕರ್ಮ ತಚ್ಚಿಂತ್ಯಂ ಜಾಗ್ರತಃ ಸ್ವಪತೋಽಪಿ ವಾ ॥ ೨೩ ॥**

---

೧೯. ಪೂರ್ವದಲ್ಲಿ ಮಾಡಿದ ಕರ್ಮವು ಜೊತೆಯಲ್ಲಿ ಇದ್ದು ಕೂತವನನ್ನು ಕೂತು, ಹೋಗುತ್ತಿರುವವನ್ನು ಹೋಗುತ್ತಲೂ ಅನುಸರಿಸುತ್ತದೆ.

೨೦. ಕೆಲಸ ಮಾಡುವವನನ್ನು ಕೆಲಸಮಾಡುತ್ತಲೇ ನೆರಳಿನಂತೆ ಅನುಸರಿಸುತ್ತದೆ. ಬಿಸಿಲು ನೆರಳುಗಳು ಒಂದನ್ನೊಂದು ಅನುಸರಿಸಿಯೇ ಇರುವಂತೆ ಕರ್ಮಗಳೂ ಇರುತ್ತವೆ.

೨೧. ವಿಷಯುಗಳೂ ಮುಪ್ಪೂ ನೆಪಮಾತ್ರವಷ್ಟೆ! ಪೂರ್ವಕರ್ಮದಿಂದ ಪೀಡಿತನಾದವನನ್ನು ಆ ಮೇಲೆ ಪೀಡಿಸುತ್ತವೆ.

೨೨. ಸುಖದುಃಖಗಳನ್ನು ಯಾವನು ಎಲ್ಲಿ ಅನುಭವಿಸಬೇಕೋ ಅಲ್ಲಿಗೆ ಆ ಜ-ತುವನ್ನು ಕರ್ಮವು ಕರೆದೊಯ್ಯುತ್ತದೆ.

೨೩. ಜೀವಗಳಿಗೆ ಸುಖದುಃಖಗಳನ್ನು ಕೊಡತಕ್ಕುದು ದೈವವೆಂದು ಹೇಳುತ್ತಾರೆ. ಹಾಗಿಲ್ಲದಿದ್ದರೆ ಜ್ಞಾನವಿದ್ದಾಗಲಾಗಲಿ, ಇಲ್ಲದಾಗಾಗಲಿ ಆ ಕರ್ಮವು ಹೊಂದುತ್ತದಷ್ಟೆ? ಅದಕ್ಕೆ ಕಾರಣವನ್ನು ಹೇಳಲು ಸಾಧ್ಯವಾಗುವುದಿಲ್ಲ.

**ಅನ್ಯಥಾ ದುಃಖಿನಂ ದೈವಂ ವಧ್ಯಮೇವ ಜಿಘಾಂಸತಿ ।**
**ಶಸ್ತ್ರಾಗ್ನಿವಿಷದುರ್ಗೇಭ್ಯೋ ರಕ್ಷಿತವ್ಯಂ ಚ ರಕ್ಷತಿ　　॥ ೨೪ ॥**

**ಯಥಾ ಪೃಥಿವ್ಯಾಂ ಬೀಜಾನಿ ಹ್ಯನ್ನಂ ವೃಕ್ಷಾಸ್ತೃಣಾನಿ ಜ ।**
**ತಥೈವಾತ್ಮನಿ ಕರ್ಮಾಣಿ ತಿಷ್ಠಂತಿ ಪ್ರಭವಂತಿ ಚ　　॥ ೨೫ ॥**

**ತೈಲಕ್ಷಯಾದ್ಯಥಾ ದೀಪೋ ನಿರ್ವಾಣಮಧಿಗಚ್ಛತಿ ।**
**ಕರ್ಮಕ್ಷಯಾತ್ತಥಾ ಜಂತೋಃ ಶರೀರಂ ನಾಶಮೃಚ್ಛತಿ　　॥ ೨೬ ॥**

**ಕರ್ಮಕ್ಷಯಾತ್ತಥಾ ಮೃತ್ಯುಸ್ತತ್ವವಿದ್ಭಿರುದಾಹೃತಃ ।**
**ವಿವಿಧಾಃ ಪ್ರಾಣಿನಾಂ ರೋಗಾಃ ಸ್ಮೃತಾಸ್ತೇಷಾಂ ಚ ಹೇತವಃ　　॥ ೨೭ ॥**

**ತಸ್ಮಾತ್ತತ್ತು ಪ್ರಧಾನಂ ಚ ಪ್ರಾಣಿನಾಂ ಕರ್ಮ ಏವ ಹಿ ।**
**ಯತ್ಪುರಾ ಕ್ರಿಯತೇ ಕರ್ಮ ತದಿಹೈವ ಪ್ರಭುಜ್ಯತೇ　　॥ ೨೮ ॥**

---

೨೪. ದುಃಖಗೊಂಡು ಸಾಯಲು ಅರ್ಹನಾದವನನ್ನು ಕೊಲ್ಲುತ್ತದೆ. ಕೆಲವು ಸಂದರ್ಭಗಳಲ್ಲಿ ಶಸ್ತ್ರ, ಅಗ್ನಿ, ವಿಷ, ದುರ್ಗಗಳಲ್ಲಿ ಸಿಕ್ಕಿ ಸಾಯಲು ಬೇಕಾದಷ್ಟು ಕಾರಣಗಳಿದ್ದರೂ ಅವನು ಸಾಯದೆ ಉಳಿಯುವುದಕ್ಕೆ ಕಾರಣವೇನಿದೆ? ಆದ್ದರಿಂದ ಎಲ್ಲಕ್ಕೂ ದೈವವೇ ಕಾರಣವು.

೨೫. ಭೂಮಿಯಲ್ಲಿ ಬೀಜಗಳು, ಔಷಧಿ, ಮರ, ಹುಲ್ಲುಗಳು ಹೇಗೆ ಇದ್ದುಕೊಂಡು ವೃದ್ಧಿಹೊಂದುತ್ತವೋ ಹಾಗೆ ಕರ್ಮಗಳು ನಮ್ಮ ಆತ್ಮದಲ್ಲಿದ್ದುಕೊಂಡು ಬೆಳೆಯುತ್ತಿರುತ್ತವೆ.

೨೬. ಎಣ್ಣೆಯ ನಾಶದಿಂದ ದೀಪವು ಹೇಗೆ ಆರಿಹೋಗುತ್ತದೋ ಹಾಗೆ ಕರ್ಮಕ್ಷಯದಿಂದ ಪ್ರಾಣಿಯ ಶರೀರವು ನಾಶವಾಗುತ್ತದೆ.

೨೭. ಆದ್ದರಿಂದ ಜ್ಞಾನಿಗಳು ಕರ್ಮಕ್ಷಯದಿಂದ ಪ್ರಾಣಿಗಳು ಸಾಯುತ್ತವೆಂದು ಹೇಳುತ್ತಾರೆ. ಅದಕ್ಕೆ ಕಾರಣವಾಗಿ ನಾನಾಬಗೆಯ ರೋಗಗಳು ಬರುತ್ತವೆಂದು ಹೇಳುತ್ತಾರೆ.

೨೮. ಆದ್ದರಿಂದ ಪ್ರಾಣಿಗಳಿಗೆ ಕರ್ಮವೇ ಪ್ರಧಾನವು. ಪೂರ್ವದಲ್ಲಿ ಮಾಡಿದ ಕರ್ಮವನ್ನೇ ಈ ಜನ್ಮದಲ್ಲಿ ಅನುಭವಿಸುತ್ತಾನೆ.

ಯತ್ತ್ವಯಾ ದೃಷ್ಟಮೇವಾಪಿ ಪೃಚ್ಛಿತಂ ತಾತ ಸಾಂಪ್ರತಂ ।
ತಸ್ಯಾರ್ಥಂ ಹಿ ಮಯೋಕ್ತಂ ವೈ ಭುಂಜಾತೇ ತೌ ಹಿ ಸಾಂಪ್ರತಂ ॥ ೨೯ ॥

ಆನಂದಕೇ ತ್ವಯಾ ದೃಷ್ಟಂ ತಯೋಃ ಕರ್ಮ ಸುದಾರಣಂ ।
ಶೃಣು ವತ್ಸ ಪ್ರವಕ್ಷ್ಯಾಮಿ ವಿಪಾಕಂ ಪೂರ್ವಕರ್ಮಣಃ ॥ ೩೦ ॥

ಕರ್ಮಭೂಮಿರಿಯಂ ತಾತ ಚಾನ್ಯಾ ಭೋಗಾಯ ಭೂಮಯಃ ।
ಸ್ವರ್ಗಾದೀನಾಂ ಮಹಾಪ್ರಾಜ್ಞ ಕರ್ತಾ ಗತ್ವಾ ಭುನಕ್ತಿ ಚ ॥ ೩೧ ।

ಚೋಳದೇಶೇ ಮಹಾಪ್ರಾಜ್ಞ ಸುಬಾಹುರ್ನಾಮ ಭೂಪತಿಃ ।
ರೂಪವಾನ್ಗುಣವಾನ್ಧೀರಃ ಪೃಥಿವ್ಯಾಂ ನಾಸ್ತಿ ತಾದೃಶಃ ॥ ೩೨ ॥

ವಿಷ್ಣುಭಕ್ತೋ ಮಹಾಜ್ಞಾನೀ ವೈಷ್ಣವಾನಾಂ ಚ ಸುಪ್ರಿಯಃ ।
ಕರ್ಮಣಾ ವಿವಿಧೇನಾಪಿ ಧ್ಯಾಯೇತ್ಸ ಮಧುಸೂದನಂ ॥ ೩೩ ॥

---

೨೯. ನೀನು ಹಿಂದೆ ನೋಡಿದೆನೆಂದು ನನ್ನನ್ನು ಕೇಳಿದೆಯಲ್ಲ. ಅವರ ವಿಷಯವನ್ನು ಹೇಳಿದೆ ಅವರು ಹಿಂದಿನ ಕರ್ಮಫಲವನ್ನು ಈಗ ಅನುಭವಿಸುತ್ತಾರೆ.

೩೦. ಆ ನಂದವನದಲ್ಲಿ ನೀನು ನೋಡಿದವರ ಕರ್ಮವು ಬಹು ಕ್ರೂರವಾದುದು. ಆ ಕರ್ಮದ ವಿಪಾಕವನ್ನು ಹೇಳುತ್ತೇನೆ. ಕೇಳು,

೩೧. ಅಪ್ಪ, ಇದು ಕರ್ಮಭೂಮಿಯು. ಮಿಕ್ಕವು ಭೋಗಭೂಮಿಗಳು, ಈ ಭೂಮಿಯಲ್ಲಿ ಕರ್ಮಮಾಡಿದವನು ಸ್ವರ್ಗಾದಿಗಳಿಗೆ ಹೋಗಿ ಸುಖವನ್ನು ಅನುಭವಿಸುತ್ತಾನೆ.

೩೨. ಚೋಳದೇಶದಲ್ಲಿ ಸುಬಾಹುವೆಂಬ ರಾಜನಿದ್ದನು. ಅವನಂತೆ ಗುಣವಂತನೂ, ಸುಂದರನೂ, ವೀರನೂ ಆದ ಮತ್ತೊಬ್ಬನು ಭೂಮಿಯಲ್ಲೇ ಇರಲಿಲ್ಲ.

೩೩. ಅವನು ವಿಷ್ಣುಭಕ್ತನು, ಜ್ಞಾನಿಯು, ವೈಷ್ಣವರಿಗೆ ಪ್ರೀತಿಪಾತ್ರನು. ಅನೇಕ ವಿಧಗಳಿಂದ ವಿಷ್ಣುವಿನ ಪೂಜೆಯನ್ನೇ ಮಾಡುತ್ತಿದ್ದನು.

**ಅಶ್ವಮೇಧಾದಿಕಾನ್ ಸರ್ವಾನ್ ಯಜೇದ್ಯಜ್ಞಾನ್ ಸ ವೈ ನೃಪಃ ।**
**ಪುರೋಧಾಸ್ತಸ್ಯ ಚೈವಾಸ್ತಿ ಜೈಮಿನಿರ್ನಾಮ ಬ್ರಾಹ್ಮಣಃ ॥ ૩೪ ॥**

**ಸ ಚಾಹೂಯ ಸುಬಾಹುಂ ತಮಿದಂ ವಚನ ಮಬ್ರವೀತ್ ।**
**ರಾಜನ್ ದೇಹಿ ಸುದಾನಾನಿ ಯೈಶ್ಚ ಸೌಖ್ಯಂ ಪ್ರಭುಜ್ಯತೇ ॥ ೩೫ ॥**

**ದಾನೈಸ್ತು ಲಭತೇ ಲೋಕಾನ್ ದುರ್ಗಾನ್ ಪ್ರೇತ್ಯ ಗತೋ ನರಃ ।**
**ದಾನೇನ ಸುಖಮಾಪ್ನೋತಿ ಯಶಃ ಪ್ರಾಪ್ನೋತಿ ಶಾಶ್ವತಂ ॥ ೩೬ ॥**

**ದಾನೇನೈವಾಸ್ಯ ಸತ್ಕೀರ್ತಿರ್ಜಾಯತೇ ಮರ್ತ್ಯಮಂಡಲೇ ।**
**ಯಾವತ್ಕೀರ್ತಿಸ್ಸ್ಥಿರಾ ಚಾತ್ರ ತಾವತ್ಕರ್ತಾ ದಿವಂ ವಸೇತ್ ॥ ೩೭ ॥**

**ತದ್ದಾನಂ ದುಷ್ಕರಂ ಪ್ರಾಹುರ್ದಾತುಂ ನೈವ ಪ್ರಶಕ್ಯತೇ ।**
**ತಸ್ಮಾತ್ಸರ್ವಪ್ರಯತ್ನೇನ ದಾತವ್ಯಂ ಮಾನವೈಸ್ಸದಾ ॥ ೩೮ ॥**

---

೩೪. ಆ ರಾಜನು ಅಶ್ವಮೇಧಾದಿ ಯಾಗಗಳನ್ನು ಮಾಡಿದನು. ಅವನಿಗೆ ಜೈಮಿನಿ ಎಂಬ ಪುರೋಹಿತನೊಬ್ಬನಿದ್ದನು.

೩೫. ಆ ಪುರೋಹಿತನು ಸುಬಾಹುವನ್ನು ಕರೆದು, ಅಯ್ಯಾ, ಒಳ್ಳೆಯ ದಾನಗಳನ್ನು ಮಾಡು. ಆ ದಾನಮಾಡಿದರೆ ಸೌಖ್ಯಗಳನ್ನು ಅನುಭವಿಸಬಹುದು.

೩೬. ಕಷ್ಟಗಳನ್ನು ಹೊಂದಿದ್ದರೆ ದಾನಗಳಿಂದಲೇ ಅದರಿಂದ ತಪ್ಪಿಸಿಕೊಂಡು ಉತ್ತಮ ಲೋಕವನ್ನು ಹೊಂದಬಹುದು. ದಾನದಿಂದ ಸುಖವು ಲಭಿಸುತ್ತದೆ. ಶಾಶ್ವತವಾದ ಯಶಸ್ಸು ಬರುತ್ತದೆ. ದಾನದಿಂದಲೇ ಒಳ್ಳೆಯ ಕೀರ್ತಿಬರುತ್ತದೆ. ಭೂಮಿಯಲ್ಲಿ ಪೂಜ್ಯನಾಗುತ್ತಾನೆ.

೩೭. ಎಲ್ಲಿಯವರೆಗೆ ಭೂಲೋಕದಲ್ಲಿ ದಾನಮಾಡಿದವನ ಕೀರ್ತಿಯು ಸ್ಥಿರವಾಗಿರುತ್ತದೆಯೋ ಅಲ್ಲಿಯವರೆಗೂ ಅವನು ಸ್ವರ್ಗದಲ್ಲಿರುತ್ತಾನೆ.

೩೮. ಆರೀತಿ ದಾನಮಾಡುವುದು ಕಷ್ಟ. ದಾನಮಾಡಲಾಗುವುದೇ ಇಲ್ಲ. ಆದ್ದರಿಂದ ಸರ್ವಪ್ರಯತ್ನದಿಂದಲೂ ಮನುಜರು ನಿತ್ಯವೂ ದಾನಮಾಡುತ್ತಿರಬೇಕು ಎಂದನು.

॥ ರಾಜೋವಾಚ ॥

ದಾನಸ್ಯ ತಪಸೋ ವಾಪಿ ದ್ವಯೋರ್ಮಧ್ಯೇ ಸುದುಷ್ಕರಂ ।
ಕಿಂ ವಾ ಮಹಾಫಲಂ ಪ್ರೇತ್ಯ ತನ್ಮೇ ಬ್ರೂಹಿ ದ್ವಿಜೋತ್ತಮ ॥ ೩೯ ॥

॥ ಜೈಮಿನಿರುವಾಚ ॥

ದಾನಾನ್ನ ದುಷ್ಕರತರಂ ಪೃಥಿವ್ಯಾಮಸ್ತಿ ಕಿಂಚನ ।
ರಾಜನ್ ಪ್ರತ್ಯಕ್ಷಮೇವೈಕಂ ದೃಶ್ಯತೇ ಲೋಕಸಾಕ್ಷಿಕಂ ॥ ೪೦ ॥

ಪರಿತ್ಯಜ್ಯ ಪ್ರಿಯಾನ್ ಪ್ರಾಣಾನ್ ಧನಾರ್ಥೇ ಲೋಭಮೋಹಿತಾಃ ।
ಪ್ರವಿಶಂತಿ ನರಾ ಲೋಕೇ ಸಮುದ್ರಮಟವೀಂ ತಥಾ ॥ ೪೧ ॥

ಸೇವಾಮನ್ಯೇ ಪ್ರಕುರ್ವಂತಿ ಪ್ರಪಠಂತಿ ವಿಪಶ್ಚಿತಃ ।
ಹಿಂಸಾಪ್ರಾಯಾನ್ಬಹೂನ್ಕ್ಲೇಶಾನ್ ಕೃಷಿಂ ಚೈವ ತಥಾಪರೇ ॥ ೪೨ ॥

---

೩೯. ರಾಜನು ಕೇಳಿದನು:—ದಾನ ತಪಸ್ಸುಗಳಲ್ಲಿ ಯಾವುದು ಕಷ್ಟವಾದುದು? ಯಾವುದನ್ನು ಮಾಡಿದರೆ ಸ್ವರ್ಗದಲ್ಲಿ ಸುಖಿಸುತ್ತಾನೆ ಹೇಳು ಎನ್ನಲು,

೪೦. ಜೈಮಿನಿಯು ಹೇಳಿದನು :—ದಾನಕ್ಕಿಂತ ಕಷ್ಟವಾದುದು ಪ್ರಪಂಚದಲ್ಲಿ ಮತ್ತೊಂದಿಲ್ಲ. ಅದು ಲೋಕಸಾಕ್ಷಿಯಾಗಿ ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದೆಯಷ್ಟೆ?

೪೧. ಜನರು ಲೋಕದಲ್ಲಿ ಹಣಕ್ಕೋಸ್ಕರ ಆಶೆಪಟ್ಟು, ಪ್ರಿಯವಾದ ಪ್ರಾಣಗಳನ್ನು ಹುಲ್ಲಿಗಿಂತ ಕಡೆಯಾಗಿ ಕಂಡು, ಸಮುದ್ರವನ್ನಾಗಲಿ ಕಾಡನ್ನಾಗಲಿ ಪ್ರವೇಶಿಸುತ್ತಾರೆ.

೪೨. ಆ ಹಣಕ್ಕೋಸ್ಕರ ಕೆಲವರು ಮತ್ತೊಬ್ಬರಿಗೆ ಆಳಾಗಿರುತ್ತಾರೆ. ವಿದ್ವಾಂಸರೂ ಕೂಡ ಮತ್ತೊಬ್ಬರ ಅಧೀನರಾಗಿ ಓದುತ್ತಿರುತ್ತಾರೆ. ಹಣದಾಸೆಗಾಗಿಯೇ ಕೆಲವರು ಹಿಂಸೆಮಾಡಿ ಪ್ರಾಣಿವಧೆ ಮಾಡುತ್ತಾರೆ. ಕೆಲವರು ವ್ಯವಸಾಯ ಮಾಡುತ್ತಾರೆ.

ತಸ್ಯ ದುಃಖಾರ್ಜಿತಸ್ಯಾಪಿ ಪ್ರಾಣೇಭ್ಯೋಽಪಿ ಗರೀಯಸಃ ।
ಅರ್ಥಸ್ಯ ಪುರುಷವ್ಯಾಘ್ರ ಪರಿತ್ಯಾಗಸ್ಸುದುಷ್ಕರಃ ।
ವಿಶೇಷತೋ ಮಹಾರಾಜ ತಸ್ಯ ನ್ಯಾಯಾರ್ಜಿತಸ್ಯ ಚ ॥ ೪೩ ॥

ಶ್ರದ್ಧಯಾ ವಿಧಿವತ್ಪಾತ್ರೇ ದತ್ತಸ್ಯಾನ್ತೋ ನ ವಿದ್ಯತೇ ।
ಶ್ರದ್ಧಾ ಧರ್ಮಸುತಾ ದೇವೀ ಪಾವನೀ ವಿಶ್ವಭಾವಿನೀ ॥ ೪೪ ॥

ಸಾವಿತ್ರೀ ಪ್ರಸವಿತ್ರೀ ಚ ಸಂಸಾರಾರ್ಣವತಾರಿಣೀ ।
ಶ್ರದ್ಧಯಾ ಧ್ಯಾಯತೇ ಧರ್ಮೋ ವಿದ್ವದ್ಭಿಶ್ಚಾತ್ಮವಾದಿಭಿಃ ॥ ೪೫ ॥

ನಿಷ್ಕಿಂಚನಾಸ್ತು ಮುನಯಃ ಶ್ರದ್ಧಾವಂತೋ ದಿವಂ ಗತಾಃ ।
ಸಂತಿ ದಾನಾನ್ಯನೇಕಾನಿ ನಾನಾಭೇದೈರ್ನೃಪೋತ್ತಮ ॥ ೪೬ ॥

ಅನ್ನದಾನಾತ್ಪರಂ ನಾಸ್ತಿ ಪ್ರಾಣಿನಾಂ ಗತಿದಾಯಕಂ ।
ತಸ್ಮಾದನ್ನಂ ಪ್ರದಾತವ್ಯಂ ಪಯಸಾ ಚ ಸಮನ್ವಿತಂ ॥ ೪೭ ॥

---

೪೩. ದುಃಖದಿಂದ ಸಂಪಾದಿಸಿದ, ಪ್ರಾಣಕ್ಕಿಂತ ಪ್ರಿಯವಾದ ಹಣವನ್ನು ಕೊಡುವುದೆಂದರೆ ಬಹುಕಷ್ಟ. ಅದರಲ್ಲಿಯೂ ನ್ಯಾಯದಿಂದ ಸಂಪಾದಿಸಿದುದನ್ನು ತ್ಯಾಗಮಾಡುವುದೆಂದರೆ ಬಹುಕಷ್ಟವೇ ಆಗುತ್ತದೆ.

೪೪. ಶ್ರದ್ಧೆಯಿಂದ ಯೋಗ್ಯನಾದವನಿಗೆ ದಾನಮಾಡಿದುದಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಶ್ರದ್ಧೆಯೇ ಧರ್ಮದ ಮಗಳು. ಪಾಪನವು. ಪ್ರಪಂಚವೇ ಅದನ್ನು ಗೌರವಿಸುವುದು.

೪೫. ಆ ಶ್ರದ್ಧೆಯೇ ಬೇಕಾದುದನ್ನು ಕೊಡತಕ್ಕುದು. ಹುಟ್ಟಿಸತಕ್ಕುದು. ಸಂಸಾರವೆಂಬ ಸಮುದ್ರದಿಂದ ದಾಟಿಸತಕ್ಕುದು. ಶ್ರದ್ಧೆಯಿಂದಲೇ ಜ್ಞಾನಿಗಳು ಧರ್ಮವನ್ನು ಧ್ಯಾನಿಸುವರು.

೪೬. ಏನೂ ಇಲ್ಲದ ಋಷಿಗಳು ಶ್ರದ್ಧೆಯಿಂದಲೇ ಸ್ವರ್ಗವನ್ನು ಹೊಂದಿದರು. ದಾನಗಳು ವಿವಿಧವಾಗಿ ಬೇಕಾದಷ್ಟಿವೆ.

೪೭-೪೮. ಅನ್ನದಾನಕ್ಕಿಂತ ಪ್ರಾಣಿಗಳಿಗೆ ಮೋಕ್ಷದಾಯಕವಾದ ಮತ್ತೊಂದು ದಾನವಿಲ್ಲ. ಆದ್ದರಿಂದ ಒಳ್ಳೆಯ ಮಾತನಾಡುತ್ತಾ ಹಾಲು ಮುಂತಾದ ಉತ್ತಮ

ಮಧುರೇಣಾಪಿ ಪುಣ್ಯೇನ ವಚಸಾ ಚ ಸಮನ್ವಿತಂ ।
ನಾಸ್ತ್ಯನ್ನಾಚ್ಚ ಪರಂ ದಾನಮಿಹಲೋಕೇ ಪರತ್ರ ಚ ॥ ೪೮ ॥

ತಾರಣಾಯ ಹಿತಾಯೈವ ಸುಖಸಂಪತ್ತಿಹೇತವೆ ।
ಶ್ರದ್ಧಯಾ ದೀಯತೇ ಪಾತ್ರೇ ನಿರ್ಮಲೇನಾಪಿ ಚೇತಸಾ ॥ ೪೯ ॥

ಅನ್ನಸ್ಯೈಕಪ್ರದಾನಸ್ಯ ಫಲಂ ಭುಂಕ್ತೇ ನರಸ್ಸದಾ ।
ಗ್ರಾಸಾಗ್ರಂ ಸಂಪ್ರದಾತವ್ಯಂ ಮುಷ್ಟಿಪ್ರಸ್ಥಂ ನ ಸಂಶಯಃ ॥ ೫೦ ॥

ಅಕ್ಷಯಂ ಜಾಯತೇ ತಸ್ಯ ದಾನಸ್ಯಾಪಿ ಮಹತ್ಫಲಂ ।
ನ ಚ ಪ್ರಸ್ಥಂ ನ ವಾ ಮುಷ್ಟಿಂ ಯಸ್ಯಾಪಿ ನ ಹಿ ಸಂಭವೇತ್ ॥ ೫೧ ॥

ಅನಾಸ್ತಿಕಪ್ರಭಾವೇನ ಪರ್ವಣಿ ಪ್ರಾಪ್ಯ ಮಾನವಃ ।
ಶ್ರದ್ಧಯಾ ಬ್ರಾಹ್ಮಣಂ ಚೈಕಂ ಭಕ್ತ್ಯಾ ಚೈವ ಪ್ರಭೋಜಯೇತ್ ॥ ೫೨ ॥

ಏಕಸ್ಯಾಪಿ ಪ್ರದಾನಸ್ಯ ಹ್ಯನ್ನಸ್ಯಾಪಿ ನರೇಶ್ವರ ।
ಜನ್ಮಾಂತರಂ ಸುಸಂಪ್ರಾಪ್ಯ ನಿತ್ಯಮೇವ ಭುನಕ್ತಿ ಚ ।
ಪೂರ್ವಜನ್ಮನಿ ಯದ್ದತ್ತಂ ಭಕ್ತ್ಯಾ ಪಾತ್ರೇ ಸತ್ಸ್ವನ್ನರೈಃ ॥ ೫೩ ॥

---

ಪದಾರ್ಥಗಳೊಂದಿಗೆ ಕೂಡಿದ ಅನ್ನವನ್ನು ಕೊಡಬೇಕು. ಅನ್ನದಾನಕ್ಕಿಂತ ಉತ್ತಮವಾದದ್ದು ಇಹಪರಗಳಲ್ಲಿ ಮತ್ತೊಂದಿಲ್ಲ.

೪೯. ಆದ್ದರಿಂದ ಸುಖಕ್ಕೋಸ್ಕರವೂ ಪರಲೋಕಕ್ಕೋಸ್ಕರವೂ ನಿರ್ಮಲವಾದ ಮನಸ್ಸಿನಿಂದ ಅನ್ನದಾನವನ್ನು ಶ್ರದ್ಧೆಯಿಂದ ಮಾಡಬೇಕು.

೫೦. ಅನ್ನದಾನದ ಫಲವನ್ನೇ ಮನುಷ್ಯನು ಯಾವಾಗಲೂ ಅನುಭವಿಸುವನು. ಆದ್ದರಿಂದ ಒಂದು ಮುಷ್ಟಿಯನ್ನಾದರೂ ದಾನಮಾಡುತ್ತಿರಬೇಕು.

೫೧-೫೨. ಆ ಮುಷ್ಟಿ ಅನ್ನದಾನಕ್ಕೆ ಅಕ್ಷಯವಾದ ಮಹಾಫಲವು ಲಭಿಸುತ್ತವೆ. ಬಳ್ಳವಾಗಲಿ, ಮುಷ್ಟಿಯಾಗಲಿ ಅನ್ನವು ಸಿಕ್ಕದಿದ್ದಲ್ಲಿ ಪರ್ವಸಮಯದಲ್ಲಿ ಆಸ್ತಿಕ್ಯದಿಂದಲೂ ಭಕ್ತಿಶ್ರದ್ಧೆಗಳಿಂದಲೂ ಒಬ್ಬನನ್ನು ಚನ್ನಾಗಿ ಊಟಮಾಡಿಸಬೇಕು.

೫೩. ಆ ಒಬ್ಬನಿಗೆ ಹಾಕಿದ ಅನ್ನದ ಪ್ರಭಾವದಿಂದ ಜನ್ಮಾಂತರದಲ್ಲಿ ನಿತ್ಯವೂ ಆ ಅನ್ನವನ್ನು ಊಟಮಾಡುತ್ತಾನೆ ಪೂರ್ವಜನ್ಮದಲ್ಲಿ ಭಕ್ತಿಯಿಂದ ಒಂದಾವರ್ತಿ ದಾನಮಾಡಿದ್ದನ್ನು ಅನೇಕಕಾಲ ಈ ಜನ್ಮದಲ್ಲಿ ಊಟಮಾಡುತ್ತಾನೆ. ಹಾಗೆ ದಾನಮಾಡಿದರೆ ಜನ್ಮಾಂತರದಲ್ಲೂ ನಿತ್ಯವೂ ಅದೇ ಅನ್ನವನ್ನು ಊಟಮಾಡುತ್ತಾನೆ.

ಜನ್ಮಾಂತರಂ ಚ ಸಂಪ್ರಾಪ್ಯ ನಿತ್ಯಂ ಚಾನ್ನಂ ಪ್ರಭುಂಜ್ಯತೇ ।
ಅನ್ನದಾನಂ ಪ್ರಯಚ್ಛಂತಿ ನಿತ್ಯಂ ಹಿ ಬ್ರಾಹ್ಮಣಾಯ ಯೇ ।
ಮಿಷ್ಟಾನ್ನಪಾನಂ ಭುಂಜಂತಿ ತೇ ನರಾಃ ಸ್ವರ್ಗಗಾಮಿನಃ ॥ ೫೪ ॥

ಅನ್ನಮೇವ ವದಂತ್ಯೇತೆ ಋಷಯೋ ವೇದಪಾರಗಾಃ ।
ಪ್ರಾಣರೂಪಂ ನ ಸಂದೇಹಮಮೃತಾದ್ಧಿ ಸಮುದ್ಭವಂ ॥ ೫೫ ॥

ಪ್ರಾಣಾಸ್ತೇನ ಪ್ರದತ್ತಾ ಹಿ ಯೇನ ಚಾನ್ನಂ ಸಮರ್ಪಿತಂ ।
ಅನ್ನದಾನಂ ಮಹಾರಾಜ ದೇಹಿ ತ್ವಂ ವೈ ಪ್ರಯತ್ನತಃ ॥ ೫೬ ॥

ಏವಮಾಕರ್ಣ್ಯ ವೈ ರಾಜಾ ಜೈಮಿನೇಸ್ತು ಮಹದ್ವಚಃ ।
ಪುನಃ ಪಪ್ರಚ್ಛ ತಂ ವಿಪ್ರಂ ಜೈಮಿನಿಂ ಜ್ಞಾನಪಂಡಿತಂ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ ಚತುರ್ನವತಿತಮೋಽಧ್ಯಾಯಃ



೫೪. ನಿತ್ಯವೂ ಬ್ರಾಹ್ಮಣನಿಗೆ ಯಾರು ಅನ್ನದಾನಮಾಡುತ್ತಾರೆಯೋ ಅವರು ಮಿಷ್ಟಾನ್ನವನ್ನು ಊಟಮಾಡುತ್ತಾ ಸ್ವರ್ಗಕ್ಕೆ ಹೋಗುತ್ತಾರೆ.

೫೫. ವೇದಪಾರಗರಾದ ಋಷಿಗಳು ಅನ್ನವನ್ನು ಪ್ರಾಣರೂಪವನ್ನಾಗಿ ಹೇಳುತ್ತಾರೆ. ಸಂದೇಹವಿಲ್ಲ. ಅನ್ನವು ಅಮೃತದಿಂದ ಹುಟ್ಟಿದುದಷ್ಟೆ.

೫೬. ಯಾವನು ಅನ್ನದಾನಮಾಡುತ್ತಾನೆಯೋ ಅವನು ಪ್ರಾಣದಾನಮಾಡಿದಂತೆ ಗಣಿಸಲ್ಪಡುತ್ತಾನೆ. ಆದುದರಿಂದ ಎಲೈ ರಾಜನೇ, ನೀನು ಅನ್ನದಾನವನ್ನು ಪ್ರಯತ್ನಪಟ್ಟು ಮಾಡು ಎಂದನು.

೫೭. ರಾಜನು ಜೈಮಿನಿಯು ಹೇಳಿದ ಈ ಮಾತನ್ನು ಕೇಳಿ ಪಂಡಿತನಾದ ಆ ಜೈಮಿನಿಯನ್ನು ಕುರಿತು ಪುನಃ ಕೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚನವತಿತಮೋಽಧ್ಯಾಯಃ

---

॥ ಸುಬಾಹುರುವಾಚ ॥

ಸ್ವರ್ಗಸ್ಯ ಮೇ ಗುಣಾನ್ ಬ್ರೂಹಿ ಸಾಂಪ್ರತಂ ವೈ ದ್ವಿಜೋತ್ತಮ ।
ಏತತ್ಸರ್ವಂ ದ್ವಿಜಶ್ರೇಷ್ಠ ಕರಿಷ್ಯಾಮಿ ಸಭಾವಿಕಂ ॥ ೧ ॥

॥ ಜೈಮಿನಿರುವಾಚ ॥

ನಂದನಾದೀನಿ ದಿವ್ಯಾನಿ ರಮ್ಯಾಣಿ ವಿವಿಧಾನಿಚ ।
ತತ್ರೋದ್ಯಾನಾನಿ ಪುಣ್ಯಾನಿ ಸರ್ವಕಾಮಪ್ರದಾನಿ ಚ ॥ ೨ ॥

ಸರ್ವಕಾಮಫಲೈರ್ವೃಕ್ಷೈಃ ಶೋಭನಾನಿ ಸಮಂತತಃ ।
ವಿಮಾನಾನಿ ಸುದಿವ್ಯಾನಿ ಸೇವಿತಾನ್ಯಪ್ಸರೋಗಣೈಃ ॥ ೩ ॥

---

## ತೊಂಭತ್ತೈದನೆಯ ಅಧ್ಯಾಯವು

೧. ಸುಬಾಹುವು ಕೇಳಿದನು:—ಅನ್ನದಾನದ ಮಹಿಮೆಯನ್ನು ಹೇಳಿದೆಯಷ್ಟೆ. ಆದರಿಂದ ಸ್ವರ್ಗದಲ್ಲಿ ದೊರೆಯುವ ಸುಖಾದಿಗಳನ್ನು ಹೇಳು. ಸ್ವರ್ಗದ ಗುಣಗಳನ್ನೂ ಹೇಳು. ಅದೆಲ್ಲವನ್ನೂ ಭಕ್ತಿಶ್ರದ್ಧೆಗಳಿಂದ ಮಾಡುತ್ತೇನೆ ಎನ್ನಲು,

೨. ಜೈಮಿನಿಯು ಹೇಳಿದನು:—ಅಲ್ಲಿ ನಂದನವನವೇ ಮೊದಲಾದ ದಿವ್ಯವಾದ ಅನೇಕಬಗೆಯ ಉದ್ಯಾನಗಳಿವೆ. ಆ ಉದ್ಯಾನಗಳಲ್ಲಿ ಇಲ್ಲದಿರುವ ಪದಾರ್ಥಗಳೇ ಇಲ್ಲ.

೩. ಆ ಉದ್ಯಾನದಲ್ಲಿ ಎಲ್ಲಾ ಕಡೆಯಲ್ಲೂ ಹಣ್ಣುಬಿಟ್ಟ ಮರಗಳು ಬೇಕಾದಷ್ಟಿವೆ. ಅಪ್ಸರಸ್ತ್ರೀಯರು ಶುಶ್ರೂಷೆಮಾಡುತ್ತಿರುವ ಅನೇಕ ವಿಮಾನಗಳೂ ಇವೆ.

ಸರ್ವತ್ರೈವ ವಿಚಿತ್ರಾಣಿ ಕಾಮಗಾನಿ ವಶಾನಿ ಚ ।
ತರುಣಾದಿತ್ಯವರ್ಣಾನಿ ಮುಕ್ತಾಜಾಲಾನ್ತರಾಣಿ ಚ ॥ ೪ ॥

ಚಂದ್ರಮಂಡಲಶುಭ್ರಾಣಿ ಹೇಮಶಯ್ಯಾಸನಾನಿ ಚ ।
ಸರ್ವಕಾಮಸಮೃದ್ಧಾಶ್ಚ ಸರ್ವದುಃಖವಿವರ್ಜಿತಾಃ ।
ನರಾಃ ಸುಕೃತಿನಸ್ತೇಷು ವಿಚರಂತಿ ಯಥಾಸುಖಂ ॥ ೫ ॥

ನ ತತ್ರ ನಾಸ್ತಿಕಾ ಯಾನ್ತಿ ನ ಸ್ತೇನಾ ನಾಜಿತೇಂದ್ರಿಯಾಃ ।
ನ ನೃಶಂಸಾ ನ ಪಿಶುನಾಃ ಕೃತಘ್ನಾ ನ ಚ ಮಾನಿನಃ ॥ ೬ ॥

ಸತ್ಯಾಶ್ರಯಸ್ಥಿತಾಶ್ಶೂರಾ ದಯಾವನ್ತಃ ಕ್ಷಮಾಪರಾಃ ।
ಯಜ್ವಾನೋ ದಾನಶೀಲಾಶ್ಚ ತತ್ರ ಗಚ್ಛಂತಿ ಮಾನವಾಃ ॥ ೭ ॥

ನ ರೋಗಾ ನ ಜರಾಮೃತ್ಯುರ್ನ ಶೋಕೋ ನ ಹಿಮಾತಪೌ ।
ನ ತತ್ರ ಕ್ಷುತ್ಪಿಪಾಸಾ ಚ ನ ಗ್ಲಾನಿಶ್ಚಾಪಿ ಕಸ್ಯಚಿತ್ ॥ ೮ ॥

---

೪. ಆ ವಿಮಾನಗಳು ಅನೇಕ ಶಿಲ್ಪಿಗಳಿಂದ ಕೂಡಿದೆ. ಅವರಿಗೆ ವಶವಾಗಿ ಅವರಿಷ್ಟದಂತೆ ಸಂಚರಿಸುತ್ತವೆ. ಬೆಳ್ಳಗಿರುವ ಹಾಸಿಗೆಗಳೂ ಮತ್ತು ಚಿನ್ನದಬಣ್ಣದ ಆಸನಗಳೂ ಅವುಗಳಲ್ಲಿವೆ.

೫. ಸಮಸ್ತವಾದ ಕಾಮಗಳಿಂದ ಕೂಡಿವೆ. ಯಾವ ದುಃಖವೂ ಇಲ್ಲ. ಪುಣ್ಯವಂತರಾದ ನರರು ಅದರಲ್ಲಿ ಸುಖವಾಗಿ ಸಂಚರಿಸುತ್ತಾರೆ.

೬. ಅಲ್ಲಿಗೆ ನಾಸ್ತಿಕರೂ, ಕಳ್ಳರೂ, ಇಂದ್ರಿಯಗಳನ್ನು ಜಯಿಸಿದವರೂ. ಘಾತುಕರೂ, ಚಾಡಿಕೋರರೂ, ಉಪಕಾರಸ್ಮರಣೆಯಿಲ್ಲದವರೂ, ಕೋಪಿಗಳೂ ಹೋಗಲಾರರು.

೭. ಸತ್ಯವಂತರು, ಶೂರರು, ದಯಾಳುಗಳು, ಕ್ಷಮಾಶೀಲರು, ಯಾಗಮಾಡಿದವರು, ದಾನಿಗಳು ಆದ ಮನುಷ್ಯರು ಮಾತ್ರ ಅಲ್ಲಿಗೆ ಹೋಗುತ್ತಾರೆ.

೮. ಅಲ್ಲಿ ರೋಗ, ಮೃತ್ಯು, ಮುಪ್ಪು, ಶೋಕ, ಶೀತ, ಉಷ್ಣ, ಹಸಿವು, ಬಾಯಾರಿಕೆ, ತೇಜೋಹಾನಿ ಇವು ಯಾವುವೂ ಒಬ್ಬನಿಗೂ ಇರುವುದಿಲ್ಲ.

ಏತೇ ಚಾನ್ಯೇ ಚ ಬಹುವೋ ಗುಣಾಃ ಸ್ವರ್ಗಸ್ಯ ಭೂಪತೇ ।
ದೋಷಾಸ್ತತ್ರೈವ ಯೇ ಸಂತಿ ತಾನ್ ಶೃಣುಷ್ವ ಚ ಭೂಪತೇ ॥ ೯ ॥

ಶುಭಸ್ಯ ಕರ್ಮಣಃ ಕೃತ್ಸ್ನಂ ಫಲಂ ತತ್ರೈವ ಭುಜ್ಯತೇ ।
ನ ಚಾತ್ರ ಕ್ರಿಯತೇ ಭೂಪ ದೋಷಸ್ತತ್ರ ಮಹಾನಯಂ ॥ ೧೦ ॥

ಅಸಂತೋಷಶ್ಚ ಭವತಿ ದೃಷ್ಟ್ವಾನ್ಯೇಷಾಂ ಪರಾಂ ಶ್ರಿಯಂ ।
ಸುಖವ್ಯಾಪ್ತಮನಸ್ಕಾನಾಂ ಸಹಸಾ ಪತನಂ ತಥಾ ॥ ೧೧ ॥

ಇಹ ಯತ್ಕ್ರಿಯತೇ ಕರ್ಮ ಫಲಂ ತತ್ರೈವ ಭುಜ್ಯತೇ ।
ಕರ್ಮಭೂಮಿರಿಯಂ ರಾಜನ್ ಫಲಭೂಮಿಶ್ಚ ಸಾ ಸ್ಮೃತಾ ॥ ೧೨ ॥

॥ ಸುಬಾಹುರುವಾಚ ॥

ಮಹಾಂತಸ್ತು ಇಮೇ ದೋಷಾಸ್ತ್ವಯಾ ಸ್ವರ್ಗಸ್ಯ ಕೀರ್ತಿತಾಃ ।
ನಿರ್ದೋಷಾಶ್ಶಾಶ್ವತಾ ಯೇಽನ್ಯೇ ತಾಂಸ್ತ್ವಂ ಲೋಕಾನ್ವದ ದ್ವಿಜ ॥ ೧೩ ॥

---

೯. ಸ್ವರ್ಗದಲ್ಲಿ ಇವೂ ಇನ್ನೂ ಅನೇಕ ಗುಣಗಳೂ ಇವೆ. ಅಲ್ಲಿರತಕ್ಕ ದೋಷಗಳನ್ನು ಹೇಳುತ್ತೇನೆ ಕೇಳು.

೧೦. ಪುರುಷನು ತಾನು ಮಾಡಿದ ಶುಭಕರ್ಮದ ಫಲವನ್ನು ಅಲ್ಲಿ ಅನುಭವಿಸುತ್ತಾನೆ. ಆದರೆ ಅಲ್ಲಿ ಶುಭಕೆಲಸವನ್ನು ಮಾಡಲಾಗುವುದಿಲ್ಲ. ಅದು ಒಂದೇ ದೋಷ.

೧೧. ಮಿಕ್ಕವರ ಸಂಪತ್ತನ್ನು ನೋಡಿ ಸಂಕಟವಾಗುತ್ತದೆ. ಸುಖದಲ್ಲೇ ಇದ್ದವರು ಕರ್ಮಫಲವು ತೀರಿದಬಳಿಕ ಒಡನೆ ಬೀಳುವುದನ್ನು ನೋಡಿ ಸಂಕಟವಾಗುತ್ತದೆ.

೧೨. ಇಲ್ಲಿ ಮಾಡಿದ ಕರ್ಮಕ್ಕೆ ಅಲ್ಲಿ ಫಲವನ್ನು ಅನುಭವಿಸುತ್ತಾನೆ. ಇದು ಕರ್ಮಭೂಮಿಯು. ಸ್ವರ್ಗವು ಭೋಗಭೂಮಿಯು ಎಂದನು.

೧೩. ಸುಬಾಹುವು ಮತ್ತೆ ಕೇಳಿದನು:—ಸ್ವರ್ಗದಲ್ಲಿ ನೀನು ಹೇಳಿದ ಇವು ಮಹಾದೋಷಗಳೇ ಸರಿ. ನಿರ್ದೋಷವಾಗಿರುವ ಬೇರೆ ಲೋಕಗಳನ್ನು ಹೇಳು ಎಂದನು.

॥ ಜೈಮಿನಿರುವಾಚ ॥

ಆಬ್ರಹ್ಮಸದನಾದೇವ ದೋಷಾಸ್ಸಂತಿ ಚ ವೈ ನೃಪ ।
ಅತ ಏವ ಹಿ ನೇಚ್ಛಂತಿ ಸ್ವರ್ಗಪ್ರಾಪ್ತಿಂ ಮನೀಷಿಣಃ ॥ ೧೪ ॥

ಆಬ್ರಹ್ಮಸದನಾದೂರ್ಧ್ವಂ ತದ್ವಿಷ್ಣೋಃ ಪರಮಂ ಪದಂ ।
ಶುಭಂ ಸನಾತನಂ ಜ್ಯೋತಿಃ ಪರಂ ಬ್ರಹ್ಮೇತಿ ತದ್ವಿದುಃ ॥ ೧೫ ॥

ನ ತತ್ರ ಮೂಢಾ ಗಚ್ಛಂತಿ ಪುರುಷಾ ವಿಷಯಾತ್ಮಕಾಃ ।
ದಂಭಲೋಭಭಯಕ್ರೋಧದ್ರೋಹದ್ವೇಷೈರಭಿಪ್ಲುತಾಃ ॥ ೧೬ ॥

ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾಃ ಸಂಯತೇಂದ್ರಿಯಾಃ ।
ಧ್ಯಾನಯೋಗರತಾಶ್ಚೈವ ತತ್ರ ಗಚ್ಛಂತಿ ಸಾಧವಃ ॥ ೧೭ ॥

ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ॥ ೧೮ ॥

---

೧೪. ಜೈಮಿನಿಯು ಹೇಳಿದನು :—ಬ್ರಹ್ಮಲೋಕ ಮೊದಲುಗೊಂಡು ಎಲ್ಲದರಲ್ಲೂ ದೋಷಗಳಿದ್ದೇ ಇವೆ. ಆದ್ದರಿಂದಲೇ ಜ್ಞಾನಿಗಳು ಸ್ವರ್ಗಪ್ರಾಪ್ತಿಯನ್ನು ಇಚ್ಛಿಸುವುದಿಲ್ಲ.

೧೫. ಬ್ರಹ್ಮಲೋಕದಿಂದ ಮೇಲಕ್ಕೆ ವಿಷ್ಣುವಿನ ಪರಮಪದವು ಇರುವುದು. ಅದು ಶುಭವಾದುದು. ಸನಾತನವಾದುದು. ಜ್ಯೋತೀರೂಪವಾದುದು. ಜ್ಞಾನಿಗಳು ಅದನ್ನು ಪರಬ್ರಹ್ಮವೆಂದು ತಿಳಿಯುತ್ತಾರೆ.

೧೬. ವಿಷಯಲೋಲುಪರಾದ ಮೂಢರು ಅಲ್ಲಿಗೆ ಹೋಗಲಾರರು. ಡಂಭ, ಲೋಭ, ಭಯ, ಕ್ರೋಧ, ದ್ರೋಹ, ದೋಷಗಳುಳ್ಳವರು ಹೋಗಲಾರರು.

೧೭-೧೮. ನಿರ್ಮಲರು, ನಿರಹಂಕಾರರು, ನಿರ್ದ್ವಂದ್ವರು, ಇಂದ್ರಿಯನಿಗ್ರಹಿಗಳು, ಧ್ಯಾನಾಸಕ್ತರು, ಯೋಗಾಸಕ್ತರು, ಇಂತಹ ಸಾಧುಗಳು ಅಲ್ಲಿಗೆ ಹೋಗುತ್ತಾರೆ ಹೀಗೆ ನೀನು ಕೇಳಿದುದೆಲ್ಲವನ್ನೂ ಹೇಳಿದ್ದೇನೆ ಎಂದನು.

॥ ಕುಂಜಲ ಉವಾಚ ॥

ಏವಂ ಸ್ವರ್ಗಗುಣಾನ್ ಶ್ರುತ್ವಾ ಸುಬಾಹುಃ ಪೃಥಿವೀಪತಿಃ ।
ತಮುವಾಚ ಮಹಾತ್ಮಾನಂ ಜೈಮಿನಿಂ ವದತಾಂ ವರಂ ॥ ೧೯ ॥

॥ ಸುಬಾಹುರುವಾಚ ॥

ನಾಹಂ ಸ್ವರ್ಗಂ ಗಮಿಷ್ಯಾಮಿ ನೈವ ಇಚ್ಛಾಮ್ಯಹಂ ಮುನೇ ।
ಯಸ್ಮಾಚ್ಚ ಪತನಂ ಪ್ರೋಕ್ತಂ ನ ತತ್ಕರ್ಮ ಕರೋಮ್ಯಹಂ ॥ ೨೦ ॥

ದಾನಮೇಕಂ ಮಹಾಭಾಗ ನಾಹಂ ದಾಸ್ಯೇ ಕದಾ ಧ್ರುವಂ ।
ದಾನಸ್ಯ ಫಲಲೋಭಾಚ್ಚ ತಸ್ಮಾತ್ಪಾತೋ ನ ಸಂಶಯಃ ॥ ೨೧ ॥

ಇತ್ಯೇವಮುಕ್ತ್ವಾ ಧರ್ಮಾತ್ಮಾ ಸುಬಾಹುಃ ಪೃಥಿವೀಪತಿಃ ।
ಧ್ಯಾನಯೋಗೇನ ದೇವೇಶಂ ಯಜಿಷ್ಯೇ ಕಮಲಾಪ್ರಿಯಂ ।
ದಾಹಪ್ರಲಯಸಂವರ್ಜ್ಯಂ ವಿಷ್ಣುಲೋಕಂ ವ್ರಜಾಮ್ಯಹಂ ॥ ೨೨ ॥

॥ ಜೈಮಿನಿರುವಾಚ ॥

ಸತ್ಯಮುಕ್ತಂ ತ್ವಯಾ ಭೂಪ ಸರ್ವಶ್ರೇಯಸ್ಸಮಾಕುಲಂ ।
ರಾಜಾನೋ ದಾನಶೀಲಾಶ್ಚ ಮಹಾಯಜ್ಞೈರ್ಯಜಂತಿ ತೇ ॥ ೨೩ ॥

---

೧೯. ಕುಂಜಲನು ಹೇಳಿದನು:—ರಾಜನಾದ ಸುಬಾಹುವು ಈರೀತಿಯಾಗಿ ಸ್ವರ್ಗಗುಣಗಳನ್ನು ಕೇಳಿ ಆ ಜೈಮಿನಿಯನ್ನು ಕುರಿತು ಇಂತೆಂದನು.

೨೦-೨೨. ಸುಬಾಹುವು ಹೇಳಿದನು:—ನಾನು ಸ್ವರ್ಗಕ್ಕೆ ಹೋಗುವುದಿಲ್ಲ. ಆ ಇಚ್ಛೆಯೂ ನನಗಿಲ್ಲ. ಅಲ್ಲಿಂದ ಬೀಳುವಿಕೆಯು ಖಂಡಿತವಾದಮೇಲೆ ಆ ಕೆಲಸವನ್ನು ನಾನು ಮಾಡುವುದಿಲ್ಲ. ನಾನು ಒಂದು ದಾನವನ್ನೂ ಕೊಡುವುದಿಲ್ಲ. ಖಂಡಿತ ದಾನಕ್ಕೆ ಫಲವುಂಟಾಗಬೇಕಾದುದರಿಂದ ದಾನಫಲವು ಮುಗಿದಮೇಲೆ ಅಲ್ಲಿಂದ ಬೀಳುವುದು ಖಂಡಿತ. ಆದುದರಿಂದ ನಾನು ಧ್ಯಾನಯೋಗದಿಂದ ಶ್ರೀ ವಿಷ್ಣುವನ್ನು ಪೂಜಿಸುತ್ತೇನೆ. ಅದರಿಂದ ದಾಹನಾಶವರ್ಜಿತವಾದ ವಿಷ್ಣುಲೋಕಕ್ಕೆ ಹೋಗಲು ಇಚ್ಛಿಸುತ್ತೇನೆ ಎಂದನು.

೨೩-೨೫. ಜೈಮಿನಿಯು ಹೇಳಿದನು:–ಎಲೈ ರಾಜನೇ, ನೀನು ಹೇಳಿದುದು ಸರಿ. ಅದು ಸರ್ವಶ್ರೇಯಸ್ಸುಗಳಿಂದ ಕೂಡಿದೆ. ಅನೇಕ ಜನ ರಾಜರು ಯಾಗ

**ಸರ್ವದಾನಾನಿ ದೀಯಂತೇ ಯಜ್ಞೇಷು ನೃಪನಂದನ ।**
**ಅದಾವನ್ನಂ ಸುಯಜ್ಞೇಷು ವಸ್ತ್ರಂ ತಾಂಬೂಲಮೇವ ಚ ॥ ೨೪ ॥**

**ಕಾಂಚನಂ ಭೂಮಿದಾನಂ ಚ ಗೋದಾನಂ ಪ್ರವದಂತಿ ಚ ।**
**ಸುಯಜ್ಞೈರ್ವೈಷ್ಣವಂ ಲೋಕಂ ಸುಕೃತೇನ ಪ್ರಯಾನ್ತಿ ತೇ ॥ ೨೫ ॥**

**ದಾನೇನ ತೃಪ್ತಿಮಾಯಾಂತಿ ಸಂತುಷ್ಟಾಸ್ಸಂತಿ ಭೂಮಿಪ ।**
**ತಪಸ್ವಿನೋ ಮಹಾತ್ಮಾನೋ ನಿತ್ಯಮೇವ ವ್ರಜಂತಿ ತೇ ॥ ೨೬ ॥**

**ಸುಭಿಕ್ಷಾಂ ಯಾಚಯಿತ್ವಾ ತು ಸ್ವಸ್ಥಾನಂ ತು ಸಮಾಗತಾಃ ।**
**ಭಿಕ್ಷಾಪ್ರಾಪ್ತಾನ್ನಸ್ಯ ಭಾಗಾನಿ ಪ್ರಕುರ್ವಂತಿ ಚ ಭೂಪತೇ ॥ ೨೭ ॥**

**ಬ್ರಾಹ್ಮಣಾಯ ವಿಭಾಗೈಕಂ ಗೋಗ್ರಾಸಂ ತು ಮಹಾಮತೇ ।**
**ಪಾರ್ಶ್ವವರ್ತಿನ ಏಕಂ ಯೇ ಪ್ರಯಚ್ಛಂತಿ ತಪೋಧನಾಃ ॥ ೨೮ ॥**

**ತಸ್ಯಾನ್ನಸ್ಯ ಪ್ರದಾನೇನ ಫಲಂ ಭುಂಜಂತಿ ಮಾನವಾಃ ।**
**ಕ್ಷುಧಾತೃಷಾವಿಹೀನಾಶ್ಚ ವಿಷ್ಣುಲೋಕಂ ವ್ರಜಂತಿ ತೇ ॥ ೨೯ ॥**

---

ಮಾಡಿ ದಾನವನ್ನು ಕೊಡುತ್ತಾರೆ. ಯಜ್ಞದಲ್ಲಿ ಎಲ್ಲಾ ದಾನಗಳನ್ನೂ ಮಾಡುತ್ತಾರೆ. ಮೊದಲು ಅನ್ನದಾನ, ಅನಂತರ ವಸ್ತ್ರ, ತಾಂಬೂಲ, ಸುವರ್ಣ, ಭೂಮಿ, ಗೋವು, ಇವುಗಳನ್ನು ದಾನಮಾಡುತ್ತಾರೆ. ಒಳ್ಳೆಯ ಯಜ್ಞಗಳನ್ನು ಮಾಡಿ ಆ ಪುಣ್ಯದಿಂದ ವಿಷ್ಣುಲೋಕವನ್ನು ಹೊಂದುತ್ತಾರೆ.

೨೬. ದಾನದಿಂದ ತೃಪ್ತಿಯನ್ನು ಹೊಂದುತ್ತಾರೆ. ತೃಪ್ತರಾಗಿಯೂ ಇರುತ್ತಾರೆ. ತಪಸ್ವಿಗಳೂ, ಮಹಾತ್ಮರೂ ನಿತ್ಯವೂ ಈ ಕೆಲಸಮಾಡುತ್ತಾರೆ.

೨೭. ಆ ತಪಸ್ವಿಗಳು ಭಿಕ್ಷೆಬೇಡಿ ತಮ್ಮ ಸ್ಥಳಕ್ಕೆ ಬಂದು ಭಿಕ್ಷೆಯಿಂದ ಬಂದ ಅನ್ನದಲ್ಲಿ ಭಾಗಗಳನ್ನು ಮಾಡುತ್ತಾರೆ.

೨೮. ಅದರಲ್ಲಿ ಬ್ರಾಹ್ಮಣನಿಗೆ ಒಂದು ಪಾಲು, ಗೋವಿಗೆ ಒಂದು ಪಾಲು, ಪಕ್ಕದಲ್ಲಿರುವವನಿಗೆ ಒಂದು ಪಾಲು, ತನಗೊಂದು ಪಾಲು, ಹೀಗೆ ನಾಲ್ಕುಭಾಗಗಳನ್ನು ಮಾಡುತ್ತಾರೆ.

೨೯. ಆ ಅನ್ನದಾನದ ಫಲವನ್ನು ಅವರು ಅನುಭವಿಸುತ್ತಾರೆ. ಹಸಿವು, ಬಾಯಾರಿಕೆಗಳಿಂದ ವರ್ಜಿತರಾಗಿ ಇವರು ವಿಷ್ಣುಲೋಕವನ್ನು ಹೊಂದುತ್ತಾರೆ.

**ತಸ್ಮಾತ್ತ್ವಮಪಿ ರಾಜೇಂದ್ರ ದೇಹಿ ನ್ಯಾಯಾರ್ಜಿತಂ ಧನಂ ।**
**ದಾನಾದ್ಜ್ಞಾನಂ ತತಃ ಪ್ರಾಪ್ಯ ಜ್ಞಾನಾತ್ಸಿದ್ಧಿಂ ಚ ಯಾಸ್ಯಸಿ ॥ ೩೦ ॥**

**ಯ ಇದಂ ಶೃಣುಯಾನ್ಮರ್ತ್ಯಃ ಪುಣ್ಯಾಖ್ಯಾನಮನುತ್ತಮಂ ।**
**ವಿಮುಕ್ತಸ್ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೩೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಪಂಚನವತಿತಮೋಽಧ್ಯಾಯಃ**



---

೩೦. ಆದುದರಿಂದ ರಾಜನೇ, ನೀನೂ ಕೂಡ ನ್ಯಾಯದಿಂದ ಸಂಪಾದಿಸಿದ ಹಣವನ್ನು ದಾನಮಾಡು. ದಾನದಿಂದ ಜ್ಞಾನಬರುತ್ತದೆ. ಜ್ಞಾನದಿಂದ ಸಿದ್ಧಿಯುಂಟಾಗುತ್ತದೆ ಎಂದು ಹೇಳಿದನು.

೩೧. ಈ ಕಥೆಯನ್ನು ಕೇಳಿದವನು ಸರ್ವಪಾಪದಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಣ್ಣವತಿತಮೋಽಧ್ಯಾಯಃ

॥ ಸುಬಾಹುರುವಾಚ ॥

ದುಷ್ಟೇನ ಕರ್ಮಣಾ ಯೇನ ಸುಕೃತೇನಾಪಿ ಕರ್ಮಣಾ ।
ನರಕಂ ಕೀದೃಶೈರ್ಯಾಂತಿ ತನ್ಮೇ ತ್ವಂ ವಕ್ತುಮರ್ಹಸಿ ॥ ೧ ॥

॥ ಜೈಮಿನಿರುವಾಚ ॥

ಬ್ರಾಹ್ಮಣ್ಯಂ ಪುಣ್ಯಮುತ್ಸೃಜ್ಯ ಯೇ ದ್ವಿಜಾ ಲೋಭಮೋಹಿತಾಃ ।
ಕುಕರ್ಮಣ್ಯುಪಜೀವಂತಿ ತೇ ವೈ ನಿರಯಗಾಮಿನಃ ॥ ೨ ॥

ನಾಸ್ತಿಕಾ ಭಿನ್ನಮರ್ಯಾದಾಃ ಕಂದರ್ಪವಿಷಯೋನ್ಮುಖಾಃ ।
ದಾಂಭಿಕಾಶ್ಚ ಕೃತಘ್ನಾಶ್ಚ ತೇ ವೈ ನಿರಯಗಾಮಿನಃ ॥ ೩ ॥

---

## ತೊಂಭತ್ತಾರನೆಯ ಅಧ್ಯಾಯವು

೧. ಸುಬಾಹುವು ಕೇಳಿದನು:—ಯಾವ ಕೆಟ್ಟಕೆಲಸಗಳನ್ನು ಮಾಡಿದರೆ ನರಕವನ್ನು ಹೊಂದುತ್ತಾನೆಂಬುದನ್ನು ಹೇಳು.

೨. ಜೈಮಿನಿಯು ಹೇಳಿದನು:—ಶ್ರೇಷ್ಠವಾದ ಬ್ರಾಹ್ಮಣಿಕೆಯನ್ನು ಬಿಟ್ಟು ಯಾವ ಬ್ರಾಹ್ಮಣನು ಆಶೆಗೆ ಒಳಗಾಗಿ ಕೆಟ್ಟಕೆಲಸದಿಂದ ಜೀವಿಸುತ್ತಾನೋ ಅವನು ನರಕಗಾಮಿಯು.

೩. ನಾಸ್ತಿಕರು, ಗೌರವಿಸದವರು, ಜಿತೇಂದ್ರಿಯರಲ್ಲದವರು, ದಾಂಭಿಕರು, ಕೃತಘ್ನರು ಇವರೆಲ್ಲರೂ ನರಕವನ್ನು ಹೊಂದುತ್ತಾರೆ.

ಬ್ರಾಹ್ಮಣೇಭ್ಯಃ ಪ್ರತಿಶ್ರುತ್ಯ ನ ಪ್ರಯಚ್ಛಂತಿ ಯೇ ಧನಂ ।
ಬ್ರಹ್ಮಸ್ವಾನಾಂ ಚ ಹರ್ತಾರೋ ನರಾ ನಿರಯಗಾಮಿನಃ ॥ ೪ ॥

ಪುರುಷಾಃ ಪಿಶಿತಾಶ್ಚೈವ ಮಾನಿನೋಽನೃತವಾದಿನಃ ।
ಅಸಂಬದ್ಧಪ್ರಲಾಪಾಶ್ಚ ತೇ ವೈ ನಿರಯಗಾಮಿನಃ ॥ ೫ ॥

ಯೇ ಪರಸ್ವಾಪಹರ್ತಾರಃ ಪರದೂಷಣಸೋತ್ಸುಕಾಃ
ಪರಶ್ರಿಯಾ ಪ್ರತಪ್ಯಂತೇ ತೇ ವೈ ನಿರಯಗಾಮಿನಃ ॥ ೬ ॥

ಪ್ರಾಣಿನಾಂ ಪ್ರಾಣಿಹಿಂಸಾಯಾಂ ಯೇ ನರಾ ನಿರತಾಸ್ಸದಾ ।
ಪರನಿಂದಾರತಾ ಯೇ ಚ ತೇ ವೈ ನಿರಯಗಾಮಿನಃ ॥ ೭ ॥

ಕೂಪಾರಾಮತಟಾಕಾನಾಂ ಪ್ರಪಾನಾಂ ಚ ವಿದೂಷಕಾಃ ।
ಸರಸಾಂ ಚೈವ ಭೇತ್ತಾರೋ ನರಾ ನಿರಯಗಾಮಿನಃ ॥ ೮ ॥

---

೪. ಬ್ರಾಹ್ಮಣನಿಗೆ ಧನವನ್ನು ಕೊಡುವೆನೆಂದು ಮಾತುಕೊಟ್ಟು ಅವನಿಗೆ ಅದನ್ನು ಕೊಡದವರೂ, ಬ್ರಾಹ್ಮಣನ ಸ್ವತ್ತನ್ನು ಕದಿಯುವವರೂ ನರಕವನ್ನು ಹೊಂದುತ್ತಾರೆ.

೫. ಚಾಡಿಕೋರ, ಸುಳ್ಳುಹೇಳುವವನು, ವಿಷಯಕ್ಕೆ ಸಂಬಂಧಪಡದಂತೆ ಮಾತನಾಡುವವನು ಇವರೂ ನರಕಭಾಗಿಗಳು.

೬. ಪರರ ಸ್ವತ್ತನ್ನೇ ಕದಿಯುವವರೂ, ಪರರ ದೂಷಕರೂ, ಪರರ ಸಂಪತ್ತನ್ನು ನೋಡಿ ಹೊಟ್ಟೆಕಿಚ್ಚುಪಡುವವರೂ ನರಕಭಾಗಿಗಳು.

೭. ಪ್ರಾಣಿಹಿಂಸೆ ಮಾಡುವವರೂ, ಪರನಿಂದೆ ಮಾಡುವವರೂ ನರಕಭಾಗಿಗಳಾಗುತ್ತಾರೆ.

೮. ಭಾವಿ, ಕೆರೆ, ವನ, ಅರವಟ್ಟಿಗೆಗಳನ್ನು ನಾಶಮಾಡುವವರೂ, ಸರೋವರವನ್ನು ಒಡೆಯುವವರೂ, ನರಕಭಾಗಿಗಳಾಗುತ್ತಾರೆ.

ವಿಪರ್ಯಯಂ ವ್ರಜೇದ್ಯಸ್ತ್ವಾ ಶಿಶೂನ್ ಭೃತ್ಯಾತಿಥೀಂಸ್ತತಃ ।
ಉತ್ಸನ್ನಪಿತೃದೇವೇಜ್ಯಾಸ್ತೇ ವೈ ನಿರಯಗಾಮಿನಃ ॥ ೯ ॥

ಪ್ರವ್ರಜ್ಯಾದೂಷಕಾ ರಾಜನ್ಯೇ ಚೈವಾಶ್ರಮದೂಷಕಾಃ ।
ಸಖೀನಾಂ ದೂಷಕಾಶ್ಚೈವ ತೇ ವೈ ನಿರಯಗಾಮಿನಃ ॥ ೧೦ ॥

ಆದ್ಯಂ ಪುರುಷಮೀಶಾನಂ ಸರ್ವಲೋಕಮಹೇಶ್ವರಂ ।
ನ ಚಿಂತಯಂತಿ ಯೇ ವಿಷ್ಣುಂ ತೇ ವೈ ನಿರಯಗಾಮಿನಃ ॥ ೧೧ ॥

ಪ್ರಯಾಜಾನಾಂ ಮಖಾನಾಂ ಚ ಕನ್ಯಾನಾಂ ಶುದ್ಧಚೇತಸಾಂ ।
ಸಾಧೂನಾಂ ಚ ಗುರೂಣಾಂ ಚ ದೂಷಕಾ ನಿರಯಂಗಮಾಃ ॥ ೧೨ ॥

ಕಾಷ್ಠೈರ್ವಾ ಶಂಕುಭಿರ್ವಾಪಿ ಶೂಲೈರಶ್ಮಭಿರೇವ ವಾ ।
ಯೇ ಮಾರ್ಗಾನುಪರುಂಧಂತಿ ತೇ ವೈ ನಿರಯಗಾಮಿನಃ ॥ ೧೩ ॥

---

೯. ಮಕ್ಕಳು, ಆಳುಗಳು, ಅತಿಥಿಗಳಿಗೆ ತೊಂದರೆಮಾಡುವವರು, ದೇವಕಾರ್ಯ ಪಿತೃಕಾರ್ಯಗಳನ್ನು ಬಿಟ್ಟವರು ನರಕಭಾಗಿಗಳಾಗುತ್ತಾರೆ.

೧೦. ಯತಿಯನ್ನು ದೂಷಿಸುವವರು, ಆಶ್ರಮದೂಷಕರು, ಸ್ನೇಹಿತರನ್ನು ದೂಷಿಸುವವರು ಇವರೆಲ್ಲ ನರಕಗಾಮಿಗಳು.

೧೧. ಆದಿಪುರುಷನೂ ಸರ್ವಲೋಕಕರ್ತನೂ ಆದ ವಿಷ್ಣುವನ್ನು ಯಾರು ಚಿಂತಿಸುವುದಿಲ್ಲವೋ ಅವರು ನರಕಭಾಗಿಗಳು.

೧೨. ಪ್ರಯಾಜಾದಿ ಯಾಗಗಳು, ಶುದ್ಧರಾದ ಕನ್ಯೆಯರು, ಸಾಧುಗಳು, ಗುರುಗಳು, ಇವರನ್ನು ದೂಷಿಸುವವರು ನರಕಗಾಮಿಗಳು.

೧೩. ಮುಳ್ಳು, ಮೊಳೆ, ಸಲಾಕಿ, ಕಲ್ಲುಗಳು ಮೊದಲಾದವನ್ನು ಜನರು ತಿರುಗಾಡುವ ಮಾರ್ಗಗಳಲ್ಲಿ ಹಾಕಿ ಜನರಿಗೆ ತೊಂದರೆಯನ್ನುಂಟುಮಾಡುವವರು ನರಕವನ್ನೇ ಸೇರುವರು.

ಸರ್ವಭೂತೇಷ್ವವಿಶ್ವಸ್ತಾಃ ಕಾಮೇನಾರ್ತಾಸ್ತಥೈವ ಚ ।
ಸರ್ವವರ್ಣೇಷು ಭುಂಜಾನಾಸ್ತೇ ವೈ ನಿರಯಗಾಮಿನಃ ॥ ೧೪ ॥

ಆಗತಾನ್ಭೋಜನಾರ್ಥಾಯ ಬ್ರಾಹ್ಮಣಾನ್ ವೃತ್ತಿಕರ್ಶಿತಾನ್ ।
ಅವಜ್ಞಾಯ ಪ್ರವರ್ತಂತೇ ನಿರಯೇಷು ಪತಂತಿ ವೈ ॥ ೧೫ ॥

ಕ್ಷೇತ್ರಂ ವೃತ್ತಿಂ ಗೃಹಂ ಚೈವ ಪ್ರೀತಿಂ ಛಿಂದಂತಿ ಯೇ ನರಾಃ ।
ಆಶಾಚ್ಛೇದಂ ಚ ಕುರ್ವಂತಿ ತೇ ವೈ ನಿರಯಗಾಮಿನಃ ॥ ೧೬ ॥

ಶಸ್ತ್ರಾಣಾಂ ಚೈವ ಕರ್ತಾರಃ ಶಲ್ಯಾನಾಂ ಧನುಷಾಂ ತಥಾ ।
ವಿಕ್ರೇತಾರಶ್ಚ ರಾಜೇಂದ್ರ ತೇ ವೈ ನಿರಯಗಾಮಿನಃ ॥ ೧೭ ॥

ಅನಾಥಂ ವೈಷ್ಣವಂ ದೀನಂ ರೋಗಾರ್ತಂ ವೃದ್ಧಮೇವ ಚ ।
ನಾನುಕಂಪಂತಿ ಯೇ ಮೂಢಾ ತೇ ವೈ ನಿರಯಗಾಮಿನಃ ॥ ೧೮ ॥

---

೧೪. ಪ್ರಾಣಿಗಳಲ್ಲಿ ವಿಶ್ವಾಸವಿಡದವರು, ಕಾಮಿಗಳು, ಎಲ್ಲಾ ವರ್ಣದಲ್ಲೂ ತಿನ್ನುವವರು ನರಕಗಾಮಿಗಳು.

೧೫. ಜೀವನಕ್ಕೆ ಗತಿಯಿಲ್ಲದೇ ಊಟಕ್ಕೆ ಬಂದ ಬ್ರಾಹ್ಮಣರನ್ನು ಯಾರು ಅವಮಾನಿಸುತ್ತಾರೆಯೋ ಅವರು ನರಕಗಾಮಿಗಳು.

೧೬. ಹೊಲಗದ್ದೆಗಳು, ವೃತ್ತಿ, ಮನೆಗಳನ್ನು ನಾಶಮಾಡುವವರು, ಪ್ರೀತಿಯನ್ನು ನಾಶಮಾಡುವವರು, ಆಶೆಯನ್ನು ಹುಟ್ಟಿಸಿ ಮೋಸಮಾಡುವವರು ಇವರೆಲ್ಲರೂ ನರಕಗಾಮಿಗಳು.

೧೭. ಶಸ್ತ್ರಗಳು, ಶಲ್ಯಗಳು, ಧನಸ್ಸುಗಳು, ಇವನ್ನು ಮಾರುವವರು ನರಕಭಾಗಿಗಳು.

೧೮. ಅನಾಥ, ವೈಷ್ಣವ, ದೀನ, ರೋಗಿ, ಮುದುಕ, ಇವರನ್ನು ಉಪಚರಿಸದವರು ನರಕಭಾಗಿಯಾಗುತ್ತಾರೆ.

ನಿಯಮಾನ್ ಪೂರ್ವಮಾದಾಯ ಯೇ ಪಶ್ಚಾದಜಿತೇಂದ್ರಿಯಾಃ ।
ಅತಿಕ್ರಾಮಂತಿ ಚಾಂಚಲ್ಯಾತ್ತೇ ವೈ ನಿರಯಗಾಮಿನಃ ॥ ೧೯ ॥

ಹಂತ ತೇ ಕಥಯಿಷ್ಯಾಮಿ ನರಾನ್ ವೈ ಸ್ವರ್ಗಗಾಮಿನಃ ।
ಭೋಗಿನಸ್ಸ್ವರ್ಗಲೋಕಸ್ಯ ಯೇ ಪ್ರೋಕ್ತಾಸ್ತಾನ್ನಿಬೋಧ ಮೇ ॥ ೨೦ ॥

ಸತ್ಯೇನ ತಪಸಾ ಜ್ಞಾನಧ್ಯಾನೇನಾಧ್ಯಯನೇನ ವಾ ।
ಯೇ ಧರ್ಮಮನುವರ್ತಂತೇ ತೇ ನರಾ ಸ್ವರ್ಗಗಾಮಿನಃ ॥ ೨೧ ॥

ಯೇ ಚ ಹೋಮಪರಾ ಧ್ಯಾನದೇವತಾರ್ಚನತತ್ಪರಾಃ ।
ಆದದಾನಾ ಮಹಾತ್ಮಾನಸ್ತೇ ನರಾಃ ಸ್ವರ್ಗಗಾಮಿನಃ ॥ ೨೨ ॥

ಶುಚಯಃ ಶುಚಿದೇಶೇ ವಾ ವಾಸುದೇವಪರಾಯಣಾಃ ।
ಭಕ್ತ್ಯಾ ಚ ವಿಷ್ಣುಮಾಪನ್ನಾಸ್ತೇ ನರಾಃ ಸ್ವರ್ಗಗಾಮಿನಃ ॥ ೨೩ ॥

ಮಾತಾಪಿತ್ರೋಶ್ಚ ಶುಶ್ರೂಷಾಂ ಯೇ ಕುರ್ವಂತಿ ಸದಾದೃತಾಃ ।
ವರ್ಜಯಂತಿ ದಿವಾ ಸ್ವಪ್ನಂ ತೇ ನರಾ ಸ್ವರ್ಗಗಾಮಿನಃ ॥ ೨೪ ॥

---

೧೯. ಮೊದಲು ನಿಯಮವನ್ನು ಹಿಡಿದು ಬಳಿಕ ಇಂದ್ರಿಯಲೋಲುಪರಾಗಿ ಅದನ್ನು ಮಾಡದವರು ನರಕಭಾಗಿಗಳು.

೨೦. ಇನ್ನು ಸ್ವರ್ಗಕ್ಕೆ ಹೋಗಿ ಅಲ್ಲಿ ಭೋಗಪಡುವವರನ್ನು ಹೇಳುತ್ತೇನೆ ಕೇಳು.

೨೧. ಸತ್ಯ, ತಪಸ್ಸು, ಜ್ಞಾನ, ಅಧ್ಯಯನಗಳಿಂದ ಧರ್ಮವನ್ನು ಅನುಸರಿಸುವವರು, ಸ್ವರ್ಗಗಾಮಿಗಳು.

೨೨. ಹೋಮ, ಧ್ಯಾನ, ದೇವತಾರ್ಚನಗಳನ್ನು ಮಾಡುವವರು ಸ್ವರ್ಗಗಾಮಿಗಳು.

೨೩. ಶುಚಿಗಳು, ಶುಚಿದೇಶದಲ್ಲಿ ವಾಸುದೇವನನ್ನು ಧ್ಯಾನಿಸುವವರು, ಭಕ್ತಿಯಿಂದ ವಾಸುದೇವನನ್ನು ಧ್ಯಾನಿಸುವವರು, ಸ್ವರ್ಗಗಾಮಿಗಳು.

೨೪. ಪ್ರೀತಿಯಿಂದ ತಾಯಿತಂದೆಗಳ ಶುಶ್ರೂಷೆಮಾಡುವವರು, ಹಗಲು ನಿದ್ದೆಮಾಡದವರು, ಸ್ವರ್ಗಗಾಮಿಗಳು.

ಸರ್ವಹಿಂಸಾನಿವೃತ್ತಾಶ್ಚ ಸಾಧುಸಂಗಾಶ್ಚ ಯೇ ನರಾಃ ।
ಸರ್ವಸ್ಯಾಪಿ ಹಿ ತೇ ಯುಕ್ತಾಸ್ತೇ ನರಾಃ ಸ್ವರ್ಗಗಾಮಿನಃ ॥ ೨೫ ॥

ಶುಶ್ರೂಷಾಭಿಸ್ಸಮಾಯುಕ್ತಾ ಗುರೂಣಾಂ ಮಾನದಾ ನರಾಃ ।
ಪ್ರತಿಗ್ರಹನಿವೃತ್ತಾಶ್ಚ ತೇ ನರಾಃ ಸ್ವರ್ಗಗಾಮಿನಃ ॥ ೨೬ ॥

ಭಯಾತ್ಕಾಮಾತ್ತಥಾಕ್ರೋಶಾದ್ದರಿದ್ರಾನ್ ಪೂರ್ವಕರ್ಮಣಃ ।
ನ ಕುತ್ಸಂತಿ ಚ ಯೇ ನೂನಂ ತೇ ನರಾಃ ಸ್ವರ್ಗಗಾಮಿನಃ ॥ ೨೭ ॥

ಸಹಸ್ರಪರಿವೇಷ್ಟಾರಸ್ತಥೈ ವ ಚ ಸಹಸ್ರದಾಃ
ದಾತಾರಶ್ಚ ಸಹಸ್ರಾಣಾಂ ತೇ ನರಾಃ ಸ್ವರ್ಗಗಾಮಿನಃ ॥ ೨೮ ॥

ಆತ್ಮಸ್ವರೂಪಭಾಜಶ್ಚ ಯೌವನಸ್ಥಾಃ ಕ್ಷಮಾಪರಾಃ ।
ಯೇ ವೈ ಜಿತೇಂದ್ರಿಯಾ ವೀರಾಸ್ತೇ ನರಾಃ ಸ್ವರ್ಗಗಾಮಿನಃ ॥ ೨೯ ॥

ಸುವರ್ಣಸ್ಯ ಪ್ರದಾತಾರೋ ಗವಾಂ ಭೂಮೇಶ್ಚ ಭಾರತ ।
ಅನ್ನಾನಾಂ ವಾಸಸಾಂ ಚೈವ ಪುರುಷಾಸ್ಸ್ವರ್ಗಗಾಮಿನಃ ॥ ೩೦ ॥

---

೨೫. ಯಾವ ಪ್ರಾಣಿಯನ್ನೂ ಹಿಂಸೆಮಾಡದವರೂ, ಸಾಧುಸಂಗಿಗಳೂ, ಎಲ್ಲರ ಹಿತೈಷಿಗಳೂ, ಸ್ವರ್ಗಗಾಮಿಗಳು.

೨೬. ಗುರುಗಳ ಶುಶ್ರೂಷೆಮಾಡುತ್ತಾ ಗುರುಗಳನ್ನು ಗೌರವದಿಂದ ಕಾಣತಕ್ಕವರು, ದಾನತೆಗೆದುಕೊಳ್ಳದವರು, ಸ್ವರ್ಗಗಾಮಿಗಳು.

೨೭. ಪೂರ್ವಪಾಪದಿಂದ ದರಿದ್ರರಾದವರನ್ನು ಭಯಪಡಿಸಿ ಕೋಪತೋರಿಸಿ ಹೀಯಾಳಿಸಿದವರು, ಸ್ವರ್ಗಗಾಮಿಗಳು.

೨೮. ಸಹಸ್ರಜನಕ್ಕೆ ಅನ್ನಹಾಕುವವರು, ಸಹಸ್ರದಾನಮಾಡುವವರು, ಸಹಸ್ರ ಪದಾರ್ಥಗಳನ್ನು ದಾನಮಾಡುವವರು, ಇವರೆಲ್ಲ ಸ್ವರ್ಗಗಾಮಿಗಳು.

೨೯. ಆತ್ಮಸಾಕ್ಷಾತ್ಕಾರಮಾಡಿಕೊಂಡವರು, ಯೌವನದಲ್ಲಿದ್ದರೂ ಇತರರನ್ನು ಕ್ಷಮಿಸತಕ್ಕವರು, ಜಿತೇಂದ್ರಿಯರೂ, ವೀರರೂ, ಸ್ವರ್ಗಗಾಮಿಗಳು.

೩೦. ಸ್ವರ್ಣದಾನಮಾಡುವವರು, ಗೋವು, ಭೂಮಿ, ಅನ್ನ, ಬಟ್ಟೆಗಳನ್ನು ದಾನಮಾಡುವವರು ಸ್ವರ್ಗಗಾಮಿಗಳು.

ನಿವೇಶನಾನಾಂ ವನ್ಯಾನಾಂ ಸರಾಣಾಂ ಚ ಪರಂತಪ ।
ಸ್ವಯಮುತ್ಪಾದ್ಯ ದಾತಾರಃ ಪುರುಷಾಸ್ಸ್ವರ್ಗಗಾಮಿನಃ ॥ ೩೧ ॥

ದ್ವಿಷತಾಮಪಿ ಯೋ ದೋಷಾ ನ ವದಂತಿ ಕದಾಚನ ।
ಕೀರ್ತಯಂತಿ ಗುಣಾಂಶ್ಚೈವ ತೇ ನರಾಃ ಸ್ವರ್ಗಗಾಮಿನಃ ॥ ೩೨ ॥

ದೃಷ್ಟ್ವಾ ವಿಜ್ಞಾ ಪ್ರಹೃಷ್ಯಂತಿ ಪ್ರಿಯಂ ದತ್ವಾ ವದಂತಿ ಚ ।
ತಕ್ತದಾನಫಲೇಚ್ಛಾಶ್ಚ ತೇ ನರಾಸ್ಸ್ವರ್ಗಗಾಮಿನಃ ॥ ೩೩ ॥

ಯೇ ಪರೇಷಾಂ ಶ್ರಿಯಂ ದೃಷ್ಟ್ವಾ ನ ತಪ್ಯಂತಿ ವಿಮತ್ಸರಾಃ ।
ಪ್ರಹೃಷ್ಟಾಶ್ಚಾಭಿನಂದಂತಿ ತೇ ನರಾಸ್ಸ್ವರ್ಗಗಾಮಿನಃ ॥ ೩೪ ॥

ಪ್ರವೃತ್ತೌ ಚ ನಿವೃತ್ತೌ ಚ ಮುನಿಶಾಸ್ತ್ರೋಕ್ತಮೇವ ಚ ।
ಆಚರಂತಿ ಮಹಾತ್ಮಾನಸ್ತೇ ನರಾಃ ಸ್ವರ್ಗಗಾಮಿನಃ ॥ ೩೫ ॥

ಯೇ ನರಾಣಾಂ ವಚೋ ವಕ್ತುಂ ನ ಜಾನಂತಿ ಚ ವಿಪ್ರಿಯಂ ।
ಪ್ರಿಯವಾಕ್ಯೇನ ವಿಜ್ಞಾತಾಸ್ತೇ ನರಾಃ ಸ್ವರ್ಗಗಾಮಿನಃ ॥ ೩೬ ॥

---

೩೧. ಮನೆಯ ನಿವೇಶನಗಳನ್ನು, ಗದ್ದೆಗಳನ್ನು, ಕೊಡತಕ್ಕವರು, ಇವನ್ನು ತಾನಾಗಿ ಸಂಪಾದಿಸಿ ದಾನಮಾಡಿದರೆ ಸ್ವರ್ಗಕ್ಕೆ ಹೋಗುತ್ತಾರೆ.

೩೨. ಶತ್ರುಗಳಾಗಿದ್ದರೂ ಅವರ ದೋಷವನ್ನು ಹೇಳದೆ ಗುಣಗಳನ್ನೇ ಹೇಳುವವರು ಸ್ವರ್ಗಗಾಮಿಗಳು.

೩೩. ಯೋಗ್ಯರನ್ನು ನೋಡಿ ಸಂತೋಷಗೊಂಡು ಒಳ್ಳೆಯ ಮಾತನಾಡಿ ದಾನಮಾಡಿ ಅದರಿಂದ ಪ್ರತಿಫಲವನ್ನು ಅಪೇಕ್ಷಿಸದವರು ಸ್ವರ್ಗಗಾಮಿಗಳು.

೩೪. ಇತರರ ಐಶ್ವರ್ಯಗಳನ್ನು ನೋಡಿ ಹೊಟ್ಟೆಕಿಚ್ಚುಪಡದೇ ಸಂತೋಷ ಪಡುವವರು ಸ್ವರ್ಗಗಾಮಿಗಳು.

೩೫. ಕೆಲಸಮಾಡುವುದು, ಬಿಡುವುದು ಇವುಗಳನ್ನು ಶಾಸ್ತ್ರವತ್ತಾಗಿ ಯಾರು ಆಚರಿಸುತ್ತಾರೋ ಅವರು ಸ್ವರ್ಗಗಾಮಿಗಳು.

೩೬. ಮನುಷ್ಯರಿಗೆ ಕೆಟ್ಟಮಾತನ್ನು ಆಡದೆ ಇದ್ದು ಪ್ರಿಯವಾದ ಮಾತಾಡುವವನು ಸ್ವರ್ಗಗಾಮಿಯು.

ಂಶೇ ನಾಮ ಭಾಗಂ ಕುರ್ವಂತಿ ಕುತೃಷ್ಣಾಶ್ರಮಕರ್ಷಿಣಃ ।
ಪಸ್ತ್ರಕಾರಸ್ಯ ದಾತಾರಸ್ತೇ ನರಾಃ ಸ್ವರ್ಗಗಾಮಿನಃ ॥ ೩೭ ॥

ವಾಪೀಕೂಪತಟಾಕಾನಾಂ ಪ್ರಪಾನಾಂ ಚೈವ ವೇಶ್ಮನಾಂ ।
ಆರಾಮಾಣಾಂ ಚ ಕರ್ತಾರಸ್ತೇ ನರಾಃ ಸ್ವರ್ಗಗಾಮಿನಃ ॥ ೩೮ ॥

ಅಸತ್ಯೇಷ್ವಪಿ ಸತ್ಯಾ ಯೇ ಋಜವೋ ನಾರ್ಜವೇಷ್ವಪಿ ।
ಪ್ರಿಯವಕ್ತಾರಶ್ಚ ದಾತಾರಸ್ತೇ ನರಾಃ ಸ್ವರ್ಗಗಾಮಿನಃ ॥ ೩೯ ॥

ಯಸ್ಮಿನ್ಕಸ್ಮಿನ್ಕುಲೇ ಜಾತಾ ಬಹುಪುತ್ರಾಃ ಶತಾಯುಷಃ ।
ಸಾನುಕ್ರೋಶಾಸ್ಸದಾಚಾರಾಸ್ತೇ ನರಾಃ ಸ್ವರ್ಗಗಾಮಿನಃ ॥ ೪೦ ॥

ಅವಂಧ್ಯಂ ದಿವಸಂ ಕುರ್ಯುರ್ಧರ್ಮೇಣೈಕೇನ ಸರ್ವದಾ ।
ವ್ರತಂ ಗೃಹ್ಣಂತಿ ಯೇ ನಿತ್ಯಂ ತೇ ನರಾಸ್ಸ್ವರ್ಗಗಾಮಿನಃ ॥ ೪೧ ॥

---

೩೭. ಸುಳ್ಳುಹೇಳಿ ಆಶೆ ಮುಂತಾದುವನ್ನು ತೋರಿ ಆಶ್ರಮಧರ್ಮದಲ್ಲಿ ಮೋಸಗೊಳಿಸುವವರನ್ನು ಬೇರೆಮಾಡಿದವರೂ, ಒಬ್ಬರ ಕಷ್ಟವನ್ನು ನೋಡಿ, ಅಯ್ಯೋ ಪಾಪ ಎಂದು ಮರುಗುವವರು ಇವರೆಲ್ಲರೂ ಸ್ವರ್ಗಗಾಮಿಗಳು.

೩೮. ಭಾವಿ, ಕೊಳ, ಕೆರೆ, ಅರವಟ್ಟಿಗೆ, ಮನೆ, ಉದ್ಯಾನಗಳನ್ನು ಮಾಡಿ ಕೊಡುವವರಿಗೆ ಸ್ವರ್ಗವು ಸಿಕ್ಕುತ್ತದೆ.

೩೯. ಸುಳ್ಳುಹೇಳುವುದರಲ್ಲೂ ಸಮಯವರಿತು ಸತ್ಯನುಡಿವವರು, ಕಪಟಿಗಳಲ್ಲಿಯೂ ಋಜುಮಾರ್ಗದಿಂದಿರುವವರು, ಚೆನ್ನಾಗಿ ಮಾತನಾಡುವವರು, ದಾನಿಗಳು ಇವರು ಸ್ವರ್ಗವನ್ನು ಹೊಂದುತ್ತಾರೆ.

೪೦. ಯಾವ ಕುಲದಲ್ಲೇ ಹುಟ್ಟಲಿ ಅವರು ಬಹುಪುತ್ರರಾಗಿ ದೀರ್ಘಾಯುಗಳಾಗಿದ್ದು ದಯಾವಂತರಾಗಿ, ಸದಾಚಾರದಿಂದ ಕೂಡಿದ್ದರೆ ಅವರು ಸ್ವರ್ಗಗಾಮಿಗಳು.

೪೧. ದಿವಸವನ್ನು ವ್ಯರ್ಥಮಾಡದೆ ದಾನಮಾಡುತ್ತಿರುವವನೂ ನಿತ್ಯವೂ ವ್ರತವನ್ನು ಮಾಡುವವನೂ ಸ್ವರ್ಗವನ್ನು ಹೊಂದುತ್ತಾನೆ.

ಮಿತ್ರಾಮಿತ್ರೇ ಸ್ತುವಂತಶ್ಚ ತುಲ್ಯಂ ಪಶ್ಯನ್ತಿ ಯೇ ಸದಾ ।
ಶಾಂತಾತ್ಮಾನೋ ಜಿತಾತ್ಮಾನಸ್ತೇ ನರಾಃ ಸ್ವರ್ಗಗಾಮಿನಃ ॥ ೪೨ ॥

ಯೇ ಚ ಸ್ಯುರ್ಭಯಸಂತ್ರಸ್ತಾ ಬ್ರಾಹ್ಮಣಾಂಶ್ಚ ತಥಾ ಸ್ತ್ರಿಯಃ ।
ಸಾರ್ಥಾನ್ವಾ ಪರಿರಕ್ಷಂತಿ ತೇ ನರಾಃ ಸ್ವರ್ಗಗಾಮಿನಃ ॥ ೪೩ ॥

ಗಂಗಾಯಾಂ ಪುಷ್ಕರೇ ತೀರ್ಥೇ ಗಯಾಯಾಂ ಚ ವಿಶೇಷತಃ ।
ಪಿತೃಪಿಂಡಪ್ರದಾತಾರಸ್ತೇ ನರಾಸ್ಸ್ವರ್ಗಗಾಮಿನಃ ॥ ೪೪ ॥

ನ ವಶಾಶ್ಚೇಂದ್ರಿಯಾಣಾಂ ಯೇ ತಥಾ ಸಂಯಮನೇ ರತಾಃ ।
ತ್ಯಕ್ತಭೋಗಭಯಕ್ರೋಧಾಸ್ತೇ ನರಾಃ ಸ್ವರ್ಗಗಾಮಿನಃ ॥ ೪೫ ॥

ಯೂಕಾಮತ್ಕುಣದಂಶಾದೀನ್ಯೇ ಜಂತೂಂಸ್ತುದತಸ್ತನುಂ ।
ಪುತ್ರವತ್ಪರಿರಕ್ಷಂತಿ ತೇ ನರಾಸ್ಸ್ವರ್ಗಗಾಮಿನಃ ॥ ೪೬ ॥

---

೪೨. ಮಿತ್ರರು, ಶತ್ರುಗಳು, ಹೊಗಳುವವರು, ಇವರನ್ನು ಯಾವನು ಒಂದೇ ರೀತಿಯಾಗಿ ನೋಡುತ್ತಾನೋ ಅವನು ಶಾಂತಾತ್ಮನು, ಜಿತೇಂದ್ರಿಯನು, ಅವನು ಸ್ವರ್ಗಗಾಮಿಯು.

೪೩. ಯಾರು ಭಯಗೊಂಡವರನ್ನೂ, ಬ್ರಾಹ್ಮಣರನ್ನೂ, ಹೆಂಗಸರನ್ನೂ, ವರ್ತಕರನ್ನೂ, ಕಾಪಾಡುತ್ತಾರೋ ಅವರು ಸ್ವರ್ಗವನ್ನು ಹೊಂದುತ್ತಾರೆ.

೪೪. ಗಯೆ, ಪುಷ್ಕರ, ಗಂಗೆ, ಇವುಗಳಲ್ಲಿ ಪಿತೃಗಳಿಗೆ ಪಿಂಡಹಾಕಿದವನು ಸ್ವರ್ಗಗಾಮಿಯಾಗುತ್ತಾನೆ.

೪೫. ಇಂದ್ರಿಯಕ್ಕೆ ಅಧೀನರಾಗದವರು, ಇಂದ್ರಿಯನಿಗ್ರಹಮಾಡಿದವರು, ಭೋಗ, ಭಯ, ಕ್ರೋಧಗಳನ್ನು ಬಿಟ್ಟಿರುವವರು ಸ್ವರ್ಗಗಾಮಿಗಳು.

೪೬. ಹೇನು, ತಿಗಣೆ, ಸೊಳ್ಳೆ ಮೊದಲಾದ ದೇಹವನ್ನು ಕಚ್ಚುವ ಪ್ರಾಣಿಗಳನ್ನೂ ಯಾರು ಕೊಲ್ಲದೆ ಮಕ್ಕಳಂತೆ ನೋಡುತ್ತಾರೋ ಅವರು ಸ್ವರ್ಗಗಾಮಿಗಳು.

ಮನಸಸ್ಚೇಂದ್ರಿಯಾಣಾಂ ಚ ಸರ್ವದಾ ನಿಗ್ರಹೇ ರತಾಃ ।
ಪರೋಪಕಾರನಿರತಾಸ್ತೇ ನರಾಃ ಸ್ವರ್ಗಗಾಮಿನಃ ॥ ೪೭ ॥

ಯಜ್ಞಾನಾಂ ಚ ವಿಶೇಷೇಣ ವಿಧಿನಾ ಸಂವಪಂತಿ ಯೇ ।
ಸರ್ವದ್ವಂದ್ವಸಹಾ ದಾಂತಾಸ್ತೇ ನರಾಃ ಸ್ವರ್ಗಗಾಮಿನಃ ॥ ೪೮ ॥

ಯೇ ಪೂತಾಃ ಪರದಾರಾಂಶ್ಚ ಕರ್ಮಣಾ ಮನಸಾ ಗಿರಾ ।
ರಮಯಂತಿ ನ ಸತ್ತ್ವಸ್ಥಾಸ್ತೇ ನರಾಸ್ಸ್ವರ್ಗಗಾಮಿನಃ ॥ ೪೯ ॥

ನಿಂದಿತಾನಿ ನ ಕುರ್ವಂತಿ ಕುರ್ವಂತಿ ವಿಹಿತಾನಿ ಚ ।
ಆತ್ಮಶಕ್ತಿಂ ವಿಜಾನಂತಿ ತೇ ನರಾಃ ಸ್ವರ್ಗಗಾಮಿನಃ ॥ ೫೦ ॥

ಏತತ್ತೇ ಕಥಿತಂ ಸರ್ವಂ ಮಯಾ ತತ್ತ್ವೇನ ಪಾರ್ಥಿವ ।
ದುರ್ಗತಿಸ್ಸುಗತಿಶ್ಚೈವ ಪ್ರಾಪ್ಯತೇ ಕರ್ಮಭಿರ್ಯಥಾ ॥ ೫೧ ॥

---

೪೭. ಮನಸ್ಸು ಇಂದ್ರಿಯಗಳನ್ನು ಯಾರು ಸದಾ ನಿಗ್ರಹಿಸಿಕೊಂಡು ಪರೋಪಕಾರನಿರತರಾಗಿರುತ್ತಾರೋ ಅವರು ಸ್ವರ್ಗಗಾಮಿಗಳು.

೪೮. ಯಜ್ಞಗಳನ್ನು ವಿಧಿವತ್ತಾಗಿ ಮಾಡುವವರೂ, ಸುಖದುಃಖಗಳೇ ಮೊದಲಾದ ದ್ವಂದ್ವಗಳನ್ನು ಸಹಿಸುವವರೂ, ದಾಂತರೂ ಸ್ವರ್ಗಕ್ಕೆ ಹೋಗುತ್ತಾರೆ.

೪೯. ಮನೋವಾಕ್ಕಾಯಗಳಿಂದ ಪರರ ಹೆಂಡಿರ ಸಹವಾಸವನ್ನು ಯಾರು ಮಾಡುವುದಿಲ್ಲವೋ ಅವರೂ, ಧೈರ್ಯವಂತರೂ ಸ್ವರ್ಗವನ್ನು ಹೊಂದುತ್ತಾರೆ.

೫೦. ಕೆಟ್ಟಕೆಲಸವನ್ನು ಮಾಡದೆ ಒಳ್ಳೆಯ ಕೆಲಸಗಳನ್ನು ಮಾಡುತ್ತ ತಮ್ಮ ಶಕ್ತಿಯನ್ನು ತಿಳಿದುಕೊಳ್ಳುವವರು ಸ್ವರ್ಗಗಾಮಿಗಳು.

೫೧. ಏನುಮಾಡಿದರೆ ಒಳ್ಳೆಯ ಗತಿಯು ಬರುವುದು, ಏತರಿಂದ ದುರ್ಗತಿಯುಂಟಾಗುವುದು, ಮೊದಲಾದ ಕರ್ಮಗಳ ಸ್ವರೂಪವನ್ನು ವಿವರವಾಗಿ ತಿಳಿಸಿರುವೆನು.

ತತಃ ಪರೇಷಾಂ ಪ್ರತಿಕೂಲಮಾಚರನ್ ।
ಪ್ರಯಾತಿ ಘೋರಂ ನರಕಂ ಸುದುಃಖದಂ ॥
ಸದಾನುಕೂಲಸ್ಯ ನರಸ್ಯ ಜೀವಿನಃ ।
ಸುಖಾವಹಾ ಮುಕ್ತಿರದೂರಸಂಸ್ಥಿತಾ ॥ ೫೨ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಷಣ್ಣವತಿತಮೋಽಧ್ಯಾಯಃ**



---

೫೨. ಆದುದರಿಂದ ಇತರರಿಗೆ ಪ್ರತಿಕೂಲಮಾಡಿದರೆ ಎಂದರೆ ತೊಂದರೆ ಮಾಡಿದರೆ ಘೋರವಾದ ನರಕವನ್ನು ಹೊಂದುತ್ತಾರೆ. ಇತರರಿಗೆ ಯಾವಾಗಲೂ ಅನುಕೂಲವನ್ನು ಮಾಡುವವರು ಮುಕ್ತಿಯನ್ನು ಸ್ವಲ್ಪಕಾಲದಲ್ಲೇ ಹೊಂದುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತನವತಿತಮೋಽಧ್ಯಾಯಃ

---

॥ ಕುಂಜಲ ಉವಾಚ ॥

ಏವಮಾಕರ್ಣ್ಯ ತಾಂ ರಾಜಾ ಮುನಿನಾ ತೇನ ಭಾಷಿತಾಂ ।
ಧರ್ಮಾಧರ್ಮಗತಿಂ ಸರ್ವಾಂ ತಂ ಮುನಿಂ ಪ್ರತ್ಯಭಾಷತ ॥ ೧ ॥

॥ ಸುಬಾಹುರುವಾಚ ॥

ಸೋಽಹಂ ಧರ್ಮಂ ಕರಿಷ್ಯಾಮಿ ನಾಹಂ ಪಾಪಂ ದ್ವಿಜೋತ್ತಮ ।
ವಾಸುದೇವಂ ಜಗದ್ಯೋನಿಂ ಭಜಿಷ್ಯೇ ನಿತರಾಂ ಮುನೇ ॥ ೨ ॥

ತತೋ ಧರ್ಮೇಣ ತೇನೈವ ಸಂಪೂಜ್ಯ ಮಧುಸೂದನಂ ।
ಇಷ್ಟ್ವಾ ಚ ವಿವಿಧೈರ್ಯಜ್ಞೈರ್ವಿಷ್ಣುಲೋಕಂ ಸ ಭೂಪತಿಃ ।
ಪೂಜಿತಃ ಸರ್ವಕಾಮೈಶ್ಚ ಪ್ರಾಪ್ತವಾನ್ ಸತ್ವರಂ ಮುದಾ ॥ ೩ ॥

---

## ತೊಂಭತ್ತೇಳನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ಆ ಜೈಮಿನಿಯು ಹೇಳಿದ ಧರ್ಮಾಧರ್ಮಗಳನ್ನು ತಿಳಿದ ರಾಜನು ಇಂತೆಂದನು.

೨-೩. ಸುಬಾಹುವು ಹೇಳಿದನು :—ನಾನು ಧರ್ಮವನ್ನು ಮಾಡುತ್ತೇನೆ. ಪಾಪವನ್ನು ಮಾಡುವುದಿಲ್ಲ. ಜಗತ್ಕರ್ತನಾದ ವಾಸುದೇವನನ್ನು ಭಜಿಸುತ್ತೇನೆ ಹೀಗೆಂದು ನಿಶ್ಚಯಿಸಿ, ಧರ್ಮಮಾಡಿಯೂ, ವಿಷ್ಣುವನ್ನು ಪೂಜಿಸಿಯೂ, ಯಜ್ಞಗಳನ್ನು ಮಾಡಿಯೂ ಆ ರಾಜನು ಎಲ್ಲರಿಂದಲೂ ಹೊಗಳಿಸಿಕೊಂಡು ವಿಷ್ಣುಲೋಕವನ್ನು ಹೊಂದಿದನು.

ಗತೇ ಸತಿ ಮಹಾಲೋಕೇ ದೇವದೇವಂ ನ ಪಶ್ಯತಿ ।
ಕ್ಷುಧಾ ಜಾತಾ ಮಹಾತೀವ್ರಾ ತೃಷ್ಣಾ ಚಾತಿ ಪ್ರವರ್ಧತೇ ।
ತಯೋಶ್ಚಾಪಿ ಮಹಾಪ್ರಾಜ್ಞ ಜೀವಪೀಡಾಕರಾ ಬಹು ॥ ೪ ॥

ರಾಜಾ ಚ ಪ್ರಿಯಯಾ ಸಾರ್ಧಂ ಕ್ಷುಧಾತೃಷ್ಣಾಪ್ರಪೀಡಿತಃ ।
ನ ಪಶ್ಯತಿ ಹೃಷೀಕೇಶಂ ದುಃಖೇನ ಮಹತಾನ್ವಿತಃ ॥ ೫ ॥

॥ ಸೂತ ಉವಾಚ ॥

ಏವಂ ಸುದುಃಖಿತೇ ರಾಜಾ ಪ್ರಿಯಯಾ ಸಹ ಸತ್ತಮಃ ।
ಆಕುಲೋ ವ್ಯಾಕುಲೋ ಜಾತಃ ಪೀಡಿತಃ ಕ್ಷುಧಯಾ ಭೃಶಂ ॥ ೬ ॥

ಇತಶ್ಚೇತಶ್ಚ ವೇಗೈಶ್ಚ ಧಾವತೇ ವಸುಧಾಧಿಪಃ ।
ಸರ್ವಾಭರಣಶೋಭಾಂಗೋ ವಸ್ತ್ರಚಂದನಭೂಷಿತಃ ॥ ೭ ॥

ಪುಷ್ಪಮಾಲಾಪ್ರಶೋಭಾಂಗೋ ಹಾರಕುಂಡಲಮಂಡಿತಃ ।
ರತ್ನದೀಪ್ತ್ಯಾ ಪ್ರಶೋಭಾಂಗಃ ಪ್ರಿಯಯಾ ಸ ಮಹೀಪತಿಃ ॥ ೮ ॥

---

೪. ಆ ರಾಜನು ವೈಕುಂಠಕ್ಕೆ ಹೋದರೂ ಸ್ವಾಮಿಯು ಕಣ್ಣಿಗೆ ಕಾಣಿಸಲಿಲ್ಲ. ಹಸಿವು ಬಾಯಾರಿಕೆಗಳು ಪ್ರಾಣಹೋಗುವಂತೆ ಬಾಧಿಸತೊಡಗಿದುವು.

೫. ರಾಜನು ಹೆಂಡತಿಯೊಡನೆ ಆ ವಿಷ್ಣುಲೋಕಕ್ಕೆ ಹೋದರೂ ಸ್ವಾಮಿಯನ್ನು ಕಾಣದೇ ದುಃಖ ಹಸಿವು ಬಾಯಾರಿಕೆಗಳ ದುಃಖದಿಂದ ಬಹು ಪೀಡಿತನಾದನು.

೬. ಸೂತನು ಹೇಳಿದನು :—ರಾಜನೂ ರಾಣಿಯೂ ಈರೀತಿ ದುಃಖಗೊಂಡು ವ್ಯಾಕುಲರಾದರು.

೭-೮. ಆಭರಣಗಳನ್ನು ಧರಿಸಿ, ಗಂಧವನ್ನು ಪೂಸಿಕೊಂಡು, ಕುಂಡಲಗಳನ್ನು ಹಾಕಿಕೊಂಡು, ಒಳ್ಳೆಯ ತೇಜಸ್ವಿಯಾಗಿದ್ದರೂ, ಹಸಿವು ಬಾಯಾರಿಕೆಗಳಿಂದ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡಲು ಮೊದಲುಮಾಡಿದನು.

ಏವಂ ದುಃಖಸಮಾಚಾರಃ ಸ್ತೂಯಮಾನಶ್ಚ ಪಾಠಕೈಃ ।
ದುಃಖಶೋಕಸಮಾವಿಷ್ಟಃ ಸ್ವಪ್ರಿಯಂ ವಾಕ್ಯಮಬ್ರವೀತ್ ॥ ೯ ॥

ವಿಷ್ಣುಲೋಕಮಹಂ ಪ್ರಾಪ್ತಸ್ತ್ವಯಾ ಸಹ ಸುಶೋಭನೇ ।
ಋಷಿಭಿಸ್ತೂಯಮಾನೋಽಪಿ ವಿಮಾನೇನಾಪಿ ಭಾಗಿನಿ ॥ ೧೦ ॥

ಕರ್ಮಣಾ ಕೇನ ಮೇ ಚೇಯಂ ಕ್ಷುಧಾತೀವ ಪ್ರವರ್ಧತೇ ।
ವಿಷ್ಣುಲೋಕಂ ಚ ಸಂಪ್ರಾಪ್ಯ ನ ದೃಷ್ಟೋ ಮಧುಸೂದನಃ ॥ ೧೧ ॥

ತತ್ಕಿಂ ಹಿ ಕಾರಣಂ ಭದ್ರೇ ನ ಭುನಜ್ಮಿ ಮಹತ್ಫಲಂ ।
ಕರ್ಮಣಾಥ ನಿಜೇನಾಪಿ ಏತದ್ದುಃಖಂ ಪ್ರವರ್ತತೇ ।
ಸೈವಂ ಶ್ರುತ್ವಾ ಚ ತದ್ವಾಕ್ಯಂ ರಾಜಾನಾಮಿದಮಬ್ರವೀತ್ ॥ ೧೨ ॥

॥ ಭಾರ್ಯೋವಾಚ ॥

ಸತ್ಯಮುಕ್ತಂ ತ್ವಯಾ ರಾಜನ್ ನಾಸ್ತಿ ಧರ್ಮಸ್ಯ ವೈ ಫಲಂ ॥ ೧೩ ॥

---

೯. ಈರೀತಿ ದುಃಖಿಯಾಗಿದ್ದರೂ ಹೊಗಳುಭಟರು ಹೊಗಳುತ್ತಲೇ ಇದ್ದರು. ಆಗ ರಾಜನು ಆ ದುಃಖದಿಂದ ಕೂಡಿಯೇ ಹೆಂಡತಿಯನ್ನು ಕುರಿತಿಂತೆಂದನು.

೧೦-೧೧. ಎಲೈ ಶೋಭನಾಂಗಿಯೇ, ನಿನ್ನೊಡನೆ ವಿಷ್ಣುಲೋಕವನ್ನು ಹೊಂದಿದೆನು. ಋಷಿಗಳು ಸ್ತೋತ್ರಮಾಡುತ್ತಿದ್ದಾರೆ. ಆದರೆ ಯಾವ ಕರ್ಮದಿಂದ ಈ ಹಸಿವು ನನ್ನನ್ನು ಬಾಧಿಸುತ್ತದೆ ? ವಿಷ್ಣುವೇಕೆ ನನ್ನ ಕಣ್ಣಿಗೆ ಕಾಣಿಸುವುದಿಲ್ಲ ?

೧೨. ನಾನು ಮಹಾಫಲವನ್ನು ಅನುಭವಿಸಲಾಗದಿರಲು ಕಾರಣವೇನು ? ಯಾವ ಪಾಪದಿಂದ ಈ ದುಃಖವು ನನ್ನನ್ನು ಆವರಿಸಿಕೊಂಡಿದೆ ? ಎನ್ನಲು ಆಕೆಯು ಈ ಮಾತನ್ನು ಕೇಳಿ ರಾಜನಿಗೆ ಈರೀತಿ ಹೇಳಿದಳು.

೧೩. ಹೆಂಡತಿಯು ಹೇಳಿದಳು:—ರಾಜನೇ, ನೀನು ಹೇಳಿದುದು ಸರಿ. ಧರ್ಮದ ಫಲವೇ ಇಲ್ಲದೇಹೋಯಿತು.

ವೇದಶಾಸ್ತ್ರಪುರಾಣೇಷು ಸಮ್ಯಕ್ಪಶ್ಯಂತಿ ಬ್ರಾಹ್ಮಣಾಃ ।
ದುಃಖಶೋಕೌ ವಿಧೂಯೇಹ ಸರ್ವದೋಷಾನ್ನಿರಸ್ಯ ಚ ॥ ೧೪ ॥

ನಾಮೋಚ್ಚಾರಣಮಾತ್ರೇಣ ವಿಷ್ಣೋಶ್ಚೈವ ಸುಚಕ್ರಿಣಃ ।
ಪುಣ್ಯಾತ್ಮಾನೋ ಮಹಾಭಾಗಾ ಧ್ಯಾನೇನಾಪಿ ಮಹಾತ್ಮನಃ ॥ ೧೫ ॥

ತ್ವಯಾ ಚಾರಾಧಿತೋ ದೇವಃ ಶಂಖಚಕ್ರಗದಾಧರಃ ।
ಅನ್ನಾದಿದಾನಂ ವಿಪ್ರೇಭ್ಯೋ ನ ಪ್ರದತ್ತಂ ದ್ವಿಜೋದಿತಂ ॥ ೧೬ ॥

ಫಲಂ ತಸ್ಯ ಪ್ರಜಾನಾಮಿ ನ ದೃಷ್ಟೋ ಮಧುಸೂದನಃ ।
ಕ್ಷುಧಾ ಮಾಂ ಬಾಧತೇ ರಾಜಂಸ್ತೃಷ್ಣಾ ಚೈವ ಪ್ರಶೋಷಯೇತ್ ॥ ೧೭ ॥

॥ ಕುಂಜಲ ಉವಾಚ ॥

ಏವಮುಕ್ತಸ್ತು ಪ್ರಿಯಯಾ ರಾಜಾ ಚಿಂತಾಕುಲೇಂದ್ರಿಯಃ ।
ತತೋ ದೃಷ್ಟ್ವಾ ಮಹಾಪುಣ್ಯಮಾಶ್ರಮಂ ಸುಮನೋಹರಂ ॥ ೧೮ ॥

---

೧೪-೧೫. ದುಃಖ ಮೊದಲಾದ ಸರ್ವದೋಷಗಳನ್ನು ಬಿಟ್ಟು ವಿಷ್ಣುವಿನ ನಾಮೋಚ್ಚಾರಣೆಯಿಂದ ಪೂತರಾಗಿ ಯಾವಾಗಲೂ ಆತ್ಮನನ್ನು ಧ್ಯಾನಮಾಡುತ್ತಾ ಮಹಾತ್ಮರಾಗಿ ಬ್ರಾಹ್ಮಣರು ವೇದಶಾಸ್ತ್ರಗಳಲ್ಲಿ ಅವನ ವಿಷಯವನ್ನು ಚೆನ್ನಾಗಿ ತಿಳಿದಿದ್ದಾರೆ. ಇದೆಲ್ಲವನ್ನೂ ನೀನು ತಿಳಿದಿರುವಿಯಷ್ಟೆ.

೧೬. ನೀನು ವಿಷ್ಣುವನ್ನೇನೋ ಚೆನ್ನಾಗಿ ಪೂಜಿಸಿರುವೆ. ಆದರೆ ಬ್ರಾಹ್ಮಣರು ಹೇಳಿದಂತೆ ಅನ್ನದಾನವನ್ನು ಮಾಡಲಿಲ್ಲ.

೧೭. ಆ ಅನ್ನದಾನಮಾಡದ್ದರಿಂದಲೇ ವಿಷ್ಣುವು ನಿನಗೆ ಗೋಚರನಾಗಲಿಲ್ಲ. ಪ್ರಾಣಾಪಹಾರಕವಾದ ಹಸಿವು ಬಾಯಾರಿಕೆಗಳು ಇಲ್ಲಿಯೂ ಬಾಧಿಸುತ್ತಿವೆ.

೧೮-೧೯. ಕುಂಜಲನು ಹೇಳಿದನು :—ಹೆಂಡತಿಯು ಹೀಗೆ ಹೇಳಿದುದನ್ನು ಕೇಳಿ ರಾಜನು ಚಿಂತಾಪರನಾದನು. ಅನಂತರ ದಿವ್ಯವೃಕ್ಷಗಳಿಂದಲೂ ಕೆರೆ ಕೊಳ

ದಿವ್ಯವೃಕ್ಷಸಮಾಕೀರ್ಣಂ ತಟಾಕೈರುಪಶೋಭಿತಂ ।
ನಾನಾವೃಕ್ಷಸಮಾಕೀರ್ಣಂ ಸರ್ವಕಾಮಸಮನ್ವಿತಂ ॥ ೧೯ ॥

ಶ್ರೀಖಂಡೈಶ್ಚಾ ಸುಗಂಧೈಶ್ಚ ಸುಪುಷ್ಪೈಸ್ಸುಶುಭಾಯತೇ ।
ಏವಂ ಪುಷ್ಪಸಮಾಕೀರ್ಣಂ ಸುಪುಣ್ಯಂ ಶ್ರಿಯಯೋಜ್ಜ್ವಲಂ ॥ ೨೦ ॥

ವಾಪೀಕೂಪತಟಾಕೈಶ್ಚ ಪುಣ್ಯತೋಯಪ್ರಪೂರಿತೈಃ ।
ಹಂಸಕಾರಂಡವಾಕೀರ್ಣಂ ನಾನಾಖಗವಿಶೋಭಿತಂ ॥ ೨೧ ॥

ಆಶ್ರಮಶ್ಶೋಭತೇ ಪುಣ್ಯೈರ್ಮುನಿಭಿಸ್ತತ್ತ್ವವೇದಿಭಿಃ ।
ದಿವ್ಯವೃಕ್ಷಸಮಾಕೀರ್ಣಂ ಮೃಗವ್ರಾತೈಶ್ಚ ಶೋಭಿತಂ ॥ ೨೨ ॥

ನಾನಾಪುಷ್ಪಸಮಾಕೀರ್ಣಂ ಹೃದ್ಯಗನ್ಧಸಮಾಕುಲಂ ।
ದ್ವಿಜಸಿದ್ಧೈಸ್ಸಮಾಕೀರ್ಣಮೃಷಿಶಿಷ್ಯೈಸ್ಸಮಾಕುಲಂ ॥ ೨೩ ॥

ಯೋಗಯೋಗೀನ್ದ್ರಸಂಘುಷ್ಟಂ ದೇವವೃಂದೈರಲಂಕೃತಂ ।
ಕದಲೀವನಸಂಘೈಶ್ಚ ಸುಫಲೈಃ ಪರಿಶೋಭಿತಂ ॥ ೨೪ ॥

ಸ ಸುಬಾಹುಸ್ತತೋ ರಾಜಾ ತಯಾ ಸ್ವಪ್ರಿಯಯಾ ಸಹ ।
ಪ್ರವಿವೇಶ ಮಹಾಪುಣ್ಯಂ ನಂದನಂ ಸರ್ವಕಾಮದಂ ॥ ೨೫ ॥

---

ಗಳಿಂದಲೂ ನಾನಾಬಗೆಯ ಹೂಗಳುಳ್ಳ ವೃಕ್ಷಗಳಿಂದಲೂ ವ್ಯಾಪ್ತವಾದ ಶ್ರೀಖಂಡದಿಂದಾವರಿಸಲ್ಪಟ್ಟ ಒಂದು ಪುಣ್ಯಾಶ್ರಮವನ್ನು ನೋಡಿದನು.

೨೦-೨೧. ಹೂವಿನಿಂದ ಕೂಡಿದ ಕೆರೆಕೊಳಗಳೂ, ಹಂಸಬಕಗಳೂ, ಆ ಆಶ್ರಮದಲ್ಲಿ ಕಂಗೊಳಿಸುತ್ತಿದ್ದವು.

೨೨-೨೪. ತತ್ವವನ್ನು ಬಲ್ಲ ಋಷಿಗಳಿಂದಲೂ, ದಿವ್ಯವೃಕ್ಷಗಳಿಂದಲೂ, ಮೃಗಗಳ ಗುಂಪುಗಳಿಂದಲೂ, ಅನೇಕಬಗೆಯ ಪುಷ್ಪಗಳಿಂದಲೂ, ಒಳ್ಳೆಯ ಗಂಧದಿಂದಲೂ, ಸಿದ್ಧರು, ಬ್ರಾಹ್ಮಣರು, ಋಷಿಗಳ ಶಿಷ್ಯರು, ಯೋಗೀಂದ್ರರು, ದೇವತೆಗಳು ಬಾಳೆಯೇ ಮೊದಲಾದ ಫಲವೃಕ್ಷಗಳೂ ಇವುಗಳಿಂದ ಆ ಆಶ್ರಮವು ಶೋಭಿತವಾಗಿತ್ತು.

೨೫. ಸರ್ವಸೌಖ್ಯವನ್ನು ಕೊಡುವ, ಪುಣ್ಯಪ್ರದವಾದ ಆ ನಂದನವನಕ್ಕೆ ಸಮಾನವಾದ ಆಶ್ರಮವನ್ನು ಹೆಂಡತಿಯೊಡನೆ ಆ ಸುಬಾಹುವು ಪ್ರವೇಶಿಸಿದನು.

ಭಾಸಮಾನೋ ದಿಶಸ್ಸರ್ವಾ ಯತ್ರಾಸ್ತೇ ಸೂರ್ಯಸಂನಿಭಃ ।
ವಾಮದೇವೋ ಮುನಿಶ್ರೇಷ್ಠೋ ವೈಷ್ಣವಾನಾಂ ವರಸ್ಸದಾ ॥ ೨೬ ॥

ರಾಜಮಾನಂ ಮಹಾದೀಪ್ತ್ಯಾ ಪರಯಾ ಸೂರ್ಯಸನ್ನಿಭಂ ।
ಯೋಗಾಸನಸಮಾರೂಢಂ ಯೋಗಪಟ್ಟೇನ ಶೋಭಿತಂ ॥ ೨೭ ॥

ಧ್ಯಾಯಮಾನಂ ಹೃಷೀಕೇಶಂ ಭುಕ್ತಿಮುಕ್ತಿಪ್ರದಾಯಕಂ ।
ವಾಮದೇವಂ ಮಹಾತ್ಮಾನಂ ದದರ್ಶ ಮುನಿಸತ್ತಮಂ ॥ ೨೮ ॥

ತತ್ರ ಗತ್ವಾ ಪ್ರಣಮ್ಯೈವ ಸ ರಾಜಾ ಪ್ರಿಯಯಾ ಸಹ ।
ವಾಮದೇವಸ್ತತೋ ದೃಷ್ಟ್ವಾ ಪ್ರಣತಂ ರಾಜಸತ್ತಮಂ ॥ ೨೯ ॥

ಆಶೀರ್ಭಿರನಂದ್ಯೈವ ಪ್ರಿಯಯಾ ಸಹಿತಂ ಮುದಾ ।
ಉಪವೇಶ್ಯಾಸನೇ ಪುಣ್ಯೇ ಸುಬಾಹುಂ ರಾಜಸತ್ತಮಂ ॥ ೩೦ ॥

ಆಸನಾದಿ ತತಃ ಪಾದ್ಯೈರರ್ಘ್ಯಪೂಜಾದಿಕೇನ ಚ ।
ಸತ್ಕಾರಂ ಕಾರಯಾಮಾಸ ಸಭಾರ್ಯಂ ಸಂಸ್ಥಿತಂ ತದಾ ॥ ೩೧ ॥

---

೨೬. ತೇಜಸ್ವಿಯೂ, ವಿಷ್ಣುಭಕ್ತನೂ, ಮುನಿಶ್ರೇಷ್ಠನೂ ಆದ ವಾಮದೇವನು ಆ ಆಶ್ರಮದಲ್ಲಿದ್ದನು.

೨೭-೨೮. ಸೂರ್ಯನಂತೆ ಪ್ರಕಾಶಿಸುತ್ತಿರುವ, ಯೋಗಪಟ್ಟವನ್ನು ಹಿಡಿದು ಯೋಗಾಸನದಲ್ಲಿ ಕುಳಿತಿರುವ, ಇಹಪರಸೌಖ್ಯಗಳನ್ನು ಕೊಡುವ ಮಹಾತ್ಮನಾದ ಆ ವಾಮದೇವನನ್ನು ನೋಡಿದನು.

೨೯-೩೧. ಅಲ್ಲಿಗೆ ಹೋಗಿ ರಾಜನು ಹೆಂಡತಿಯೊಡನೆ ಆ ಋಷಿಗೆ ನಮಸ್ಕರಿಸಿದನು. ವಾಮದೇವನು ನಮಸ್ಕರಿಸಿದ ರಾಜನನ್ನು ನೋಡಿ ಆಶೀರ್ವದಿಸಿ ಒಳ್ಳೆಯ ಆಸನದಲ್ಲಿ ಅವರಿಬ್ಬರನ್ನೂ ಕೂರಿಸಿ ಆ ರಾಜದಂಪತಿಗಳಿಗೆ ಆಸನ ಅರ್ಘ್ಯಪಾದ್ಯಗಳನ್ನು ಕೊಟ್ಟು ಸತ್ಕರಿಸಿ, ಆ ಭಾಗವತೋತ್ತಮನು ರಾಜನನ್ನು ಕುರಿತು ಹೀಗೆಂದನು.

ಅಥ ಪ್ರಪಚ್ಛ ರಾಜಾನಂ ಮಹಾಭಾಗವತೋತ್ತಮಂ ।

॥ ವಾಮದೇವ ಉವಾಚ ॥

ತ್ವಾಮಹಂ ವಿಷ್ಣುಧರ್ಮಜ್ಞಂ ವಿಷ್ಣುಭಕ್ತಂ ನರೋತ್ತಮ ।
ಜಾನೇ ಜ್ಞಾನೇನ ರಾಜೇಂದ್ರ ದಿವ್ಯೇನ ಚೋಳಭೂಮಿಪಂ ॥ ೩೨ ॥

॥ ರಾಜೋವಾಚ ॥

ನಿರಾಮಯೋಽಸ್ಮಿ ಭಗವನ್ ಪ್ರಾಪ್ತೋ ವಿಷ್ಣೋಃ ಪರಂ ಪದಂ ।
ಮಯಾ ಹಿ ಪರಯಾ ಭಕ್ತ್ಯಾ ವಾಸುದೇವೋ ಜನಾರ್ದನಃ ॥ ೩೩ ॥

ಆರಾಧಿತೋ ಜಗನ್ನಾಥೋ ಭಕ್ತ್ಯಾ ಪ್ರೀತಸ್ಸುರೇಶ್ವರಃ ।
ಕಸ್ಮಾತ್ತತ್ರ ನ ಪಶ್ಯಾಮಿ ತಂ ದೇವಂ ಕಮಲಾಪತಿಂ ॥ ೩೪ ॥

ಕ್ಷುಧಾ ಮೇ ಬಾಧತೇ ಚಾತ್ರ ತೃಷ್ಣಾತೀವ ಸುದಾರುಣಾ ।
ತಾಭ್ಯಾಂ ಶಾನ್ತಿಂ ನ ಗಚ್ಛಾಮಿ ಸುಖಂ ವಿನ್ದಾಮಿ ನೈವ ಚ ॥ ೩೫ ॥

ಏತನ್ಮೇ ಕಾರಣಂ ದುಃಖಂ ಸಂಜಾತಂ ಮುನಿಸತ್ತಮ ।
ತನ್ಮೇ ತ್ವಂ ಕಾರಣಂ ಬ್ರೂಹಿ ಪ್ರಸಾದಸುಮುಖೋ ಭವ ॥ ೩೬ ॥

---

೩೨. ವಾಮದೇವನು ಹೇಳಿದನು:—ಎಲೈ ರಾಜನೇ, ನೀನು ವಿಷ್ಣುವಿನ ಧರ್ಮವನ್ನು ಬಲ್ಲವನೆಂದೂ, ವೈಷ್ಣವನೆಂದೂ, ಚೋಳದೇಶದ ರಾಜನೆಂದೂ, ಜ್ಞಾನ ದೃಷ್ಟಿಯಿಂದ ತಿಳಿದಿದ್ದೇನೆ. ಆರೋಗ್ಯವಾಗಿದ್ದೀಯಾ? ನಿನ್ನ ಹೆಂಡತಿಯು ಆರೋಗ್ಯವೇ ? ಎಂದನು.

೩೩. ರಾಜನು ಹೇಳಿದನು:—ಸ್ವಾಮಿ ! ನಾನು ಆರೋಗ್ಯವಾಗಿದ್ದೇನೆ. ವಿಷ್ಣುಪದವನ್ನು ಹೊಂದಿದ್ದೇನೆ. ನಾನು ಅತ್ಯಂತಭಕ್ತಿಯಿಂದ ಸ್ವಾಮಿಯಾದ ಜನಾರ್ದನನ್ನು ಸೇವಿಸಿ ಆರಾಧಿಸಿದೆನು. ಆ ಸ್ವಾಮಿಯು ಪ್ರೀತನಾದನು.

೩೪-೩೫, ಆದರೂ ಆ ವಿಷ್ಣುಲೋಕದಲ್ಲಿ ವಾಸುದೇವನೇಕೆ ನನಗೆ ಕಾಣುತ್ತಿಲ್ಲ ? ಹಸಿವು ಬಾಯಾರಿಕೆಗಳೇಕೆ ಅತ್ಯಂತ ಬಾಧಿಸುತ್ತಿವೆ ? ಅವುಗಳಿಂದ ಬಾಧಿಸಲ್ಪಟ್ಟು ಸುಖದ ಲೇಶವನ್ನೂ ಕಾಣೆನಲ್ಲ ?

೩೬. ಎಲೈ ಋಷಿಯೇ ! ಆ ದುಃಖವು ನನಗೆ ಸಹಿಸಲಸಾಧ್ಯವಾಗಿದೆ. ದಯವಿಟ್ಟು ಅದರ ಕಾರಣವನ್ನು ತಿಳಿಸು ಎಂದನು.

॥ ವಾಮದೇವ ಉವಾಚ ॥

ಭವಾನ್ಭಕ್ತೋಽಸಿ ರಾಜೇಂದ್ರ ಶ್ರೀಕೃಷ್ಣಸ್ಯ ಸದೈವ ಹಿ ।
ಆರಾಧಿಸ್ತ್ವಯಾ ಭಕ್ತ್ಯಾ ವಾಸುದೇವೋ ಜನಾರ್ದನಃ ॥ ೩೭ ॥

ಭಕ್ತ್ಯೋಪಚಾರೈಸ್ಸ್ನಾನಾದ್ಯೈರ್ಗಂಧಪುಷ್ಪಾದಿಭಿಸ್ತಥಾ ।
ನ ಪೂಜಿತೋಽಥ ನೈವೇದ್ಯೈಃ ಫಲೈಶ್ಚ ಜಗತಾಂ ಪತಿಃ ॥ ೩೮ ॥

ದಶಮೀಂ ಪ್ರಾಪ್ಯ ರಾಜೇಂದ್ರ ಸದೈವ ಹಿ ತ್ವಯಾ ಕೃತಂ ।
ಏಕಭಕ್ತಂ ನ ದತ್ತಂ ತು ಬ್ರಾಹ್ಮಣಾಯ ಸುಭೋಜನಂ ॥ ೩೯ ॥

ಏಕಾದಶೀಂ ಚ ಸಂಪ್ರಾಪ್ಯ ನ ಕೃತಂ ಭೋಜನಂ ತ್ವಯಾ ।
ವಿಷ್ಣುಮುದ್ದಿಶ್ಯ ವಿಪ್ರಾಯ ನ ದತ್ತಂ ಭೋಜನಂ ತ್ವಯಾ ॥ ೪೦ ॥

ಅನ್ನದಾನಂ ವಿಶೇಷೇಣ ಕದಾ ದತ್ತಂ ನ ಹಿ ತ್ವಯಾ ।
ಅನ್ನಂ ಚಾಮೃತರೂಪೇಣ ಪೃಥಿವ್ಯಾಂ ಸಂಸ್ಥಿತಂ ಸದಾ ॥ ೪೧ ॥

ಓಷಧ್ಯಸ್ತು ಮಹಾರಾಜ ನಾನಾಭೇದಾಸ್ತು ತಾಶ್ಶೃಣು ।
ಕಟುತಿಕ್ತಕಷಾಯಾಶ್ಚ ಕ್ಷಾರಾಮ್ಲಮಧುರಾಸ್ತಥಾ ॥ ೪೨ ॥

---

೩೭-೩೮. ವಾಮದೇವನು ಹೇಳಿದನು :—ಎಲೈ ರಾಜನೇ ಕೇಳು. ನೀನು ವಿಷ್ಣುಭಕ್ತನಾಗಿದ್ದೀಯೆ. ವಾಸುದೇವನನ್ನು ಭಕ್ತಿಯಿಂದ ಆರಾಧಿಸಿದ್ದೀಯೆ. ನೀನು ಭಕ್ತಿಯಿಂದ ಸ್ನಾನ, ಗಂಧ, ಪುಷ್ಪಾದಿಗಳಿಂದ ಪೂಜಿಸಿದೆ. ಆದರೆ ಅವನನ್ನು ಫಲವೇ ಮುಂತಾದ ನೇವೇದ್ಯಗಳಿಂದ ಪೂಜಿಸಲಿಲ್ಲ.

೩೯-೪೦. ದಶಮಿಯ ದಿನದಲ್ಲಿ ಪೂಜೆಯನ್ನು ಯಾವಾಗಲೂ ಮಾಡುತ್ತಿದ್ದೆ. ಆದಿನ ಒಪ್ಪತ್ತಾದರೂ ಬ್ರಾಹ್ಮಣನಿಗೆ ನೀನು ಭೋಜನಮಾಡಿಸಲಿಲ್ಲ. ಏಕಾದಶಿಯ ದಿನ ನೀನೂ ಊಟಮಾಡುತ್ತಿರಲಿಲ್ಲ. ವಿಷ್ಣುಪ್ರೀತ್ಯರ್ಥವಾಗಿ ಬ್ರಾಹ್ಮಣನಿಗೂ ಭೋಜನವನ್ನು ಮಾಡಿಸುತ್ತಿರಲಿಲ್ಲ.

೪೧. ಅನ್ನದಾನವನ್ನು ನೀನು ಆಗಮಾಡಲೇ ಇಲ್ಲ. ಅನ್ನವೆಂಬುದು ಅಮೃತದ ರೂಪದಿಂದ ಭೂಮಿಯಲ್ಲಿರತಕ್ಕುದಲ್ಲವೆ?

೪೨. ಓಷಧಿಗಳು ನಾನಾಬಗೆಯಾಗಿವೆ. ಅವು ಕಹಿ, ಖಾರ, ಒಗರು, ಉಪ್ಪು, ಹುಳಿ, ಸಿಹಿ ಎಂಬುದಾಗಿ ರುಚಿಭೇದಗಳಾಗಿವೆ.

ಸ್ನಿಗ್ಧಾಶ್ಚೋಪಸ್ಕರಾಸ್ಸರ್ವಾ ನಾನಾರೂಪಾಶ್ಚ ಭೂತಳೇ ।
ಅಮೃತಾಜ್ಜಜ್ಞಿರೇ ಸರ್ವಾ ಓಷಧ್ಯಃ ಪುಷ್ಟಿಹೇತವಃ ॥ ೪೩ ॥

ಅನ್ನಮೇವ ತು ಸಂಸ್ಕೃತ್ಯ ಓಷಧೀರ್ವ್ಯಂಜನಾನ್ವಿತಾಃ ।
ದೇಶೇಭ್ಯೋ ವಿಷ್ಣುರೂಪೇಭ್ಯ ಇತಿ ಸಂಕಲ್ಪ್ಯ ದೀಯತೇ ।
ಪಿತೃಭ್ಯೋ ವಿಷ್ಣುರೂಪೇಭ್ಯೋ ಹಸ್ತೇ ಚ ಬ್ರಾಹ್ಮಣಸ್ಯ ಚ ॥ ೪೪ ॥

ಅತಿಥಿಭ್ಯಸ್ತತೋ ದತ್ವಾ ಪರಿಜನಂ ಪ್ರಭೋಜಯೇತ್ ।
ಸ್ವಯಂ ತು ಭುಜ್ಯತೇ ಪಶ್ಚಾತ್ತದನ್ನಮಮೃತೋಪಮಂ ॥ ೪೫ ॥

ಪ್ರೇತ್ಯ ದುಃಖಂ ನ ತಸ್ಯಾಸ್ತಿ ಸುಖಮೇವ ಹಿ ಕೇವಲಂ ।
ಬ್ರಾಹ್ಮಣಾಃ ಪಿತರೋ ದೇವಾಃ ಕ್ಷೇತ್ರರೂಪಾಶ್ಚ ಭೂಪತೇ ॥ ೪೬ ॥

ಯಥಾ ಹಿ ಕರ್ಷಕಃ ಕಶ್ಚಿತ್ಸುಕೃಷಿಂ ಕುರುತೇ ಸದಾ ।
ತದ್ವನ್ಮರ್ತ್ಯಃ ಕೃಷಿಂ ಕುರ್ಯಾತ್ ಕ್ಷೇತ್ರೇ ವಿಪ್ರಾಖ್ಯಕೇ ನೃಪ ॥ ೪೭ ॥

---

೪೩. ಮೃದುವಾಗಿಯೂ ಅನುಕೂಲವಾಗಿಯೂ ಇರುವ ಪರಿಕರಗಳು ಬೇಕಾದಷ್ಟಿವೆ. ಆ ಪುಷ್ಟಿಹೇತುವಾದ ಓಷಧಿಗಳು ಅಮೃತದಿಂದ ಹುಟ್ಟಿರುವುವು.

೪೪. ಓಷಧಿರೂಪಗಳಾದ ಅನ್ನಗಳನ್ನು ವ್ಯಂಜನದಿಂದ ಸೇರಿಸಿ ವಿಷ್ಣುರೂಪರಾದ ದೇವತೆಗಳಿಗೆಂದೂ, ಪಿತೃರೂಪನಾದ ವಿಷ್ಣುವಿಗೆಂದೂ, ಬ್ರಾಹ್ಮಣನ ಕೈಯಲ್ಲಿ ಕೊಡಬೇಕು.

೪೫. ಆಮೇಲೆ ಅತಿಥಿಗಳಿಗೂ, ಪರಿಜನರಿಗೂ, ಭೋಜನಮಾಡಿಸಬೇಕು. ಅನಂತರ ತಾನು ಊಟಮಾಡಬೇಕು. ಅನ್ನವು ಅಮೃತಕ್ಕೆ ಸಮಾನವು.

೪೬. ಹೀಗೆ ದಾನಮಾಡಿ ಸತ್ತಮೇಲೆ ಅವನಿಗೆ ದುಃಖವಿರುವುದಿಲ್ಲ. ಸುಖ ಒಂದೇ ಇರುತ್ತದೆ. ಬ್ರಾಹ್ಮಣರು, ಪಿತೃಗಳು, ದೇವತೆಗಳೂ, ಕ್ಷೇತ್ರರೂಪರಾಗಿರುತ್ತಾರೆ.

೪೭. ರೈತನು ಭೂಮಿಯಲ್ಲಿ ವ್ಯವಸಾಯಮಾಡುವಂತೆ ಮನುಷ್ಯನು ವಿಪ್ರನೆಂಬ ಹೊಲದಲ್ಲಿ ವ್ಯವಸಾಯವನ್ನು ಮಾಡಬೇಕು.

**ಸ್ವಭಾವಲಾಂಗಲೇನಾಪಿ ಬ್ರಹ್ಮತೋದೇನ ನೋದಯೇತ್ ।**
**ವೃಷಭೌ ತು ಮತೌ ನಿತ್ಯಂ ಬುದ್ಧಿಶ್ಚೈವ ತಪಸ್ತಥಾ ॥ ೪೮ ॥**

**ಸತ್ಯಜ್ಞಾನಾನುಭಾವೀಶಃ ಶುದ್ಧಾತ್ಮಾ ಚ ಪ್ರತೋದಕಃ ।**
**ವಿಪ್ರೇ ಚೈವ ಮಹಾಕ್ಷೇತ್ರೇ ನಮಸ್ಕಾರೈರ್ವಿಸರ್ಜಯೇತ್ ॥ ೪೯ ॥**

**ಸ್ಫೋಟಯೇತ್ಕಲ್ಮಷಂ ನಿತ್ಯಂ ಕರ್ಷಕೋ ಹಿ ಯಥಾ ನೃಪ ।**
**ಕ್ಷೇತ್ರಸ್ಯ ಉದ್ಯಮೋ ಯುಕ್ತೋ ವಿಷ್ಣುಕಾಮಃ ಪ್ರಸಾಧಯೇತ್ ॥ ೫೦ ॥**

**ತದ್ವಾಕ್ಯೈಶ್ಚ ಮಹಾಪುಣ್ಯೈಃ ಶುಭೈರ್ವಿಪ್ರಾನ್ಪ್ರಸಾಧಯೇತ್ ।**
**ಪರ್ವತೀರ್ಥಾಷ್ಟಿಕಾಲಶ್ಚ ಘನರೂಪೋಽಭಿವರ್ಷಣೇ ॥ ೫೧ ॥**

**ವಪ್ತುಕಾಮೋ ಭವೇತ್ಕ್ಷೇತ್ರೇ ತತಃ ಕ್ಷೇತ್ರೇ ಪ್ರವಾಪಯೇತ್ ।**
**ತದ್ವದ್ಭೂಪ ಪ್ರಶಸ್ತಾಯ ವಿಪ್ರಾಯ ಪರಿದೀಯತೇ ॥ ೫೨ ॥**

---

೪೮-೪೯. ಸ್ವಭಾವವೆಂಬುದೇ ನೇಗಿಲು, ಬ್ರಹ್ಮವೆಂಬುದೇ ಚಾವಟಿ, ಅದರಿಂದ ಬುದ್ಧಿತಪಸ್ಸುಗಳೆಂಬ ಎತ್ತುಗಳನ್ನು ಓಡಿಸಬೇಕು. ಸತ್ಯಜ್ಞಾನಗಳಿಗೆ ಒಡೆಯನಾಗಿ, ಶುದ್ಧನಾಗಿ ಓಡಿಸುತ್ತಿರುವ ಈತನು ಆ ಬ್ರಾಹ್ಮಣರೆಂಬ ಕ್ಷೇತ್ರದಲ್ಲಿ ನಮಸ್ಕಾರಮಾಡಿ ಆ ಮಹಾತ್ಮರನ್ನು ಕಳುಹಿಸಬೇಕು.

೫೦. ರೈತನು ಹೊಲದ ಕಳೆಗಳನ್ನು ತೆಗೆಯುವಂತೆ ತನ್ನ ಕಲ್ಮಷವನ್ನು ತೆಗೆದುಹಾಕುತ್ತಿರಬೇಕು. ಆ ಬ್ರಾಹ್ಮಣರೆಂಬ ಹೊಲವನ್ನು ವಿಷ್ಣುವೆಂಬ ಅಪೇಕ್ಷೆಯಿಂದ ಸರಿಮಾಡಬೇಕು.

೫೧. ಒಳ್ಳೆಯ ಮಾತುಗಳಿಂದ ಆ ಬ್ರಾಹ್ಮಣರನ್ನು ಅನುಕೂಲರನ್ನಾಗಿ ಮಾಡಿಕೊಳ್ಳಬೇಕು. ಪರ್ವಕಾಲ, ತೀರ್ಥಕಾಲ, ಇಷ್ಟಕಾಲಗಳೆಂಬಿವೇ ಅದಕ್ಕೆ ಬೀಜ ಹಾಕಲು ಮಳೆಗಾಲಗಳು.

೫೨. ಕಾಲಗಳನ್ನು ನೋಡಿಕೊಂಡು ರೈತನು ಕ್ಷೇತ್ರದಲ್ಲಿ ಬಿತ್ತಬೇಕು. ಅದರಂತೆಯೇ ಮನುಜನು ಯೋಗ್ಯನಾದ ಬ್ರಾಹ್ಮಣನಲ್ಲಿ ದಾನಮಾಡಬೇಕು.

**ಕ್ಷೇತ್ರ ಉಪ್ತಸ್ಯ ಬೀಜಸ್ಯ ಯಥಾ ಕ್ಷೇತ್ರೀ ಪ್ರಭುಂಜತೇ ।**
**ಫಲಮೇವ ಮಹಾರಾಜ ತಥಾ ದಾತಾ ಭುನಕ್ತಿ ಚ ॥ ೫೩ ॥**

**ಪ್ರೇತ್ಯ ಚಾತ್ರೈವ ನಿತ್ಯಂ ಚ ತೃಪ್ತೋ ಭವತಿ ನಾನ್ಯಥಾ ।**
**ಬ್ರಾಹ್ಮಣಾಃ ಪಿತರೋ ದೇವಾಃ ಕ್ಷೇತ್ರರೂಪಾ ನ ಸಂಶಯಃ ॥ ೫೪ ॥**

**ಮಾನವಾನಾಂ ಮಹಾರಾಜ ವಪತಾಂ ಪ್ರದದಾತಿ ಚ ।**
**ಫಲಮೇವ ನ ಸಂದೇಹೋ ಯಾದೃಶಂ ತಾದೃಶಂ ಧ್ರುವಂ ॥ ೫೫ ॥**

**ಕಟುಕಾದ್ಧಿ ನ ಜಾಯೇತ ರಾಜನ್ ಮಧುರ ಏವ ಚ ।**
**ತದ್ವಚ್ಚ ಮಧುರಾಖ್ಯಾಚ್ಚ ನ ಜಾಯೇತ್ಕಟುಕಸ್ಸದಾ ॥ ೫೬ ॥**

**ಯಾದೃಶಂ ವಪತೇ ಬೀಜಂ ತಾದೃಶಂ ಫಲಮಶ್ನುತೇ ।**
**ನ ವಾಪಯತಿ ಯಃ ಕ್ಷೇತ್ರಂ ನ ಸ ಭುಂಜತಿ ತತ್ಫಲಂ ॥ ೫೭ ॥**

---

೫೩. ಹೊಲದಲ್ಲಿ ಹಾಕಿದುದನ್ನೇ ರೈತನು ಹೇಗೆ ಅನುಭವಿಸುತ್ತಾನೋ ಹಾಗೆಯೇ ಬ್ರಾಹ್ಮಣರಲ್ಲಿ ಕೊಟ್ಟುದರ ಫಲವನ್ನು ದಾತೃವು ಅನುಭವಿಸುತ್ತಾನೆ.

೫೪. ಸತ್ತಮೇಲೆ ಇಲ್ಲೂ ಕೂಡ ನಿತ್ಯದಲ್ಲೂ ತೃಪ್ತನಾಗಿರುತ್ತಾನೆ. ಅದು ಹೊರತು ಬೇರೆ ರೀತಿಯೇ ಇಲ್ಲ. ಬ್ರಾಹ್ಮಣ, ಪಿತೃಗಳು, ದೇವತೆಗಳು, ಇವರು ಕ್ಷೇತ್ರದ ರೂಪರು. ಸಂಶಯವೇ ಇಲ್ಲ.

೫೫. ಮನುಷ್ಯನು, ಎಂತಹ ಬೀಜವನ್ನು ಬಿತ್ತುತ್ತಾನೋ ಅಂತಹ ಫಲವನ್ನೇ ಅದು ಕೊಡುತ್ತದೆ. ಸಂದೇಹವೇ ಇಲ್ಲ.

೫೬. ಕಹಿಯಿಂದ ಸಿಹಿಯೂ, ಸಿಹಿಯಿಂದ ಕಹಿಯೂ ಹುಟ್ಟುವುದಿಲ್ಲ. ಇದು ಎಲ್ಲರಿಗೂ ತಿಳಿದ ವಿಷಯವೇ ತಾನೇ.

೫೭. ಎಂತಹ ಬೀಜವನ್ನು ಹಾಕುವನೋ ಅಂತಹ ಫಲವು ಸಿಕ್ಕುತ್ತದೆ. ವ್ಯವಸಾಯಮಾಡದವನು ಫಲವನ್ನು ಹೊಂದುವುದಿಲ್ಲ.

ತದ್ವದ್ದೇವಾಶ್ಚ ವಿಪ್ರಾಶ್ಚ ಪಿತರಃ ಕ್ಷೇತ್ರರೂಪಿಣಃ ।
ದರ್ಶಯಂತಿ ಫಲಂ ರಾಜನ್ ದತ್ತಸ್ಯಾಪಿ ನ ಸಂಶಯಃ ॥ ೫೮ ॥

ಯಾದೃಶಂ ಹಿ ಕೃತಂ ಕರ್ಮ ತ್ವಯೈವ ಚ ಶುಭಾಶುಭಂ ।
ತಾದೃಶಂ ಭುಂಕ್ಷ್ವ ರಾಜೇಂದ್ರ ಯಥಾ ತೇನೈವ ಜಾಯತೇ ॥ ೫೯ ॥

ನ ಪುರಾ ದೇವವಿಪ್ರೇಭ್ಯಃ ಪಿತೃಭ್ಯಶ್ಚ ಕದಾ ತ್ವಯಾ ।
ಮೃಷ್ಟಾನ್ನಪಾನಮೇವಾಪಿ ದತ್ತಂ ಸುಮನಸಾ ತದಾ ॥ ೬೦ ॥

ಸುಭೋಜ್ಯೈರ್ಭೋಜನೈರ್ಮಿಷ್ಟೈರ್ಮಧುರೈಶ್ಚೋಷ್ಯಪೇಯಕೈಃ ।
ಸುಭಕ್ಷ್ಯೈರಾತ್ಮನಾ ಯುಕ್ತಂ ಕಸ್ಮೈ ದತ್ತಂ ನ ಚ ತ್ವಯಾ ॥ ೬೧ ॥

ಸ್ವಶರೀರಂ ತ್ವಯಾ ಪುಷ್ಟಂ ಅನ್ನೈರಮೃತಸಂಭವೈಃ ।
ಯಸ್ಮಾತ್ಕೃತಂ ಮಹಾರಾಜ ತಸ್ಮಾತ್ಕ್ಷುಧಾ ಪ್ರವರ್ತತೇ ॥ ೬೨ ॥

---

೫೮. ಅದರಂತೆಯೇ ದೇವತೆಗಳು, ಬ್ರಾಹ್ಮಣರು, ಪಿತೃಗಳು ಹೊಲದಂತಿದ್ದಾರೆ. ಕೊಟ್ಟುದರ ಫಲವನ್ನು ಅವರು ನಿಶ್ಚಯವಾಗಿ ಕೊಡುತ್ತಾರೆ. ಸಂಶಯವಿಲ್ಲಾ.

೫೯. ನೀನು ಯಾವರೀತಿಯಾದ ಶುಭಾಶುಭ ಫಲಗಳನ್ನು ಮಾಡಿದೆಯೋ ಅಂತಹದನ್ನು ಅನುಭವಿಸು. ಈರೀತಿಯಾದುದು ಹೊರತು ಬೇರೆ ರೀತಿಯದಿಲ್ಲ.

೬೦. ಪೂರ್ವದಲ್ಲಿ ದೇವ, ಪಿತೃ, ಬ್ರಾಹ್ಮಣರಿಗೆ ಮೃಷ್ಟಾನ್ನಪಾನಗಳನ್ನು ಒಂದುಸಾರಿಯೂ ನೀನು ಕೊಡಲೇ ಇಲ್ಲ.

೬೧. ಒಳ್ಳೆಯದಾಗಿರುವ ಮೃಷ್ಟಾನ್ನಗಳನ್ನು ನೀನು ಒಬ್ಬನಿಗೂ ಕೊಡಲೇ ಇಲ್ಲ.

೬೨. ನೀನು ಮಾತ್ರ ಉತ್ತಮವಾದ ಅನ್ನದಿಂದ ನಿನ್ನ ಶರೀರವನ್ನು ಪೋಷಿಸಿಕೊಂಡುದರಿಂದಲೂ ಇತರರಿಗೆ ದಾನಮಾಡದೆ ಇದ್ದುದರಿಂದಲೂ ಈಗ ಹಸಿವು ಉಂಟಾಗಿದೆ.

ಕರ್ಮೈವ ಕಾರಣಂ ರಾಜನ್ನರಾಣಾಂ ಸುಖದುಃಖಯೋಃ ।
ಜನ್ಮಮೃತ್ಯೋರ್ಮಹಾಭಾಗ ಭುಂಕ್ಷ್ವ ತತ್ಕರ್ಮಣಃ ಫಲಂ ॥ ೬೩ ॥

ಪೂರ್ವೇಽಪಿ ಚ ಮಹಾತ್ಮಾನೋ ದಿವಂ ಪ್ರಾಪ್ತಾಸ್ಸ್ವಕರ್ಮಣಾ ।
ಪುನಃ ಪ್ರಯಾತಾ ಭೂರ್ಲೋಕಂ ಕರ್ಮಣಃ ಕ್ಷಯಕಾಲತಃ ॥ ೬೪ ॥

ನಳೋ ಭಗೀರಥಶ್ಚೈವ ವಿಶ್ವಾಮಿತ್ರೋ ಯುಧಿಷ್ಠಿರಃ ।
ಕರ್ಮಣೈವ ಹಿ ಸಂಪ್ರಾಪ್ತಾಃ ಸ್ವರ್ಗಂ ರಾಜನ್ ಸ್ವಕಾಲತಃ ॥ ೬೫ ॥

ದಿಷ್ಟಂ ಹಿ ಪ್ರಾಕ್ತನಂ ಕರ್ಮ ತೇನ ದುಃಖಂ ಸುಖಂ ಲಭೇತ್ ।
ತದುಲ್ಲಂಘಯಿತುಂ ರಾಜನ್ ಕಸ್ಸಮರ್ಥೋಽಪಿ ಹೀಶ್ವರಃ ॥ ೬೬ ॥

ಅಥ ತಸ್ಮಾನ್ನೃಪಶ್ರೇಷ್ಠ ಸ್ವರ್ಗತಸ್ಯಾಪಿ ತೇಽಭವತ್ ।
ಕ್ಷುತ್ತೃಷ್ಣಾಸಂಭವೋ ವೇಗಸ್ತತೋ ದುಷ್ಟಂ ಹಿ ಕರ್ಮ ತೇ ॥ ೬೭ ॥

ಯದಿ ತೇ ಕ್ಷುತ್ಪ್ರತೀಕಾರೋ ಹ್ಯಭೀಷ್ಟೋ ನೃಪಸತ್ತಮ ।
ತದ್ಗತ್ವಾ ಭುಂಕ್ಷ್ವ ಕಾಯಂ ಸ್ವಮಾನಂದಾರಣ್ಯಸಂಸ್ಥಿತಂ ॥ ೬೮ ॥

---

೬೩. ಮನುಷ್ಯರ ಸುಖದುಃಖಗಳಿಗೆ ಕರ್ಮವೇ ಕಾರಣವು. ಹುಟ್ಟುವುದಕ್ಕೂ ಸಾಯುವುದಕ್ಕೂ ಅದೇ ಕಾರಣವು. ಅದರ ಫಲವನ್ನು ಅನುಭವಿಸು.

೬೪. ಪೂರ್ವದಲ್ಲೂ ಕೂಡ ಮಹಾಮಹಿಮರೆಲ್ಲರೂ ತಮ್ಮ ಕರ್ಮದಿಂದಲೇ ಸ್ವರ್ಗವನ್ನು ಹೊಂದಿದರು. ತಮ್ಮ ಕರ್ಮನಾಶವಾಗಲು ತಿರುಗಿ ಭೂಮಿಗೆ ಬಂದರು.

೬೫. ನಳ, ಭಗೀರಥ, ವಿಶ್ವಾಮಿತ್ರ, ಯುಧಿಷ್ಠಿರರು, ತಮ್ಮ ಕರ್ಮದಿಂದಲೇ ಸ್ವರ್ಗವನ್ನು ಹೊಂದಿದರು.

೬೬. ಪೂರ್ವದ ಕರ್ಮವೇ ಅದೃಷ್ಟವು. ಅದೇ ಸುಖದುಃಖಗಳನ್ನು ಕೊಡುತ್ತದೆ. ಅದನ್ನು ಮೀರಲು ಯಾರಿಗೂ ಸಾಧ್ಯವಿಲ್ಲ.

೬೭. ಆದ್ದರಿಂದಲೇ ಸ್ವರ್ಗಕ್ಕೆ ಬಂದ ನಿನಗೂ ಹಸಿವು ಬಾಯಾರಿಕೆಗಳ ವೇಗವು ಹೆಚ್ಚಿದೆ. ನಿನ್ನ ಕರ್ಮವು ಕೆಟ್ಟದಷ್ಟೆ.

೬೮. ನೀನು ಹಸಿವನ್ನು ಅಡಗಿಸಿಕೊಳ್ಳಬೇಕಾದರೆ ಆನಂದಕಾನನಕ್ಕೆ ಹೋಗಿ ಅಲ್ಲಿಬಿದ್ದಿರುವ ನಿನ್ನ ಶರೀರವನ್ನೇ ತಿನ್ನು. ನಿನ್ನ ಹೆಂಡತಿಯೂ ಹಾಗೆಯೇ ಅಲ್ಲಿರುವಳಿವಳ

**ತವ ಚೇಯಂ ಮಹಾರಾಜ್ಞೀ ಕ್ಷುತ್ಕ್ಷಾಮಾತೀವ ದೃಶ್ಯತೇ ।**

**॥ ಸುಬಾಹುರುವಾಚ ॥**

**ಕಸ್ಯ ದಾನೇನ ಕಿಂ ಪುಣ್ಯಂ ದ್ರವ್ಯಸ್ಯ ಮುನಿಸತ್ತಮ ।**
**ತತ್ಪ್ರಬ್ರೂಹಿ ಮಹಾಪ್ರಾಜ್ಞ ಯದಿ ತುಷ್ಟೋಽಸಿ ಸಾಂಪ್ರತಂ　　॥ ೧೯ ॥**

**॥ ವಾಮದೇವ ಉವಾಚ ॥**

**ಅನ್ನದಾನಾನ್ಮಹಾಸೌಖ್ಯಮುದಕಸ್ಯ ಮಹಾಮತೇ　　॥ ೨೦ ॥**

**ಸ್ವರ್ಗೇ ಭುಂಜಂತಿ ವೈ ಮರ್ತ್ಯಾಃ ಪೀಡ್ಯಂತೇ ನೈವ ಪಾತಕೈಃ ।**
**ಯದಾ ದಾನಂ ನ ದತ್ತಂ ತು ಭವೇದಪಿ ಚ ಮಾನವೈಃ　　॥ ೨೧ ॥**

**ಮೃತ್ಯು ಕಾಲೇತು ಸಂಪ್ರಾಪ್ತೇ ದಾನಂ ಸರ್ವಂ ದದಾತಿ ಚ ।**
**ಆದಾವೇವ ಪ್ರದಾತವ್ಯಮನ್ನಂ ಚೋದಕಸಂಯುತಂ　　॥ ೨೨ ॥**

---

ಶರೀರವನ್ನು ತಿನ್ನಲಿ, ಈಕೆಯು ಬಹಳ ಹಸಿದಿರುವಂತೆ ಕಾಣುತ್ತದೆ. ಆಗ ಹಸಿವು ಹೋಗುತ್ತದೆ.

೧೯. ಸುಬಾಹುವು ಕೇಳಿದನು :—ಎಲೈ ಮುನಿಶ್ರೇಷ್ಠನೇ, ಯಾವ ದ್ರವ್ಯವನ್ನು ದಾನಮಾಡಿದರೆ ಯಾವ ಪುಣ್ಯ ಬರುತ್ತೆಂಬುದನ್ನು ದಯವಿಟ್ಟು ಹೇಳು ಎನ್ನಲು,

೨೦. ವಾಮದೇವನು ಹೇಳಿದನು :-ಅನ್ನದಾನ ಉದಕದಾನಗಳಿಂದ ಮಹಾ ಸೌಖ್ಯ ಉಂಟಾಗುವುದು.

೨೧. ಆ ಅನ್ನವನ್ನು ಸ್ವರ್ಗದಲ್ಲಿ ಅನುಭವಿಸುತ್ತಾರೆ. ಪಾಪಗಳನ್ನು ಕಳೆದು ಕೊಳ್ಳುತ್ತಾರೆ. ದಾನವನ್ನು ಕೊಡದಿರುವ ಮನುಷ್ಯರು ಮೃತ್ಯುಕಾಲ ಬಂದಾಗ ಲಾದರೂ ಸಮಸ್ತದಾನಗಳನ್ನು ಮಾಡಬೇಕು.

೨೨-೨೪. ಮೊದಲು ಅನ್ನವನ್ನೂ, ಉದಕವನ್ನೂ ದಾನಮಾಡಬೇಕು. ಬಳಿಕ ಛತ್ರಿ, ಕೆರ, ಜಲಪಾತ್ರ, ಭೂಮಿ, ಸುವರ್ಣ, ಹಸು, ಈ ಎಂಟು ದಾನಗಳನ್ನು ಮಾಡ

ಸುಚ್ಛತ್ರೋಪಾನಹೌ ದದ್ಯಾಜ್ಜಲಪಾತ್ರಂ ತು ಶೋಭನಂ ।
ಭೂಮಿಂ ಸುಕಾಂಚನಂ ಧೇನುಮುಷ್ಟ್ವಾ ದಾನಾನಿ ಯೋಽರ್ಪಯೇತ್ ॥೭೩॥

ಸ್ವರ್ಗೇ ನ ಜಾಯತೇ ತಸ್ಯ ಕ್ಷುಧಾತೃಷ್ಣಾದಿಬಾಧನಂ ।
ಕ್ಷುಧಾ ನ ವರ್ತತೇ ರಾಜನ್ನನ್ನದಾನಾತ್ಸುತೃಪ್ತಿರ್ಮಾ ॥ ೭೪ ॥

ತೃಷ್ಣಾ ತೀವ್ರಾ ನ ಹಿ ಸ್ಯಾದ್ವೈ ತೃಪ್ತೋ ಭವತಿ ಸರ್ವದಾ ।
ಉದಕಸ್ಯ ಪ್ರದಾನೇನ ಛತ್ರದಾನೇನ ಭೂಪತೇ ॥ ೭೫ ॥

ಛಾಯಾಮಾಪ್ನೋತಿ ಸುಸ್ನಿಗ್ಧಾಂ ವಾಹನಂ ಚ ನೃಪೋತ್ತಮ ।
ಉಪಾನಹಪ್ರದಾನೇನ ಅನ್ಯದೇವಂ ವದಾಮ್ಯಹಂ ॥ ೭೬ ॥

ಭೂಮಿದಾನಾನ್ಮಹಾಭೋಗಾನ್ ಸಮೃದ್ಧಾನ್ಪ್ರಾಪ್ನುಯಾನ್ನರಃ ।
ಗೋದಾನೇನ ಮಹಾರಾಜ ರಸೈಃ ಪುಷ್ಟೋ ಭವೇತ್ಸದಾ ।
ಸುಖಭೋಗಾನ್ಸಭುಂಜಾನಃ ಸ್ವರ್ಗಲೋಕೇ ವಸೇನ್ನರಃ ॥ ೭೭ ॥

ತೃಪ್ತೋ ಭವತಿ ವೈ ದಾತಾ ಗೋದಾನೇನ ನ ಸಂಶಯಃ ।
ನೀರುಜಃ ಸುಖಸಂಪನ್ನಃ ಸಂತುಷ್ಟಶ್ಚ್ಯುತಿವರ್ಜಿತಃ ॥ ೭೮ ॥

---

ಬೇಕು. ಇವುಗಳನ್ನು ಮಾಡಿದವನು ಸ್ವರ್ಗದಲ್ಲಿ ಹಸಿವು ಬಾಯಾರಿಕೆಗಳನ್ನು ಅನುಭವಿಸುವುದಿಲ್ಲ. ಆ ಅನ್ನದಾನದಿಂದ ತೃಪ್ತಿಯುಂಟಾಗಿ ಹಸಿವೇ ಉಂಟಾಗುವುದಿಲ್ಲ.

೭೫-೭೬. ನೀರಿನ ದಾನದಿಂದ ಬಾಯಾರಿಕೆಯುಂಟಾಗುವುದಿಲ್ಲ. ಛತ್ರಿಯ ದಾನದಿಂದ ನೆರಳನ್ನು ಹೊಂದುತ್ತಾನೆ. ಕೆರವನ್ನು ದಾನಮಾಡಿದರೆ ವಾಹನವು ಸಿಕ್ಕುತ್ತದೆ. ಇನ್ನೂ ಹೇಳುತ್ತೇನೆ ಕೇಳು.

೭೭. ಭೂಮಿಯ ದಾನದಿಂದ ಬಹುಭೋಗಗಳನ್ನೂ, ಗೋದಾನದಿಂದ ರಸವನ್ನೂ ಸಹ ಹೊಂದುತ್ತಾನೆ. ಈರೀತಿ ಮಹಾಭೋಗಗಳನ್ನು ಅನುಭವಿಸುತ್ತ ಸುಖಿಯಾಗುತ್ತಾನೆ.

೭೮. ಗೋದಾನದಿಂದ ತೃಪ್ತನಾಗಿರುತ್ತಾನೆ. ರೋಗವಿಲ್ಲದೇ ಸುಖದಿಂದಲೂ, ಇರುತ್ತಾನೆ. ಸ್ವರ್ಣದಾನದಿಂದ ಒಳ್ಳೆಯ ಶರೀರಕಾಂತಿಯನ್ನು ಹೊಂದುತ್ತಾನೆ.

ಕಾಂಚನೇನ ಸುವರ್ಣಸ್ತು ಜಾಯತೇ ನಾತ್ರ ಸಂಶಯಃ ।
ಸುಶ್ರೀರ್ಮಾ ರೂಪವಾಂಸ್ತ್ಯಾಗೀ ರತ್ನದಾನಾದ್ಭವೇನ್ನರಃ ॥ ೭೯ ॥

ಮೃತ್ಯುಕಾಲೇ ತು ಸಂಪ್ರಾಪ್ತೇ ತಿಲದಾನಂ ಪ್ರಯಚ್ಛತಿ ।
ಸರ್ವಭೋಗಪತಿರ್ಭೂತ್ವಾ ವಿಷ್ಣುಲೋಕಂ ಸ ಗಚ್ಛತಿ ॥ ೮೦ ॥

ಏವಂ ದಾನವಿಶೇಷೇಣ ಪ್ರಾಪ್ಯತೇ ಪರಮಂ ಸುಖಂ ।
ಗೋದಾನಂ ಭೂಮಿದಾನಂ ಚ ಅನ್ನಂ ಚೈವೋದಕಂ ತ್ವಯಾ ॥ ೮೧ ॥

ಜೀವಮಾನೇನ ರಾಜೇಂದ್ರ ನ ದತ್ತಂ ಬ್ರಾಹ್ಮಣಾಯ ವೈ ।
ಮೃತ್ಯುಕಾಲೇ ಚ ನೋ ದತ್ತಂ ತಸ್ಮಾತ್ ಕ್ಷುತ್ತೇ ಪ್ರವರ್ತತೇ ॥ ೮೨ ॥

ಏತತ್ತೇ ಕಾರಣಂ ಪ್ರೋಕ್ತಂ ಜಾತಂ ಕರ್ಮವಶಾನುಗಂ ।
ಯಾದೃಶಂ ಹಿ ಕೃತಂ ಕರ್ಮ ತಾದೃಶಂ ಪರಿಭುಜ್ಯತೇ ॥ ೮೩ ॥

॥ ಸುಬಾಹುರುವಾಚ ॥

ಕಥಂ ಕ್ಷುಧಾ ಪ್ರಶಾಂತಿಂ ಮೇ ಪ್ರಯಾತಿ ಮುನಿಸತ್ತಮ ।
ಅನಯಾ ಶೋಷಿತೋ ದೇಹೋ ಹ್ಯತೀವ ಪರಿದೂಯತೇ ॥ ೮೪ ॥

---

೭೯-೮೦. ರತ್ನದಾನದಿಂದ ಶ್ರೀಮಂತನೂ, ರೂಪವಂತನೂ, ತ್ಯಾಗಿಯೂ ಆಗುತ್ತಾನೆ. ಸಾವು ಸಮೀಪಿಸಿದಾಗ ಎಳ್ಳು ದಾನಮಾಡಿದರೆ ಸರ್ವ ಭೋಗಗಳಿಗೂ, ಪತಿಯಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

೮೧-೮೨. ಈರೀತಿ ದಾನಗಳಿಂದ ಬಹು ಸುಖವುಂಟಾಗುತ್ತದೆ. ಗೋದಾನ, ಭೂಮಿದಾನ, ಅನ್ನದಾನ, ಉದಕದಾನ, ಇವುಗಳನ್ನು ಜೀವಿಸಿರುವಾಗ ನೀನು ಮಾಡಲೇ ಇಲ್ಲ. ಸಾಯುವಾಗಲೂ ಕೂಡ ಮಾಡಲೇ ಇಲ್ಲ. ಆದ್ದರಿಂದಲೇ ಹಸಿವು ಬಾಯಾರಿಕೆಗಳು ನಿನ್ನನ್ನು ಬಾಧಿಸುತ್ತವೆ.

೮೩. ಕರ್ಮಾನುಸಾರವಾದ ಈ ನಿನ್ನ ಹಸಿವು ಬಾಯಾರಿಕೆಗೆ ಕಾರಣಗಳನ್ನು ಹೇಳಿದೆನು. ಯಾವ ರೀತಿಯಾದ ಕರ್ಮವನ್ನು ಮಾಡಿದೆಯೋ ಅಂತಹ ಕರ್ಮವನ್ನು ಅನುಭವಿಸುತ್ತೀಯೆ ಎಂದನು.

೮೪. ಸುಬಾಹುವು ಹೇಳಿದನು :—ಎಲೈ ಋಷಿಯೇ, ನನ್ನ ಈ ಹಸಿವು ಹೇಗೆ ಶಾಂತವಾಗುತ್ತದೆ? ಇದರಿಂದ ದೇಹವು ಶೋಷಿತವಾಗಿ ತೊಂದರೆಪಡುತ್ತಿದೆ.

ಅತಸ್ತತ್ತೃಪ್ತಯೇ ದ್ವಿಜಶ್ರೇಷ್ಠ ಪ್ರಾಯಶ್ಚಿತ್ತಂ ವದಸ್ವ ಮೇ ।
ಕರ್ಮಣಶ್ಚಾಸ್ಯ ಘೋರಸ್ಯ ಯಥಾ ಶಾಂತಿರ್ಭವೇನ್ಮಮ ॥ ೮೫ ॥

॥ ವಾಮುದೇವ ಉವಾಚ ॥

ಪ್ರಾಯಶ್ಚಿತಂ ನ ಚೈವಾಸ್ತಿ ಋತೇ ಭೋಗಾನ್ನರೋತ್ತಮ ।
ಕರ್ಮಣಶ್ಚ ಫಲಂ ಸರ್ವಂ ತತ್ತ್ವಂ ಸ್ವಸ್ಯ ಪ್ರಭುಂಕ್ಷ್ವ ಹಿ ॥ ೮೬ ॥

ಯತ್ರ ತೇ ಪತಿತಃ ಕಾಯಃ ಪ್ರಿಯಾಯಾಶ್ಚೈವ ಭೂಪತೇ ।
ಯುವಾಭ್ಯಾಂ ಹಿ ಪ್ರಗನ್ತವ್ಯಂ ತತ್ರ ಸ್ಮರಣಪೂರ್ವಕಂ ॥ ೮೭ ॥

ಉಭಾಭ್ಯಾಮಪಿ ಭೋಕ್ತವ್ಯಃ ಕಾಯುಶ್ಚಾಕ್ಷಯ ಏವ ಸಃ ।
ಸ್ವಂ ಸ್ವಂ ರಾಜನ್ನ ಸಂದೇಹಸ್ತ್ವಯಾ ವೈ ಪ್ರಿಯಯಾ ಸಹ ॥ ೮೮ ॥

॥ ಸುಬಾಹುರುವಾಚ ॥

ಕಿಯತ್ಕಾಲಂ ಪ್ರಭೋಕ್ತವ್ಯಂ ಮಯೈವಂ ಪ್ರಿಯಯಾ ಸಹ ।
ತದಾದಿಶ ಮಹಾಭಾಗ ಪ್ರಮಾಣಂ ತದ್ವಚೋ ಮಮ ॥ ೮೯ ॥

---

೮೫. ಆದ್ದರಿಂದ ನನಗೆ ತೃಪ್ತಿಯಾಗುವಂತೆ ಪ್ರಾಯಶ್ಚಿತ್ತವನ್ನು ಹೇಳು. ಈ ದುಷ್ಕರ್ಮದ ಶಾಂತಿಯು ಉಂಟಾಗುವಂತೆ ಮಾಡು ಎಂದು ಕೇಳಿದನು.

೮೬. ವಾಮುದೇವನು ಹೇಳಿದನು:—ಮಾಡಿದ ಕರ್ಮದ ಫಲವನ್ನು ಭೋಗಿಸುವುದರಿಂದಲ್ಲದೇ ಬೇರೆ ಪ್ರಾಯಶ್ಚಿತ್ತವೇ ಇಲ್ಲ. ಆದುದರಿಂದ ನಿನ್ನ ಕರ್ಮದ ಫಲವನ್ನು ನೀನು ಅನುಭವಿಸಿಯೇ ತೀರಬೇಕು.

೮೭. ನಿನ್ನ ಮತ್ತು ನಿನ್ನ ಹೆಂಡತಿಯ ದೇಹವು ಬಿದ್ದಿರುವ ಜಾಗವನ್ನು ಸ್ಮರಿಸಿಕೊಂಡು ನೀವಿಬ್ಬರೂ ಅಲ್ಲಿಗೆ ಹೋಗಬೇಕು.

೮೮. ನೀವಿಬ್ಬರೂ ನಿಮ್ಮನಿಮ್ಮ ದೇಹವನ್ನು ತಿನ್ನಬೇಕು. ಆ ದೇಹವು ಅಕ್ಷಯವಾಗುತ್ತದೆ. ನೀನು ಹೆಂಡತಿಯೊಡನೆ ಅಲ್ಲಿಗೆ ಹೋಗು.

೮೯. ಸುಬಾಹುವು ಹೇಳಿದನು:—ನಾನೂ ನನ್ನ ಹೆಂಡತಿಯೂ ಎಷ್ಟುಕಾಲದವರೆಗೆ ಆ ದೇಹವನ್ನು ತಿನ್ನುತ್ತಿರಬೇಕು? ಅದನ್ನು ಅಪ್ಪಣೆಮಾಡು. ನಿನ್ನ ಮಾತೇ ನನಗೆ ಪ್ರಮಾಣವು.

॥ ವಾಸುದೇವ ಉವಾಚ ॥

ವಾಸುದೇವಾಭಿದಂ ಸ್ತೋತ್ರಂ ಮಹಾಪಾತಕನಾಶನಂ ।
ಯದಾ ತ್ವಂ ಶ್ರೋಷ್ಯಸೇ ರಾಜಂಸ್ತದಾ ಮೋಕ್ಷಂ ಪ್ರಯಾಸ್ಯಸಿ ।
ಏತತ್ತೇ ಸರ್ವಮಾಖ್ಯಾತಂ ಸ್ವೇಚ್ಛಯಾ ಗಚ್ಛ ತತ್ಕುರು ॥ ೯೦ ॥

ಏವಂ ಶ್ರುತ್ವಾ ತತೋ ರಾಜಾ ಭಾರ್ಯಯಾ ಸಹ ವೈ ತದಾ ।
ಗತ್ವಾ ತತ್ರ ಶರೀರಂ ಸ್ವಂ ಭುಂಕ್ತೇ ವೈ ಪ್ರಿಯಯಾ ಸಹ ॥ ೯೧ ॥

ನಿತ್ಯಮೇವ ಮಹಾಪ್ರಾಜ್ಞ ತದ್ವತ್ಪೂರ್ಣಂ ಭವೇದ್ವಪುಃ ।
ನಿತ್ಯಂ ಪ್ರಭುಂಕ್ತೇ ವೈ ರಾಜಾ ರಾಜ್ಞೀ ಚಾಸ್ಯ ಕ್ಷುಧಾನ್ವಿತಾ ॥ ೯೨ ॥

ಯಥಾ ಯಥಾ ಸ ರಾಜಾಪಿ ಭುಂಕ್ತೇ ವೈ ಸ್ವಕಳೇಬರಂ ।
ಹಸಂತಿ ಚ ತದಾ ನಾರ್ಯಸ್ತಯೋರ್ಭಾವಂ ವದಾಮ್ಯಹಂ ॥ ೯೩ ॥

ದೇವೈಸ್ಸಾರ್ಧಂ ತತಶ್ಶ್ರುತ್ವಾ ಚರಿತಂ ತಸ್ಯ ಭೂಪತೇಃ ।
ಹಾಸ್ಯಂ ಚ ಕುರುತೇ ಶಕ್ರಸ್ತಸ್ಯ ರಾಜ್ಞಃ ಸುರೇಶ್ವರಃ ॥ ೯೪ ॥

---

೯೦. ವಾಸುದೇವನು ಹೇಳಿದನು :—ನೀನು ಪಾಪನಾಶಕವಾದ ವಾಸುದೇವ ವೆಂಬ ಸ್ತೋತ್ರವನ್ನು ಕೇಳಿದಾಗ ಈ ಕಷ್ಟದಿಂದ ಬಿಡುಗಡೆಹೊಂದಿ ಮೋಕ್ಷವನ್ನು ಹೊಂದುತ್ತೀಯೆ. ಎಲ್ಲವನ್ನೂ ಹೇಳಿದ್ದೇನೆ ಅದರಂತೆಯೇ ಮಾಡು. ನೀನು ಹೋಗಬಹುದು ಎಂದನು.

೯೧. ಇದನ್ನು ಕೇಳಿ ರಾಜನು ಹೆಂಡತಿಯೊಡನೆ ಅಲ್ಲಿಗೆ ಹೋಗಿ ಆ ತಮ್ಮ ತಮ್ಮ ಪೂರ್ವಜನ್ಮದ ಶರೀರವನ್ನು ತಿನ್ನುತ್ತಿರುತ್ತಾರೆ.

೯೨. ರಾಜನೂ, ರಾಣಿಯೂ ನಿತ್ಯವೂ ತಮ್ಮತಮ್ಮ ಶರೀರವನ್ನು ಹಸಿವಿನಿಂದ ಎಷ್ಟೆಷ್ಟು ತಿಂದರೂ ಆ ಶರೀರವು ಹಾಗೆಹಾಗೆ ತುಂಬುತ್ತಲೇ ಇರುತ್ತೆ.

೯೩. ರಾಜನು ತಿನ್ನುತ್ತಿದ್ದಂತೆಲ್ಲಾ, ಆ ರಾಜ ರಾಣಿಯರನ್ನು ನೋಡಿ ಹೆಂಗಸರು ನಗುತ್ತಿದ್ದರಲ್ಲ, ಅವರ ವಿಷಯವನ್ನು ಹೇಳುತ್ತೇನೆ ಕೇಳು.

೯೪. ಈ ಸುಬಾಹುವಿನ ಚರಿತ್ರೆಯನ್ನು ಕೇಳಿ ಇಂದ್ರನು ದೇವತೆಗಳೊಡನೆ ಆ ರಾಜನನ್ನೇ ಹಾಸ್ಯಮಾಡುತ್ತಾನೆ.

ತತೋ ವರ್ಷಶತಾಂತೇ ತು ವಾಮದೇವಂ ಮಹಾಮುನಿಂ ।
ಸ್ಮೃತ್ವಾ ಸ ಗರ್ಹಯಾಮಾಸ ಆತ್ಮಾನಂ ಪ್ರತಿ ಸುವ್ರತ ॥ ೯೫ ॥

ನ ದತ್ತಂ ಪಿತೃದೇವೇಭ್ಯೋ ಬ್ರಾಹ್ಮಣೇಭ್ಯೋ ಕದಾ ಮಯಾ ।
ನ ದ_ತ್ತಮತಿಥಿಭ್ಯೋ ಹಿ ತದಿತ್ಥಮಿಹ ಭುಜ್ಯತೇ ॥ ೯೬ ॥

ದೀನೇಭ್ಯೋಽಪಿ ನ ದತ್ತಂ ಮೇ ಕೃಪಯಾ ವಾತುರಾಯ ಚ ।
ಏವಂ ಸ ಭುಂಕ್ತೇ ವೈ ಮಾಂಸಂ ಗರ್ಹಯನ್ ಸ್ವೀಯಕರ್ಮ ತತ್ ॥ ೯೭ ॥

ಏವಂ ಸ್ವಮಾಂಸಂ ಭುಂಜಾನಂ ಸುಬಾಹುಂ ಪ್ರಿಯಯಾ ಸಹ ।
ಹಸೇತೇ ಚ ತದಾ ದೃಷ್ಟ್ವಾ ಪ್ರಜ್ಞಾ ಶ್ರದ್ಧಾ ಚ ದ್ವೇ ಸ್ತ್ರಿಯೌ ॥ ೯೮ ॥

ತಸ್ಯ ಕರ್ಮವಿಪಾಕಸ್ಯ ಶುಭಾತ್ಮಾ ಹಸತೇ ನೃಪ ।
ಮಮ ಸಂಗಪ್ರಸಂಗೇನ ನ ದತ್ತಂ ಪಾಪಚೇತಸಾ ॥ ೯೯ ॥

---

೯೫. ಒಂದುನೂರು ವರ್ಷಗಳ ತರುವಾಯ ವಾಮದೇವಋಷಿಯನ್ನು ಜ್ಞಾಪಿಸಿಕೊಂಡನು. ತನ್ನ ಈ ಕೆಲಸವನ್ನು ನೋಡಿಕೊಂಡು ತನ್ನನ್ನು ತಿರಸ್ಕರಿಸಿಕೊಂಡನು. ಎಂದರೆ ನಾಚಿಕೊಂಡನು.

೯೬. ನಾನು ಬ್ರಾಹ್ಮಣರಿಗೂ ಪಿತೃಗಳಿಗೂ ದೇವತೆಗಳಿಗೂ ಯಾವಾಗಲೂ ದಾನಮಾಡಲೇ ಇಲ್ಲ. ಆ ಕರ್ಮವನ್ನು ಈಗ ಅನುಭವಿಸುತ್ತಿರುತ್ತೇನೆ.

೯೭. ಬಡವರಿಗಾಗಲೀ ರೋಗಿಗಳಿಗಾಗಲೀ ನಾನು ಯಾರಿಗೂ ದಾನ ಮಾಡಲೇ ಇಲ್ಲ. ಹೀಗೆಂದು ದುಃಖಪಡುತ್ತಾ ತನ್ನ ಕೆಲಸವನ್ನು ತಿರಸ್ಕರಿಸಿಕೊಳ್ಳುತ್ತಾ ಇರುತ್ತಾನೆ.

೯೮. ಹೆಂಡತಿಯೊಡನೆ ಮಾಂಸ ತಿನ್ನುತ್ತಿರುವ ಆ ರಾಜನನ್ನು ನೋಡಿ ಪ್ರಜ್ಞೆ, ಶ್ರದ್ಧಾ ಎಂಬ ಸ್ತ್ರೀಯರು ಹಾಸ್ಯಮಾಡುತ್ತಾ ನಗುತ್ತಾರೆ.

೯೯. ಶುಭಾತ್ಮನು ಅವನ ಕರ್ಮವಿಪಾಕವನ್ನು ನೋಡಿ ಇವರು ನನ್ನ ಸಹವಾಸಮಾಡಿದರೂ ಪಾಪಬುದ್ಧಿಯಿಂದ ದಾನ ಕೊಡಲಿಲ್ಲವೆಂದು ನಗುತ್ತಾನೆ.

ಪ್ರಜ್ಞಾ ಚ ವಚನಸ್ತ್ವೈಸ್ತು ರಾಜಾನಂ ಹಸತೇ ಪುನಃ ।
ಕ್ವ ಗತೋಽಸೌ ಮಹಾಮೋಹೋ ಯೇನ ತ್ವಂ ಮೋಹಿತೋ ನೃಪ ॥ ೧೦೦ ॥

ಲೋಭೇನ ಮೋಹಯುಕ್ತೇನ ತಮೋಗರ್ತೇ ನಿಪಾತಿತಃ ।
ತತ್ರಾಪತಿತ್ವಾ ಸದ್ಯೈವ ಪತಿತೋ ದುಃಖಸಂಕಟೇ ॥ ೧೦೧ ॥

ದಾನಮಾರ್ಗಂ ಪರಿತ್ಯಜ್ಯ ಲೋಭಮಾರ್ಗಂ ಗತೋ ನೃಪ ।
ಭಾರ್ಯಯಾ ಸಹ ಭುಂಕ್ಷ್ವ ತ್ವಂ ವ್ಯಾಪಿತಃ ಕ್ಷುಧಯಾ ಭೃಶಂ ॥ ೧೦೨ ॥

ಏವಂ ತಂ ಹಸತೇ ಪ್ರಜ್ಞಾ ಸುಬಾಹುಂ ಪ್ರಿಯಯಾನ್ವಿತಂ ।
ಏತದ್ವೈ ಕಾರಣಂ ಪ್ರೋಕ್ತಂ ತಯೋರ್ಹಾಸಸ್ಯ ಪುತ್ರಕ ॥ ೧೦೩ ॥

ಭಕ್ಷಮಾಣಸ್ಯ ಭೂಪಸ್ಯ ದೇಹಂ ಸ್ವಂ ದುಃಖಿತೇ ತದಾ ।
ಊಚತುರ್ದೇಹಿ ದೇಹೀತಿ ಕ್ಷುಧಾ ತೃಷ್ಣಾ ಚ ತೇ ಪರೇ ॥ ೧೦೪ ॥

---

೧೦೦. ಆಯಾ ಮಾತಿನಿಂದ ನೀನು ಮೋಹಗೊಳ್ಳುವಂತೆ ಮಾಡಿದ್ದ ಆ ಮಹಾಮೋಹನು ಎಲ್ಲಿಹೋದನೆಂದು ಪ್ರಜ್ಞೆಯು ನಗುತ್ತಾಳೆ.

೧೦೧. ಮೋಹದೊಡಗೂಡಿದ ಲೋಭದಿಂದ ಅಜ್ಞಾನವೆಂಬ ಹಳ್ಳದಲ್ಲಿ ಕೆಡವಲ್ಪಟ್ಟಿದ್ದೀಯೆ. ಆಗ ಅಲ್ಲಿ ಅವನ ಬಲೆಗೆ ಚೆನ್ನಾಗಿಬಿದ್ದು ಈಗ ಸಂಕಟದಲ್ಲಿ ಬಿದ್ದಿದ್ದೀಯೆ.

೧೦೨. ಆಗ ದಾನಮಾರ್ಗವನ್ನು ಬಿಟ್ಟು ಲೋಭಮಾರ್ಗವನ್ನು ಹೊಂದಿದೆ. ಈಗ ಹೆಂಡತಿಯೊಡನೆ ಹಸಿವಿನಿಂದ ವ್ಯಾಪಿತನಾಗಿ ನಿನ್ನ ಮಾಂಸವನ್ನು ನೀನೆ ತಿನ್ನು.

೧೦೩. ಹೀಗೆಂದು ಪ್ರಜ್ಞೆಯು ಹೆಂಡತಿಯೊಡನೆ ಕೂಡಿದ ಆ ರಾಜನನ್ನು ಹಾಸ್ಯಮಾಡುತ್ತಾಳೆ. ಈರೀತಿ ಅವರ ಹಾಸ್ಯಕ್ಕೆ ಕಾರಣವನ್ನು ಹೇಳಿದೆನು.

೧೦೪. ತಿನ್ನುತ್ತಿರುವ ರಾಜನನ್ನು ನೋಡಿ ಕ್ಷುಧೆ, ತೃಷ್ಣೆ ಎಂಬ ಹೆಂಗಸರು ಕೊಡುಕೊಡು ಎಂಬುದಾಗಿ ಕೇಳುತ್ತಿರುವರು.

ಕ್ಷುಧಾ ತೃಷ್ಣಾ ಮಹಾಪ್ರಾಜ್ಞ ಭೀಮರೂಪೇ ಭಯಾನಕೇ ।
ಪಯಸಾ ಮಿಶ್ರಿತಂ ಭಕ್ತಂ ಯಾಚೇತೇ ನೃಪತೀಶ್ವರಂ ॥ ೧೦೫ ॥

ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ।
ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ತದ್ವದಸ್ವ ಮಹಾಮತೇ ॥ ೧೦೬ ॥

॥ ವಿಜ್ಜ್ವಲ ಉವಾಚ ॥

ವಾಸುದೇವಾಭಿಧಾನಂ ಚ ಸ್ತೋತ್ರಂ ಕಥಯ ಮೇ ಪಿತಃ ।
ಯೇನ ಮೋಕ್ಷಂ ವ್ರಜೇದಾಶು ತದ್ವಿಷ್ಣೋಃ ಪರಮಂ ಪದಂ ॥ ೧೦೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನೋಪಾಖ್ಯಾನೇ ಸಪ್ತನವತಿತಮೋಽಧ್ಯಾಯಃ



---

೧೦೫. ಭಯಂಕರರಾದ ಕ್ಷುಧೆ, ತೃಷ್ಣೆಯರು ಒಳ್ಳೆಯ ಮೃಷ್ಟಾನ್ನವನ್ನೇ ಆ ರಾಜನನ್ನು ಕೇಳುತ್ತಾರೆ.

೧೦೬. ನೀನು ಕೇಳಿದ ಇವೆಲ್ಲವನ್ನೂ ಹೇಳಿದೆ. ಇನ್ನೇನುಬೇಕು ಕೇಳು ಹೇಳುತ್ತೇನೆ.

೧೦೭. ವಿಜ್ಜ್ವಲನು ಹೇಳಿದನು:—ಎಲೈ ತಂದೆಯೇ, ವಾಸುದೇವಾಭಿದ ಸ್ತೋತ್ರವನ್ನು ನನಗೆ ಹೇಳು. ಅದರಿಂದ ವಿಷ್ಣುವಿನ ಸ್ಥಾನವನ್ನು ಜಾಗ್ರತೆ ಹೊಂದುತ್ತೇನಷ್ಟೆ ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಾನವತಿತಮೋಽಧ್ಯಾಯಃ

॥ ವಿಷ್ಣುರುವಾಚ ॥

ಏವಮುಕ್ತೇ ಶುಭೇ ವಾಕ್ಯೇ ವಿಜ್ವಲೇನ ಮಹಾತ್ಮನಾ ।
ಕುಂಜಲೋ ವದತಾಂ ಶ್ರೇಷ್ಠಃ ಸ್ತೋತ್ರಂ ಪುಣ್ಯಮುಪಾದಿಶತ್ ॥ ೧ ॥

ಧ್ಯಾತ್ವಾ ನತ್ವಾ ಹಷೀಕೇಶಂ ಸರ್ವಕ್ಲೇಶವಿನಾಶನಂ ।
ಸರ್ವಶ್ರೇಯಃಪ್ರದಾತಾರಂ ಸರ್ವದುಃಖವಿನಾಶನಂ ॥ ೨ ॥

ಮೋಕ್ಷದ್ವಾರಂ ಸುಖೋಪೇತಂ ಶಾನ್ತಿದಂ ಪುಷ್ಟಿವರ್ಧನಂ ।
ಸರ್ವಕಾಮಪ್ರದಾತಾರಂ ಜ್ಞಾನದಂ ಜ್ಞಾನವರ್ಧನಂ ॥ ೩ ॥

---

## ತೊಂಭತ್ತೆಂಟನೆಯ ಅಧ್ಯಾಯವು

೧. ವಿಷ್ಣುವು ಹೇಳಿದನು :—ಮಹಾತ್ಮನಾದ ವಿಜ್ವಲನು ಹೀಗೆ ಕೇಳುತ್ತಲೂ ಕುಂಜಲನು ಪುಣ್ಯತಮವಾದ ಆ ಸ್ತೋತ್ರವನ್ನು ಉಪದೇಶಮಾಡಿದನು.

೨-೩. ಆ ಕುಂಜಲನು ವಿಷ್ಣುವನ್ನು ಧ್ಯಾನಿಸಿ, ನಮಸ್ಕರಿಸಿ, ಸರ್ವಶ್ರೇಯಸ್ಸನ್ನು ಕೊಡುವ, ಸಮಸ್ತ ದುಃಖಗಳನ್ನೂ ನಾಶಮಾಡುವ, ಮೋಕ್ಷಕ್ಕೆ ಬಾಗಿಲಾದ, ಸುಖದಿಂದ ಕೂಡಿದ, ಶಾಂತಿ ಪುಷ್ಟಿಗಳನ್ನು ಕೊಡುವ, ಸರ್ವ ಇಷ್ಟಗಳನ್ನೂ ಕೊಡುವ ಜ್ಞಾನವನ್ನು ಕೊಟ್ಟು ವೃದ್ಧಿಪಡಿಸುವ, ವಾಸುದೇವನ ಸ್ತೋತ್ರವನ್ನು ವಿಜ್ವಲಸಿಗೆ ಹೇಳಿದನು.

ವಾಸುದೇವಸ್ಯ ಯತ್ಸ್ತೋತ್ರಂ ವಿಜ್ವಲಾಯ ಪ್ರಕಾಶಿತಂ ।
ವಾಸುದೇವಾಭಿಧಾನಂ ಚಾಪ್ರಮೇಯಂ ಪುಣ್ಯವರ್ಧನಂ ।
ಸೋಽವಗಮ್ಯ ಪಿತುಃ ಸರ್ವಂ ವಿಜ್ವಲಃ ಪಕ್ಷಿಣಾಂ ವರಃ ॥ ೪ ॥

ತತ್ರ ಗಂತುಂ ಪ್ರಚಕ್ರಾಮ ಪಿತುಃ ಪೃಷ್ಟ್ವಾ ತದಾ ನೃಪ ।
ಏವಂ ಗಂತುಂ ಕೃತಮತಿಂ ವಿಜ್ವಲಂ ಜ್ಞಾನಪಾರಗಂ ।
ಉವಾಚ ಪುತ್ರಂ ಧರ್ಮಾತ್ಮಾ ಉಪಕಾರಸಮುದ್ಯತಂ ॥ ೫ ॥

॥ ಕುಂಜಲ ಉವಾಚ ॥

ಪುತ್ರ ತಸ್ಯ ಮಹಜ್ಞಾನೇ ಪಾತಕಂ ಚಾಪಿ ಭೂಪತೇಃ ।
ಇತೋ ಗತ್ವಾ ಪಠಸ್ವ ತ್ವಂ ಸುಬಾಹೋಶ್ಚೋಪಶೃಣ್ವತಃ ॥ ೬ ॥

ಯಥಾ ಯಥಾ ಶ್ರೋಷ್ಯತಿ ಸ್ತೋತ್ರಮುತ್ತಮಂ ।
ತಥಾ ತಥಾ ಜ್ಞಾನಮಯೋ ಭವಿಷ್ಯತಿ ॥
ಶ್ರೀವಾಸುದೇವಸ್ಯ ನ ಸಂಶಯೋ ವೈ ।
ತಸ್ಯ ಪ್ರಸಾದಾಚ್ಚ ಶಿವಂ ಮಯೋಕ್ತಂ ॥ ೭ ॥

---

೪. ವಿಜ್ಜ್ವಲನು ತಂದೆಯು ಹೇಳಿದ ಸ್ತೋತ್ರವನ್ನು ಕೇಳಿ ತಿಳಿದು ಕೊಂಡನು.

೫. ವಿಜ್ಜ್ವಲನು ಆ ರಾಜನಿಗೆ ಹೇಳಬೇಕೆಂದು ಹೊರಟುದನ್ನು ನೋಡಿ ತಂದೆಯು ಆ ಉಪಕಾರಿಯಾದ ಮಗನನ್ನು ಕುರಿತು ಹೇಳಿತು.

೬. ಕುಂಜಲನು ಹೇಳಿದನು :—ಎಲೈ ಮಗನೇ, ಅವನಿಗೆ ಪಾಪವು ಇನ್ನೂ ಹೆಚ್ಚಾಗಿಯೇ ಇರುವಂತಿದೆ. ಇಲ್ಲಿಂದ ನೀನು ಹೋಗಿ ಸುಬಾಹುವು ಕೇಳುವಂತೆ ಈ ಸ್ತೋತ್ರವನ್ನು ಹೇಳು.

೭. ನೀನು ಹೇಳುವ ಸ್ತೋತ್ರವನ್ನು ಕೇಳುತ್ತ ಬಂದಹಾಗೆಲ್ಲಾ ಅವನಿಗೆ ಜ್ಞಾನವು ಉಂಟಾಗುತ್ತದೆ. ಶ್ರೀ ವಾಸುದೇವನ ಸ್ತೋತ್ರದಿಂದ ಹಾಗಾಗಿ ಅವನ ಪ್ರಸಾದದಿಂದ ಒಳ್ಳೆಯದೂ ಆಗುತ್ತದೆ. ಎಂದನು.

**ಅಥಾಮಂತ್ರ್ಯ ಗುರುಂ ತಸ್ಮಾದುಡ್ಡೀಯ ಲಘುವಿಕ್ರಮಃ ।**
**ಆನಂದಕಾನನಂ ಪುಣ್ಯಂ ಸಂಪ್ರಾಪ್ತೋ ವಿಜ್ಜ್ವಲಸ್ತದಾ ॥ ೮ ॥**

**ವೃಕ್ಷಚ್ಛಾಯಾಂ ಸಮಾಶ್ರಿತ್ಯ ಉಪವಿಷ್ಟೋ ಮುದಾನ್ವಿತಃ ।**
**ಪ್ರೇಕ್ಷಮಾಣಃ ಸ ರಾಜಾನಂ ವಿಮಾನೇನಾಗತಂ ಪುನಃ ॥ ೯ ॥**

**ಏಷ್ಯತ್ಯಸೌ ಕದಾ ರಾಜಾ ಸುಬಾಹುಃ ಪ್ರಿಯಯಾ ಸಹ ।**
**ಪಾತಕಾನ್ಮೋಚಯಿಷ್ಯಾಮಿ ಸ್ತೋತ್ರೇಣಾನೇನ ವೈ ಕದಾ ॥ ೧೦ ॥**

**ತಾವದ್ವಿಮಾನಃ ಸಂಪ್ರಾಪ್ತಃ ಕಿಂಕಿಣೀಜಾಲಮಂಡಿತಃ ।**
**ಗಂಧರ್ವವರಸಂಘುಷ್ಟಸ್ತ್ವಪ್ಸರೋಭಿಃ ಸಮನ್ವಿತಃ ॥ ೧೧ ॥**

**ಸರ್ವಕಾಮಸಮೃದ್ಧಿಸ್ತು ಅನ್ನೋದಕವಿವರ್ಜಿತಃ ।**
**ತಸ್ಮಿನ್ಯಾನೇ ಸ್ಥಿತೋ ರಾಜಾ ಸುಬಾಹುಃ ಪ್ರಿಯಯಾ ಸಹ ॥ ೧೨ ॥**

---

೮. ತಂದೆಗೆ ಹೋಗಿಬರುತ್ತೇನೆಂದು ಹೇಳಿ, ಅಲ್ಲಿಂದ ಜಾಗ್ರತೆಯಾಗಿ ಹೊರಟು ವಿಜ್ವಲನು ಆ ಪುಣ್ಯವಾದ ಆನಂದಕಾನನಕ್ಕೆ ಬಂದನು.

೯. ಒಂದು ಮರದ ನೆರಳಿನಲ್ಲಿ ಕುಳಿತು ಸಂತೋಷದಿಂದ ವಿಮಾನದಿಂದ ಬರುತ್ತಿರುವ ಆ ರಾಜನನ್ನು ನೋಡುತ್ತಿದ್ದಿತು.

೧೦. ಈ ರಾಜನಾದ ಸುಬಾಹುವು ಹೆಂಡತಿಯೊಡನೆ ಯಾವಾಗ ಬಂದಾನು ? ಯಾವಾಗ ಈ ಸ್ತೋತ್ರವನ್ನು ಹೇಳಿ ಅವನನ್ನು ಪಾಪದಿಂದ ಮುಕ್ತನನ್ನಾಗಿ ಮಾಡಿಯೇನು ಎಂದು ನೋಡುತ್ತಿದ್ದಿತು.

೧೧. ಅಷ್ಟರೊಳಗೆ ಗೆಜ್ಜೆಗಳ ಸರದಿಂದ ಸದ್ದುಮಾಡುತ್ತಿರುವ ಗಂಧರ್ವರಿಂದಲೂ, ಅಪ್ಸರರಿಂದಲೂ, ಕೂಡಿದ ವಿಮಾನವು ಬಂದಿತು.

೧೨. ಅದು ಎಲ್ಲಾ ಭೋಗಗಳಿಂದಲೂ ತುಂಬಿದೆ. ಆದರೆ ಅನ್ನನೀರುಗಳು ಮಾತ್ರವಿಲ್ಲ. ಅದರಲ್ಲಿ ಈ ರಾಜನು ಹೆಂಡತಿಯೊಡನೆ ಕುಳಿತಿದ್ದನು.

ಸಮುತ್ತೀರ್ಣೋ ವಿಮಾನಾತ್ತು ಸರಸಸ್ತಸ್ಯ ಸಂನಿಧೌ ।
ಶಸ್ತ್ರಮಾದಾಯ ತೀಕ್ಷ್ಣಂ ತು ಯಾವತ್ಕೃಂತತಿ ತಚ್ಛವಂ ॥ ೧೩ ॥

ತಾವದ್ಧಿ ವಿಜ್ವಲೇನಾಪಿ ಸಮಾಧಾನಂ ಕೃತಂ ತದಾ ।
ಭೋ ಭೋಃ ಪುರುಷಶಾರ್ದೂಲ ದೇವೋಪಮ ಭವಾನಿದಂ ॥ ೧೪ ॥

ಕರೋತಿ ನಿರ್ಘೃಣಂ ಕರ್ಮ ನೃಶಂಸೈರ್ನ ಚ ಶಕ್ಯತೇ ।
ಕರ್ತುಂ ತತಸ್ತು ಪೃಚ್ಛೇ ತ್ವಾಂ ಕೋಽಯಂ ವಿಧಿವಿಪರ್ಯಯಃ ॥ ೧೫ ॥

ದುಷ್ಕೃತಂ ಸಾಹಸಂ ಕರ್ಮ ನಿಂದ್ಯಂ ಲೋಕೇಷು ಸರ್ವದಾ ।
ವೇದಾಚಾರವಿಹೀನಂ ತು ಕಸ್ಮಾತ್ತ್ವಂ ಪ್ರಾರಬ್ಧವಾನಿಹ ॥ ೧೬ ॥

ತನ್ಮೇ ತ್ವಂ ಕಾರಣಂ ಸರ್ವಂ ಕಥಯಸ್ವ ಯಥಾತಥಂ ।
ಇತ್ಯೇವಂ ಭಾಷಿತಂ ತಸ್ಯ ವಿಜ್ವಲಸ್ಯ ಮಹಾತ್ಮನಃ ॥ ೧೭ ॥

ಸಮಾಕರ್ಣ್ಯ ಮಹಾರಾಜಃ ಸ್ವಪ್ರಿಯಾಂ ವಾಕ್ಯಮಬ್ರವೀತ್ ।
ಪ್ರಿಯೇ ವರ್ಷಶತಂ ಭುಕ್ತಂ ಮಯೇದಂ ಪಾಪಕರ್ಮಣಾ ॥ ೧೮ ॥

---

೧೩. ಆ ಸರೋವರದ ಸಮೀಪದಲ್ಲಿ ವಿಮಾನದಿಂದಿಳಿದು ಹರಿತವಾದ ಕತ್ತಿಯನ್ನು ತೆಗೆದು ಹೆಣವನ್ನು ಕುಯ್ಯುವಷ್ಟರಲ್ಲಿ ಈ ವಿಜ್ವಲನು ಅವನನ್ನು ಸಮಾಧಾನಪಡಿಸಿ

೧೪-೧೫. ಎಲೈ ರಾಜಶ್ರೇಷ್ಠನೇ, ದೇವತೆಗಳಿಗೆ ಸಮಾನನಾದವನೇ, ಘಾತಕರೂ ಮಾಡದ ಈ ಕೆಲಸವನ್ನು ಮಾಡುತ್ತಿದ್ದೀಯಲ್ಲಾ. ಮಾಡುವುದಕ್ಕೆ ಮೊದಲು ನಿನ್ನನ್ನು ಕೇಳುತ್ತೇನೆ. ಇದೇನು ಹೀನವಾದ ಅದೃಷ್ಟ?

೧೬. ಕೆಟ್ಟದ್ದು, ವಿಮರ್ಶೆಮಾಡದುದು, ಲೋಕದಲ್ಲಿ ನಿಂದ್ಯವಾದುದು. ವೇದಕ್ಕೂ ಆಚಾರಕ್ಕೂ ದೂರವಾದುದು. ಇಂತಹದನ್ನು ಪ್ರಾರಂಭಿಸಿರುವಿಯಲ್ಲ.

೧೭. ಇದರ ಕಾರಣವನ್ನು ನಿಜವಾಗಿ ನನಗೆ ಹೇಳು. ಹೀಗೆಂದ ವಿಜ್ವಲನು ಹೇಳಿದುದನ್ನು ರಾಜನು ಕೇಳಿ ಹೆಂಡತಿಯನ್ನು ಕುರಿತು ಇಂತೆಂದನು.

೧೮. ಪಾಪಿಗಳಾದ ನಾವು ಇದನ್ನು ತಿನ್ನಲು ಮೊದಲಿಟ್ಟು ಒಂದುನೂರು ವರ್ಷಗಳಾದುವು. ಆದರೆ ಯಾವಾಗಲೂ ಯಾರೂ, ಈ ರೀತಿಯಾದ ಮಾತನ್ನಾಡಿರಲಿಲ್ಲ.

ಕದಾ ನ ಭಾಷಿತಂ ಕೇನ ಯಥಾಯಂ ಪರಿಭಾಷತೇ ।
ಮಮೈವಂ ಪೀಡ್ಯಮಾನಸ್ಯ ಕ್ಷುಧಯಾ ಹೃದಯಂ ಪ್ರಿಯೇ ॥ ೧೯ ॥

ನಿರ್ಗತಂ ಚೋತ್ಸುಕಂ ಕಾನ್ತೇ ಶಾನ್ತಿಶ್ಚಿತ್ತೇ ಪ್ರವರ್ತತೇ ।
ಯಾವದಸ್ಯ ಶ್ರುತಂ ವಾಕ್ಯಂ ಸರ್ವದುಃಖಸ್ಯ ಶಾನ್ತಿದಂ ॥ ೨೦ ॥

ತಾವಚ್ಚಿತ್ತೇ ಸಮಾಹ್ಲಾದೋ ವರ್ಧತೇ ಚಾರುಹಾಸಿನಿ ।
ಕೋಽಯಂ ಯಮೋಽಂಬುಪೋ ಧರ್ಮಃ ಸಹಸ್ರಾಕ್ಷೋಽಥವಾ ಪ್ರಿಯೇ ॥ ೨೧ ॥

ಮುನೀನಾಂ ಸ್ಯಾದ್ವಚಸ್ಸತ್ಯಂ ಯದುಕ್ತಂ ಮುನಿನಾ ಪುರಾ ।
ಏವಮಾಭಾಷಿತಂ ಶ್ರುತ್ವಾ ಪ್ರಿಯಸ್ಯಾನಂತರಂ ಪ್ರಿಯಾ ॥ ೨೨ ॥

ರಾಜಾನಂ ಪ್ರತ್ಯುವಾಚಾಥ ಭಾರ್ಯಾ ಪತಿಪರಾಯಣಾ ।
ಸತ್ಯಮುಕ್ತಂ ತ್ವಯಾ ನಾಥ ಇದಮಾಶ್ಚರ್ಯಮುತ್ತಮಂ ॥ ೨೩ ॥

ಯಥಾ ತೇ ವರ್ತತೇ ಕಾನ್ತ ಮಮ ಚಿತ್ತೇ ತಥಾ ಪುನಃ ।
ಪಕ್ಷಿರೂಪಧರಃ ಕೋಽಯಂ ಪೃಚ್ಛತೇ ಹಿತಕಾರಿವತ್ ॥ ೨೪ ॥

---

೧೯. ಹಸಿವಿನಿಂದ ಕೂಡಿರುವ ನನಗೆ ಈಗ ಆ ಹಸಿವು ಹೋದಂತೆ ಕಾಣುತ್ತದೆ. ಮನಸ್ಸಿನಲ್ಲಿ ಶಾನ್ತಿಯು ಹುಟ್ಟುತ್ತಿದೆ. ಇದು ಆಶ್ಚರ್ಯವು.

೨೦. ಸಮಸ್ತ ದುಃಖನಾಶಕವಾದ ಶಾನ್ತಿಯನ್ನು ಕೊಡುವ ಈತನ ಮಾತನ್ನು ಕೇಳಿದಾಗಿನಿಂದ ಸಂತೋಷವುಂಟಾಗುತ್ತಿದೆ.

೨೧. ಇವನು ಯಮನೇ, ವರುಣನೇ, ಧರ್ಮನೇ, ಇಂದ್ರನೇ, ಯಾರಿರಬಹುದು? ಮುನಿಯು ಹಿಂದೆ ಹೇಳಿದ ಮಾತು ನಿಜವಾದೀತು. ಏನಿರಬಹುದು?

೨೨. ಗಂಡನ ಈ ಮಾತನ್ನು ಕೇಳಿ, ಪತಿಪರಾಯಣೆಯಾದ ಆಕೆಯು ರಾಜನನ್ನು ಕುರಿತು

೨೩-೨೪. ನಾಥನೇ, ನೀನು ಹೇಳಿದುದು ನಿಜ. ಇದೇನೋ ಆಶ್ಚರ್ಯವೇ! ನಿನ್ನ ಮನಸ್ಸಿನಲ್ಲಿ ಹೇಗಿದೆಯೋ ನನ್ನ ಮನಸ್ಸಿನಲ್ಲೂ ಹಾಗೆಯೇ ಇದೆ. ಪಕ್ಷಿರೂಪವನ್ನು ಧರಿಸಿರುವ ಈತನಾರು? ಹಿತಕಾರಿಯಂತೆ ಕೇಳುತ್ತಾನಲ್ಲಾ ಎಂದಳು.

ಏವಮಾಭಾಷಿತಂ ಶ್ರುತ್ವಾ ಪ್ರಿಯಾಯಾಃ ಪೃಥಿವೀಪತಿಃ ।
ಬದ್ಧಾಂಜಲಿಪುಟೋ ಭೂತ್ವಾ ಪಕ್ಷಿಣಂ ವಾಕ್ಯಮಬ್ರವೀತ್ ॥ ೨೫ ॥

॥ ಸುಬಾಹುರುವಾಚ ॥

ಸ್ವಾಗತಂ ತೇ ಮಹಾಪ್ರಾಜ್ಞ ಪಕ್ಷಿರೂಪಧರ ಪ್ರಭೋ ।
ಶಿರಸಾ ಭಾರ್ಯಯಾ ಸಾರ್ಧಂ ತವ ಪಾದಾಂಬುಜದ್ವಯಂ ॥ ೨೬ ॥

ನಮಸ್ಕರೋಮ್ಯಹಂ ಪುಣ್ಯಮಸ್ತು ನಸ್ತ್ವತ್ಪ್ರಸಾದತಃ ।
ಭವಾನ್ಕಃ ಪಕ್ಷಿರೂಪೇಣ ಪುಣ್ಯಮೇವಂ ಪ್ರಭಾಷತೇ ॥ ೨೭ ॥

ಯಾದೃಶಂ ಕ್ರಿಯತೇ ಕರ್ಮ ಪೂರ್ವದೇಹೇನ ಸತ್ತಮ ।
ಸುಕೃತಂ ದುಷ್ಕೃತಂ ವಾಪಿ ತದಿಹೈವ ಪ್ರಭುಜ್ಯತೇ ॥ ೨೮ ॥

ಅಥ ತೇನಾತ್ಮಕಂ ವೃತ್ತಂ ತದಗ್ರೇ ವಿನಿವೇದಿತಂ ।
ಯಥೋಕ್ತಂ ಕುಂಜಲೇನಾಪಿ ಪಿತ್ರಾ ಪೂರ್ವಂ ಶ್ರುತಂ ತಥಾ ॥ ೨೯ ॥

---

೨೫. ಹೆಂಡತಿಯು ಹೀಗೆ ಹೇಳಿದುದನ್ನು ಕೇಳಿ ರಾಜನು ಕೈಮುಗಿದು ಕೊಂಡು ಆ ಹಕ್ಕಿಯನ್ನು ಕುರಿತು ಇಂತೆಂದನು.

೨೬-೨೭. ಸುಬಾಹುವು ಹೇಳಿದನು—ಎಲೈ ಪ್ರಾಜ್ಞನೇ, ನಿನಗೆ ಸ್ವಾಗತ ವಾಗಲಿ. ಪಕ್ಷಿರೂಪಧರನಾದ ಪ್ರಭುವೇ, ನಿನ್ನ ಪಾದಕಮಲಗಳನ್ನು ನಾನು ಹೆಂಡತಿ ಯೊಡನೆ ನಮಸ್ಕರಿಸುತ್ತೇನೆ. ನಿನ್ನ ಅನುಗ್ರಹದಿಂದ ನಮಗೆ ಒಳ್ಳೆಯದಾಗಲಿ. ನೀನಾರು ? ಪಕ್ಷಿರೂಪದಿಂದ ಈರೀತಿ ಒಳ್ಳೆಯ ಮಾತಾಡುವಿಯಲ್ಲ

೨೮. ಪೂರ್ವಜನ್ಮದಲ್ಲಿ ಒಳ್ಳೆಯದೋ ಕೆಟ್ಟದ್ದೋ ಯಾವಬಗೆಯ ಕರ್ಮ ವನ್ನು ಮಾಡುತ್ತೇವೆಯೋ ಅದನ್ನು ಈ ಜನ್ಮದಲ್ಲಿ ಇಲ್ಲಿ ಅನುಭವಿಸುತ್ತಿದ್ದೇವೆ ಎಂದು

೨೯. ರಾಜನು ತನ್ನ ವಿಷಯವನ್ನೆಲ್ಲಾ ಅದಕ್ಕೆ ಹೇಳಿದನು. ಆ ಪಕ್ಷಿಯೂ ಕೂಡ ತಂದೆಯ ಬಳಿ ತಾನು ಕೇಳಿದ್ದಂತೆ ಎಲ್ಲವನ್ನೂ ಹೇಳಿತು.

**ಕಥಯಸ್ವ ಸ್ವವೃತ್ತಾಂತಂ ಭವಾನ್ಕೋ ನೋ ಪ್ರಭಾಷತೇ ।**
**ಸುಬಾಹುಂ ಪ್ರತ್ಯವಾಚೇದಂ ವಾಕ್ಯಂ ಪಕ್ಷಿವರಸ್ತದಾ ॥ ೩೦ ॥**

**॥ ವಿಜ್ವಲ ಉವಾಚ ॥**

**ಶುಕಜಾತ್ಯಾಂ ಸಮುತ್ಪನ್ನಃ ಕುಂಜಲೋ ನಾಮ ಮೇ ಪಿತಾ ।**
**ತಸ್ಯಾಹಂ ವಿಜ್ವಲೋ ನಾಮಾ ತೃತೀಯಸ್ತು ಸುತೋತ್ತಮಂ ॥ ೩೧ ॥**

**ನಾಹಂ ದೇವೋ ನ ಗಂಧರ್ವೋ ನ ಚ ಸಿದ್ಧೋ ಮಹಾಭುಜ ।**
**ನಿತ್ಯಮೇವ ಪ್ರಪಶ್ಯಾಮಿ ಕರ್ಮ ಚೈತತ್ಸುದಾರಣಂ ॥ ೩೨ ॥**

**ಕಿಯತ್ಕಾಲಂ ಮಹತ್ಕರ್ಮ ಸಾಹಸಾಕಾರಸಂಯುತಂ ।**
**ಕರಿಷ್ಯಸಿ ಮಹಾರಾಜ ತನ್ಮೇ ತ್ವಂ ಕಾರಣಂ ವದ ॥ ೩೩ ॥**

**॥ ಸುಬಾಹುರುವಾಚ ॥**

**ವಾಸುದೇವಾಭಿದಾನಂ ಯತ್ಪೂರ್ವಮುಕ್ತಂ ಹಿ ಬ್ರಾಹ್ಮಣೈಃ ।**
**ಶ್ರೋಷ್ಯಾಮ್ಯಹಂ ಯದಾ ಭದ್ರ ಗತಿಂ ಸ್ವಾಂ ಪ್ರಾಪ್ನುಯಾತ್ತದಾ ॥ ೩೪ ॥**

---

೩೦. ನೀನಾರು? ನನ್ನನ್ನು ಕುರಿತು ಹೀಗೆ ಕೇಳುತ್ತಿರುವ ನಿನ್ನ ವಿಷಯವೇನು ಎನ್ನಲು, ಆ ಹಕ್ಕಿಯು ಸುಬಾಹುವನ್ನು ಕುರಿತು ಈ ರೀತಿ ಹೇಳಿತು.

೩೧. ವಿಜ್ವಲನು ಹೇಳಿದನು:—ನಾನು ಗಿಳಿ. ನನ್ನ ತಂದೆ ಕುಂಜಲ, ನನ್ನ ಹೆಸರು ವಿಜ್ವಲ, ನನ್ನ ತಂದೆಗೆ ನಾನು ಮೂರನೆಯ ಮಗ. ನಾನು ಗಂಧರ್ವನೂ ಅಲ್ಲ. ದೇವನೂ ಅಲ್ಲ. ಸಿದ್ಧನು ಮೊದಲೇ ಅಲ್ಲ.

೩೨-೩೩. ಈ ನಿಮ್ಮ ಕೆಟ್ಟ ಕೆಲಸವನ್ನು ದಿನವೂ ನೋಡುತ್ತಿದ್ದೇನೆ. ಎಲೈ ದೊರೆಯೇ, ಎಷ್ಟು ದಿವಸಗಳವರೆಗೂ ಈ ಕೆಟ್ಟಕೆಲಸವನ್ನು ಜುಗುಪ್ಸೆಯಿಂದ ಮಾಡುತ್ತೀದ್ದಿಯೆ? ಅದರ ಕಾರಣವಾದರೂ ಹೇಳು.

೩೪-೩೫. ಸುಬಾಹುವು ಹೇಳಿದನು:—ಪೂರ್ವದಲ್ಲಿ ಬ್ರಾಹ್ಮಣರು ಹೇಳಿರುವಂತೆ ವಾಸುದೇವನೆಂಬ ಹೆಸರುಳ್ಳ ಸ್ತೋತ್ರವನ್ನು ಕೇಳಿದಾಗ ಒಳ್ಳೆಯ ಗತಿಯನ್ನು

ಪುಣ್ಯಾತ್ಮನಾ ಭಾಷಿತಂ ವೈ ಮುನಿನಾ ಸಂಯತಾತ್ಮನಾ ।
ತದಾಹಂ ಪಾತಕಾನ್ಮುಕ್ತೋ ಭವಿಷ್ಯಾಮಿ ನ ಸಂಶಯಃ ॥ ೩೫ ॥

॥ ವಿಜ್ವಲ ಉವಾಚ ॥

ತವಾರ್ಥೇ ಪೃಚ್ಛಿತಸ್ತಾತಸ್ತೇನ ಮೇ ಕಥಿತಂ ಚ ಯತ್ ।
ತತ್ತೇಽದ್ಯಾಹಂ ಪ್ರವಕ್ಷ್ಯಾಮಿ ಶಾಶ್ವತಂ ಶೃಣು ಸತ್ತಮ ॥ ೩೬ ॥

ಓಂ ಅಸ್ಯ ಶ್ರೀ ವಾಸುದೇವಾಭಿದಾನಸ್ತೋತ್ರಸ್ಯಾನುಷ್ಟುಪ್ಛಂದಃ ।
ನಾರದಋಷಿಃ । ಓಂಕಾರೋ ದೇವತಾ । ಸರ್ವಪಾಪಕನಾಶಾಯ ಚತುರ್ವರ್ಗ
ಸಾಧನಾರ್ಥೇ ವಿನಿಯೋಗಃ । ಓಂ ನಮೋ ಭಗವತೇ ವಾಸುದೇವಾಯ ॥
ಇತಿ ಮಂತ್ರಃ ॥ ೩೭–೩೮ ॥

ಪರಮಂ ಪಾವನಂ ಪುಣ್ಯಂ ವೇದಜ್ಞಂ ವೇದಮಂದಿರಂ ।
ವಿದ್ಯಾಧಾರಂ ಮಖಾಧಾರಂ ಪ್ರಣವಂ ತಂ ನಮಾಮ್ಯಹಂ ॥ ೩೯ ॥

---

ಹೊಂದುತ್ತೇನೆ. ಆ ರೀತಿಯಾಗಿ ಒಬ್ಬ ಯೋಗಿಯು ಹೇಳಿದ್ದಾನೆ. ಆಗ ನನ್ನ ಪಾಪವೆಲ್ಲವೂ ಹೋಗುತ್ತದೆ. ಸಂಶಯವಿಲ್ಲ. ಎನ್ನಲು,

೩೬. ವಿಜ್ವಲನು ಹೇಳುತ್ತಾನೆ:—ನಿನಗೋಸ್ಕರ ನಮ್ಮ ತಂದೆಯನ್ನು ಕೇಳಲು, ಆತನು ಹೇಳಿದ ಆ ಉತ್ತಮವಾದ ಸ್ತೋತ್ರವನ್ನು ಹೇಳುತ್ತೇನೆ ಕೇಳು.

೩೭-೩೮. ಈ ವಾಸುದೇವಾಭಿಧಾನವೆಂಬ ಸ್ತೋತ್ರಕ್ಕೆ ಅನುಷ್ಟುಪ್ ಛಂದಸ್ಸು, ನಾರದನು ಋಷಿಯು, ಓಕಾಂರವೇ ದೇವತೆ, ಸಮಸ್ತ ಪಾಪ ಹೋಗುವುದಕ್ಕೂ ಧರ್ಮ, ಅರ್ಥ, ಕಾಮ, ಮೋಕ್ಷಗಳು ಸಿಕ್ಕುವುದಕ್ಕೂ ಮಾಡತಕ್ಕದ್ದು. ಓಂನಮೋ ಭಗವತೇ ವಾಸುದೇವಾಯ ಎಂಬುದು ಮಂತ್ರವು.

೩೯. ಆ ವಾಸುದೇವನು ಉತ್ತಮನು, ಪವಿತ್ರನು, ಪುಣ್ಯರೂಪನು, ವೇದವನ್ನು ಬಲ್ಲವನು. ವೇದಕ್ಕೆ ಸ್ಥಾನನು. ವಿದ್ಯೆಗಳಿಗೆ ಆಧಾರನು. ಯಾಗಕ್ಕೆಲ್ಲಾ ಆಧಾರನು. ಓಂಕಾರಸ್ವರೂಪನು. ಅವನನ್ನು ನಮಸ್ಕರಿಸುತ್ತೇನೆ.

**ನಿರಾವಾಸಂ ನಿರಾಕಾರಂ ಸುಪ್ರಕಾಶಂ ಮಹೋದಯಂ ।**
**ನಿರ್ಗುಣಂ ಗುಣಕರ್ತಾರಂ ನಮಾಮಿ ಪ್ರಣವಂ ಪರಂ ॥ ೪೦ ॥**

**ಗಾಯತ್ರೀಸಾಮ ಗಾಯಂತಂ ಗೀತಜ್ಞಂ ಗೀತಸುಪ್ರಿಯಂ ।**
**ಗಂಧರ್ವಗೀತಭೋಕ್ತಾರಂ ಪ್ರಣವಂ ತಂ ನಮಾಮ್ಯಹಂ ॥ ೪೧ ॥**

**ಮಹಾಕಾನ್ತಂ ಮಹೋತ್ಸಾಹಂ ಮಹಾಮೋಹವಿನಾಶನಂ ।**
**ಅಚಿನ್ತ್ಯಂತಂ ಜಗತ್ಸರ್ವಂ ಗುಣಾತೀತಂ ನಮಾಮ್ಯಹಂ ॥ ೪೨ ॥**

**ಭಾತಿ ಸರ್ವತ್ರ ಯೋ ಭೂತ್ವಾ ಭೂತಾನಾಂ ಭೂತಿವರ್ಧನಃ ।**
**ಸಮಭಾಗಾಯ ಸದ್ಧರ್ಮಂ ನಮಾಮಿ ಪ್ರಣವಂ ಪರಂ ॥ ೪೩ ॥**

**ವಿಚಾರಂ ವೇದರೂಪಂ ತಂ ಯಜ್ಞಾಖ್ಯಂ ಯಜ್ಞವಲ್ಲಭಂ ।**
**ಯೋನಿಂ ಸರ್ವಸ್ಯ ಲೋಕಸ್ಯ ಓಂಕಾರಂ ಪ್ರಣಮಾಮ್ಯಹಂ ॥ ೪೪ ॥**

---

೪೦. ಸ್ಥಾನವಿಲ್ಲದವನು. ಆಕಾರರಹಿತನು. ಪ್ರಕಾಶಿಸುವವನು. ವೃದ್ಧಿಯುಳ್ಳವನು. ಗುಣಶೂನ್ಯನು. ಗುಣಗಳನ್ನು ಮಾಡತಕ್ಕವನು. ಪರಸ್ವರೂಪನು. ಇಂತಹವನನ್ನು ನಮಸ್ಕರಿಸುತ್ತೇನೆ.

೪೧. ಗಾಯತ್ರಿಯ ಸಾಮವನ್ನು ಗಾನಮಾಡುತ್ತಿರುವ ಗೀತವನ್ನು ಬಲ್ಲ, ಗೀತದಲ್ಲಿ ಪ್ರೀತಿಯುಳ್ಳ, ಗಂಧರ್ವರಗೀತವನ್ನು ಕೇಳುವ, ಪ್ರಣವಸ್ವರೂಪಿಯಾದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೪೨. ಚೆನ್ನಾಗಿರುವವನು, ಬಹು ಉತ್ಸಾಹವುಳ್ಳವನು, ಅಜ್ಞಾನನಾಶಕ, ಪ್ರಪಂಚವೆಲ್ಲವನ್ನೂ ಸೃಷ್ಟಿಸುವವನು, ಗುಣಗಳಿಗೆ ಹೊರಗಾಗಿರುವವನು, ಇಂತಹವನನ್ನು ನಮಸ್ಕರಿಸುತ್ತೇನೆ.

೪೩. ಎಲ್ಲಾ ಕಡೆಯಲ್ಲೂ ಇದ್ದುಕೊಂಡು ಪ್ರಕಾಶಿಸುವವನು, ಪ್ರಾಣಿಗಳಿಗೆ ಐಶ್ವರ್ಯವನ್ನು ಕೊಡುವವನು, ಸಮಾನವಾಗಿ ನೋಡುವವನು, ಧರ್ಮರೂಪಿಯು ಇಂತಹವನನ್ನು ನಮಸ್ಕರಿಸುತ್ತೇನೆ.

೪೪. ವಿಚಾರನು, ವೇದರೂಪಿಯು, ಯಜ್ಞನೆಂಬುವನು, ಯಜ್ಞಪ್ರಿಯನು, ಎಲ್ಲಕ್ಕೂ ಉತ್ಪತ್ತಿಸ್ಥಾನನು, ಓಂಕಾರರೂಪನು, ಇವನನ್ನು ನಮಸ್ಕರಿಸುತ್ತೇನೆ.

ತಾರಕಂ ಸರ್ವಲೋಕಾನಾಂ ನೌರೂಪೇಣ ವಿರಾಜಿತಂ ।
ಸಂಸಾರಾರ್ಣವಮಗ್ನಾನಾಂ ನಮಾಮಿ ಪ್ರಣವಂ ಹರಿಂ ॥ ೪೫ ॥

ವಸತೇ ಸರ್ವಭೂತೇಷು ಏಕರೂಪೇಣ ನೈಕಧಾ ।
ಧಾಮಕೈವಲ್ಯರೂಪೇಣ ನಮಾಮಿ ವರದಂ ಸುಖಂ ॥ ೪೬ ॥

ಸೂಕ್ಷ್ಮಂ ಸೂಕ್ಷ್ಮತರಂ ಶುದ್ಧಂ ನಿರ್ಗುಣಂ ಗುಣನಾಯಕಂ ।
ವರ್ಜಿತಂ ಪ್ರಾಕೃತೈರ್ಭಾವೈಃ ವೇದಾಖ್ಯಂ ತಂ ನಮಾಮ್ಯಹಂ ॥ ೪೭ ॥

ದೇವದೈತ್ಯವಿಯೋಗೈಶ್ಚ ವರ್ಜಿತಂ ತುಷ್ಟಿಭಿಸ್ತಥಾ ।
ವೇದೈಶ್ಚ ಯೋಗಿಭಿರ್ಧ್ಯೇಯಂ ತಮೋಂಕಾರಂ ನಮಾಮ್ಯಹಂ ॥ ೪೮ ॥

ವ್ಯಾಪಕಂ ವಿಶ್ವವೇತ್ತಾರಂ ವಿಜ್ಞಾನಂ ಪರಮಂ ಪದಂ ।
ಶಿವಂ ಶಿವಗುಣಂ ಶಾನ್ತಂ ವಂದೇ ಪ್ರಣವಮೀಶ್ವರಂ ॥ ೪೯ ॥

---

೪೫. ಸರ್ವಪ್ರಾಣಿಗಳನ್ನೂ ಸಂಸಾರವೆಂಬ ಸಮುದ್ರದಿಂದ ದಾಟಿಸುವುದಕ್ಕೆ ಹಡಗಿನಂತಿರುವ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೪೬. ಒಂದೇರೂಪವಾಗಿಯೂ, ಅನೇಕರೀತಿ ಭಾಗಗಳಿಂದ ಪ್ರಾಣಿಯಲ್ಲಿ ವಾಸಿಸುವ ಕೈವಲ್ಯರೂಪನಾದ, ವರವನ್ನು ಕೊಡುವ ಸುಖರೂಪಿಯಾದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೪೭. ಸೂಕ್ಷ್ಮನು, ಇನ್ನೂ ಸೂಕ್ಷ್ಮನು, ಶುದ್ಧನು, ಗುಣವಿಲ್ಲದಿದ್ದರೂ, ಗುಣನಾಯಕನು, ಪ್ರಕೃತಿಯ ಹಿತಕ್ಕೆ ಸಿಕ್ಕದವನು, ವೇದವೆಂಬ ಹೆಸರುಳ್ಳವನು ಅವನನ್ನು ನಮಸ್ಕರಿಸುತ್ತೇನೆ.

೪೮. ದೇವತೆಗಳು, ದೈತ್ಯರು, ತೃಪ್ತಿಗಳಿಂದ ಬಿಡಲ್ಪಟ್ಟವನು, ವೇದಗಳಿಂದಲೂ, ಯೋಗಿಗಳಿಂದಲೂ, ಧ್ಯಾನಿಸಲ್ಪಡತಕ್ಕವನು, ಓಂಕಾರರೂಪಿಯು, ಈತನನ್ನು ನಮಸ್ಕರಿಸುತ್ತೇನೆ.

೪೯. ಎಲ್ಲಾ ಕಡೆಯಲ್ಲೂ ಇರುವವನು, ಪ್ರಪಂಚವನ್ನು ಬಲ್ಲವನು, ಶಾನ್ತನು, ಇಂತಹವನನ್ನು ನಮಸ್ಕರಿಸುತ್ತೇನೆ.

ಯಸ್ಯ ಮಾಯಾಂ ಪ್ರವಿಷ್ಟಾಸ್ತು ಬ್ರಹ್ಮಾದ್ಯಾಶ್ಚ ಸುರಾಸುರಾಃ ।
ನ ವಿಂದಂತಿ ಪರಂ ಶುದ್ಧಂ ಮೋಕ್ಷದ್ವಾರಂ ನಮಾಮ್ಯಹಂ ॥ ೫೦ ॥

ಆನಂದಕಂದಾಯ ಚ ಕೇವಲಾಯ
ಶುದ್ಧಾಯ ಹಂಸಾಯ ಪರಾವರಾಯ ॥
ನಮೋಽಸ್ತು ತಸ್ಮೈ ಗುಣನಾಯಕಾಯ
ಶ್ರೀ ವಾಸುದೇವಾಯ ಮಹಾಪ್ರಭಾಯ ॥ ೫೧ ॥

ಶ್ರೀಪಾಂಚಜನ್ಯೇನ ವಿರಾಜಮಾನಂ
ರವಿಪ್ರಭೇಣಾಪಿ ಸುದರ್ಶನೇನ ॥
ಗದಾಖ್ಯಕೇನಾಪಿ ವಿರಾಜಮಾನಂ
ವಿಷ್ಣುಂ ಸದೈವಂ ಶರಣಂ ಪ್ರಪದ್ಯೇ ॥ ೫೨ ॥

ಯಂ ವೇದಕೋಶಂ ಸುಗುಣಂ ಗುಣಾನಾ-
ಮಾಧಾರಭೂತಂ ಸಚರಾಚರಸ್ಯ
ಯಂ ಸೂರ್ಯವೈಶ್ವಾನರತುಲ್ಯತೇಜಸಂ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೩ ॥

---

೫೦. ಬ್ರಹ್ಮನೇ ಮೊದಲಾದ ಸುರಾಸುರರು ಯಾವನ ಮಾಯೆಯಲ್ಲಿ ಸಿಕ್ಕಿ ಬಿದ್ದು, ಶುದ್ಧವಾದುದನ್ನು ತಿಳಿಯಲಾರರೋ ಅಂತಹ ಮೋಕ್ಷಕ್ಕೆ ಕಾರಣನನ್ನು ನಮಸ್ಕರಿಸುತ್ತೇನೆ.

೫೧. ಆನಂದದ ಮೂಲ, ಒಬ್ಬನಾಗಿರುವ, ಶುದ್ಧ, ಹಂಸ, ಅತಿಸೂಕ್ಷ್ಮ, ಅತಿದೊಡ್ಡವನು, ಗುಣಗಳಿಗೆ ಒಡೆಯ, ಹೆಚ್ಚು ಕಾಂತಿಯುಳ್ಳವನು, ಇಂತಹ ವಾಸುದೇವನಿಗೆ ನಮಸ್ಕಾರವು.

೫೨. ಪಾಂಚಜನ್ಯವೆಂಬ ಶಂಖ, ಕಾಂತಿಯುಳ್ಳ ಸುದರ್ಶನವೆಂಬ ಚಕ್ರ, ಗದೆ ಇವುಗಳಿಂದ ಕೂಡಿ ಪ್ರಕಾಶಿಸುತ್ತಿರುವ ವಿಷ್ಣುವನ್ನು ಶರಣುಹೊಂದುತ್ತೇನೆ.

೫೩. ವೇದಗಳಿಗೆ ನಿಧಿ, ಒಳ್ಳೆಯ ಗುಣಿ, ಗುಣಗಳಿಗೆ ಆಧಾರ, ಸೂರ್ಯ ಅಗ್ನಿಗಳಿಗೆ ಸಮವಾದ ಕಾಂತಿಯುಳ್ಳವನು, ಇಂತಹ ವಾಸುದೇವನನ್ನು ಶರಣು ಹೊಂದುತ್ತೇನೆ.

ತಮೋಘನಾನಾಂ ನಿಕರೈಃ ಪ್ರಕಾಶಂ
ಕರೋತಿ ನಿತ್ಯಂ ಯತಿಧರ್ಮಹೇತುಂ ॥
ಉದ್ಯೋತಮಾನಂ ರವಿತೇಜಸೋರ್ಧ್ವಂ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೪ ॥

ಸುಧಾನಿಧಾನಂ ವಿಮಲಾಂಶುರೂಪ
ಮಾನಂದಮಾನೇನ ವಿರಾಜಮಾನಂ ॥
ಯಂ ಪ್ರಾಪ್ಯ ಜೀವಂತಿ ಸುರಾದಿಲೋಕಾ
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೫ ॥

ಯೋ ಭಾತಿ ಸರ್ವತ್ರ ರವಿಪ್ರಭಾವೈಃ
ಕರೋತಿ ಶೋಷಂ ಚ ರಸಂ ದದಾತಿ ॥
ಯಃ ಪ್ರಾಣಿನಾಮಂತರಗಃ ಸವಾಯು
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೬ ॥

ಜ್ಯೇಷ್ಠಸ್ತು ರೂಪೇಣ ಸ ದೇವದೇವೋ
ಬಿಭರ್ತಿ ಲೋಕಾನ್ ಸಕಲಾನ್ಮಹಾತ್ಮಾ ॥
ಏಕಾರ್ಣವೇ ನೌರಿವ ವರ್ತತೇ ಯ
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೭ ॥

---

೫೪. ಕಪು ದೇಹದಿಂದ ಪ್ರಕಾಶಿಸುವ, ಯತಿಧರ್ಮಕ್ಕೆ ಕಾರಣನಾದ, ಸೂರ್ಯನ ರೂಪದಿಂದ ಆಕಾಶದಲ್ಲಿ ಪ್ರಕಾಶಿಸುವ ವಾಸುದೇವನನ್ನು ಶರಣುಹೊಂದುತ್ತೇನೆ.

೫೫. ಅಮೃತಕ್ಕೆ ಮನೆ, ಕೊಳೆಯಿಲ್ಲದ ಕಾಂತಿಯುಳ್ಳವನು, ಆನಂದವುಳ್ಳವನು, ದೇವಾದಿಗಳಿಗೆ ಜೀವಪ್ರದ ಇಂತಹ ವಾಸುದೇವನನ್ನು ಶರಣುಹೊಂದುತ್ತೇನೆ.

೫೬. ಸೂರ್ಯನಂತೆ ಎಲ್ಲಾ ಕಡೆಯಲ್ಲೂ ಪ್ರಕಾಶಿಸುವ, ಓಷಧಿಗಳನ್ನು ಒಣಗಿಸುವ, ಅವಕ್ಕೆ ರಸವನ್ನು ಕೊಡುವ, ಪ್ರಾಣಿಗಳ ಹೃದಯದಲ್ಲಿರುವ, ವಾಯುಸ್ವರೂಪನಾದ ವಾಸುದೇವನನ್ನು ಶರಣುಹೊಂದುತ್ತೇನೆ.

೫೭. ಎಲ್ಲರಿಗೂ ದೊಡ್ಡವನಾದ, ದೇವತೆಗಳಿಗೆ ದೇವನಾದ, ಸಕಲಲೋಕಗಳನ್ನು ಧರಿಸಿರುವ, ದೊಡ್ಡ ಸಮುದ್ರದಲ್ಲಿ ಹಡಗಿನಂತಿರುವ ವಾಸುದೇವನನ್ನು ಶರಣುಹೊಂದುತ್ತೇನೆ.

ಅಂತರ್ಗತೋ ಲೋಕಮಯಃ ಸದೈವ
ಭವತ್ಯಸೌ ಸ್ಥಾವರಜಂಗಮಾನಾಂ ॥
ಸ್ವಾಹಾಮುಖೋ ದೇವಮುಖಸ್ಯ ಹೇತು
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೮ ॥

ರಸೈಸ್ಸುಪುಣ್ಯೈಸ್ಸಕಲೈಸ್ಸು ಪುಷ್ಟಃ
ಸ ಸೌಮ್ಯರೂಪೈರ್ಗುಣವಿತ್ಸ ಲೋಕೇ ॥
ರತ್ನಾಧಿಪೋ ನಿರ್ಮಲತೇಜಸೈವ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೫೯ ॥

ಅಸ್ತ್ಯೇವ ಸರ್ವತ್ರ ವಿನಾಶಹೇತುಃ
ಸರ್ವಾಶ್ರಯಸ್ಸರ್ವಮಯಃ ಸ ಸರ್ವಃ ॥
ವಿನಾ ಹೃಷೀಕೈರ್ವಿಷಯಾನ್ಪ್ರಭುಂಕ್ತೇ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೦ ॥

ತೇಜಸ್ಸ್ವರೂಪೇಣ ಬಿಭರ್ತಿ ಲೋಕಾನ್
ಸತ್ತ್ವಾಸ್ಸಮಸ್ತಾನ್ ಸ ಚರಾಚರಸ್ಯ ॥
ನಿಸ್ಕೇವಲೋ ಜ್ಞಾನಮಯಃ ಸುಶುದ್ಧ
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೧ ॥

---

೫೮. ಪ್ರಾಣಿಗಳ ಶರೀರದೊಳಗಿರತಕ್ಕ, ಲೋಕಸ್ವರೂಪನಾದ, ಚರಾಚರಗಳ ಒಳಗಿರುವ ಸ್ವಾಹಾಮುಖನೂ, ದೇವತೆಗಳಿಗೆ ಮುಖನೂ ಆದ ವಾಸುದೇವನನ್ನು ನಮಸ್ಕರಿಸುತ್ತೇನೆ.

೫೯. ಉತ್ಕೃಷ್ಟವಾದ ರಸಗಳಿಂದ ಪುಷ್ಟಿಹೊಂದಿರುವ, ಸೌಮ್ಯರೂಪನಾದ, ಗುಣವನ್ನು ತಿಳಿಯತಕ್ಕ ನಿರ್ಮಲ ತೇಜಸ್ಸಿನಿಂದಲೇ ರತ್ನಕ್ಕೆ ಒಡೆಯನಾದ ವಾಸುದೇವನನ್ನು ಶರಣುಹೊಂದುತ್ತೇನೆ.

೬೦. ಎಲ್ಲಾ ಕಡೆಯೂ ಇರುವ, ನಾಶಕ್ಕೆ ಕಾರಣನಾದ, ಸರ್ವಾಶ್ರಯನೂ, ಸರ್ವಮಯನೂ ಸರ್ವರೂಪನೂ ಆದ, ಇಂದ್ರಿಯಗಳಿಲ್ಲದೇ ವಿಷಯಗಳನ್ನು ಅನುಭವಿಸುವ ಆ ಸ್ವಾಮಿಯನ್ನು ಶರಣುಹೊಂದುತ್ತೇನೆ.

೬೧. ತೇಜೋರೂಪದಿಂದ ಲೋಕಗಳನ್ನು ಧರಿಸಿರುವ, ಕೇವಲನಾದ, ಜ್ಞಾನಸ್ವರೂಪನಾದ, ಶುದ್ಧನಾದ, ವಾಸುದೇವನನ್ನು ಶರಣುಹೊಂದುತ್ತೇನೆ.

ದೈತ್ಯಾನ್ತಕಂ ದುಃಖವಿನಾಶಮೂಲಂ
ಶಾನ್ತಂ ಪರಂ ಶಕ್ತಿಮಯಂ ವಿಶಾಲಂ ॥
ಸಂಪ್ರಾಪ್ಯ ದೇವಾ ವಿಲಯಂ ಪ್ರಯಾಂತಿ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೨ ॥

ಸುಖಂ ಸುಖಾಪ್ತಂ ಸುಹೃದಂ ಸುರೇಶಂ
ಜ್ಞಾನಾರ್ಣವಂ ತಂ ಸುಹಿತಂ ಹಿತಂ ಚ ॥
ಸತ್ಯಾಶ್ರಯಂ ಸತ್ಯಗುಣೋಪವಿಷ್ಟಂ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೩ ॥

ಯಜ್ಞಸ್ವರೂಪಂ ಪುರುಷಾರ್ಥರೂಪಂ
ಸತ್ಯಾನ್ವಿತಂ ಮಾಪತಿಮೇವ ಪುಣ್ಯಂ ॥
ವಿಜ್ಞಾನಮೇತಂ ಜಗತಾಂ ನಿವಾಸಂ ॥
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೪ ॥

ಅಂಭೋಧಿಮಧ್ಯೇ ಶಯನಂ ಹಿ ಯಸ್ಯ
ನಾಗಾಂಗಭೋಗೇ ಶಯನೇ ವಿಶಾಲೇ ॥
ಶ್ರೀಃ ಪಾದಪದ್ಮದ್ವಯಮೇವ ಸೇವತೇ
ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೫ ॥

---

೬೨. ರಾಕ್ಷಸಾಂತಕನಾದ, ದುಃಖವಿನಾಶಕನಾದ, ಶಾಂತನಾದ, ಶಕ್ತಿಸ್ವರೂಪನಾದ, ದೇವತೆಗಳು ಕೂಡ ಅವನನ್ನು ಹೊಂದಿ ನಾಶವಾಗುತ್ತಾರೆ. ಅಂಥವನಾದ ವಾಸುದೇವನನ್ನು ಶರಣುಹೊಂದುತ್ತೇನೆ.

೬೩. ಸುಖಸ್ವರೂಪ, ಸುಖವನ್ನು ಹೊಂದಿದವನು, ಒಳ್ಳೆಯ ಮನಸ್ಸುಳ್ಳವನು, ಜ್ಞಾನನಿಧಿ, ಹಿತಕಾರಿ, ಸತ್ಯಕ್ಕೆ ಆಶ್ರಯ, ಸತ್ಯಗುಣದಿಂದ ಕೂಡಿದವನು, ಅಂತಹ ವಾಸುದೇವನನ್ನು ಶರಣುಹೊಂದುತ್ತೇನೆ.

೬೪. ಯಜ್ಞಸ್ವರೂಪ, ಪುರುಷಾರ್ಥರೂಪ, ಸತ್ಯದಿಂದ ಕೂಡಿದವನು, ಲಕ್ಷ್ಮೀಪತಿ, ವಿಜ್ಞಾನರೂಪ, ಜಗತ್ತಿಗೆ ಆವಾಸಸ್ಥಾನ, ಅಂತಹ ವಾಸುದೇವನನ್ನು ಶರಣುಹೊಂದುತ್ತೇನೆ.

೬೫. ಸಮುದ್ರದ ಮಧ್ಯದಲ್ಲಿ ಶೇಷಶಾಯಿಯಾದ, ಲಕ್ಷ್ಮಿಯು ಕಾಲುಗಳನ್ನು ಒತ್ತುತ್ತಿರುವ ವಾಸುದೇವನನ್ನು ಶರಣುಹೊಂದುತ್ತೇನೆ.

ಪುಣ್ಯಾನ್ವಿತಂ ಶಂಕರಮೇವ ನಿತ್ಯಂ
ತೀರ್ಥೈರನೇಕೈಃ ಪರಿಸೇವ್ಯಮಾನಂ ॥
ತತ್ಪಾದಪದ್ಮದ್ವಯಮೇವ ತಸ್ಯ
ಶ್ರೀ ವಾಸುದೇವಸ್ಯ ನಮಾಮಿ ನಿತ್ಯಂ ॥ ೬೬ ॥

ಅಘಾಪಹಂ ವಾ ಯದಿ ವಾಂಬುಜಂ ತತ್
ರಕ್ತೋತ್ಪಲಾಭಂ ಧ್ವಜವಾಯುಯುಕ್ತಂ ॥
ಅಲಂಕೃತಂ ನೂಪುರಮುದ್ರಿಕಾಭಿಃ
ಶ್ರೀ ವಾಸುದೇವಸ್ಯ ನಮಾಮಿ ಪಾದಂ ॥ ೬೭ ॥

ದೇವೈಸ್ಸುಸಿದ್ಧೈರ್ಮುನಿಭಿಸ್ಸದೈವ
ನುತಂ ಸುಭಕ್ತ್ಯಾ ಉರಗಾಧಿಪೈಶ್ಚ ॥
ತತ್ಪಾದಪಂಕೇರುಹಮೇವ ಪುಣ್ಯಂ
ಶ್ರೀ ವಾಸುದೇವಸ್ಯ ನಮಾಮಿ ನಿತ್ಯಂ ॥ ೬೮ ॥

ಯಸ್ಯಾಪಿ ಪಾದಾಂಭಸಿ ಮಜ್ಜಮಾನಾಃ
ಪೂತಾ ದಿವಂ ಯಾಂತಿ ವಿಕಲ್ಮಷಾಸ್ತೇ ॥
ಮೋಕ್ಷಂ ಲಭಂತೇ ಮುನಯಃ ಸುತುಷ್ಟಾ
ಸ್ತಂ ವಾಸುದೇವಂ ಶರಣಂ ಪ್ರಪದ್ಯೇ ॥ ೬೯ ॥

---

೬೬. ಪುಣ್ಯವಂತ, ಸುಖವನ್ನುಂಟುಮಾಡುವವನು, ಅನೇಕ ತೀರ್ಥಗಳಿಂದ ಸೇವಿಸಲ್ಪಡುವವನು ಇಂತಹ ವಾಸುದೇವನ ಪಾದಪದ್ಮಗಳನ್ನು ನಮಸ್ಕರಿಸುತ್ತೇನೆ.

೬೭. ಪಾಪನಾಶಕನಾದ, ಕಮಲನಾಭನಾದ, ಧ್ವಜದಲ್ಲಿ ವಾಯುವು ಇರುವ, ಉಂಗುರ ಮುಂತಾದುವುಗಳಿಂದ ಅಲಂಕರಿಸಲ್ಪಟ್ಟ ವಾಸುದೇವನ ಪಾದಗಳನ್ನು ನಮಸ್ಕರಿಸುತ್ತೇನೆ.

೬೮. ದೇವತೆಗಳು, ಸಿದ್ಧರು, ಮುನಿಗಳು, ಸರ್ಪಗಳು ಇವುಗಳಿಂದ ಹೊಗಳಲ್ಪಟ್ಟ ಆ ಸ್ವಾಮಿಯ ಪಾದಪದ್ಮಗಳನ್ನು ಶರಣುಹೊಂದುತ್ತೇನೆ.

೬೯. ಯಾವನ ಪಾದೋದಕವಾದ ಗಂಗೆಯಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಪವಿತ್ರರಾಗಿ ಸ್ವರ್ಗವನ್ನೇ ಹೊಂದುತ್ತಾರೆಯೋ ಅಂಥ ಸ್ವಾಮಿಯನ್ನು ಶರಣುಹೊಂದುತ್ತೇನೆ.

ಪಾದೋದಕಂ ತಿಷ್ಠತಿ ಯತ್ರ ವಿಷ್ಣೋಃ
ಗಂಗಾದಿತೀರ್ಥಾನಿ ಸದೈವ ತತ್ರ ॥
ತ್ಯಜಂತಿ ಪ್ರಾಣಾಂಶ್ಚ ಅಪಾಪದೇಹಾಃ
ಪ್ರಯಾಂತಿ ಶುದ್ಧಾಃ ಸುಗೃಹಂ ಮುರಾರೇಃ ॥ ೭೦ ॥

ಪಾದೋದಕೇನಾಪ್ಯಭಿಷಿಚ್ಯಮಾನಾ
ಅತ್ಯುಗ್ರಪಾಪೈಃ ಪರಿಲಿಪ್ತದೇಹಾಃ ॥
ತೇ ಯಾಂತಿ ಮುಕ್ತಿಂ ಪರಮೇಶ್ವರಸ್ಯ
ತಸ್ಯೈವ ಪಾದೌ ಸತತಂ ನಮಾಮಿ ॥ ೭೧ ॥

ನೈವೇದ್ಯಮಾತ್ರೇಣ ಸುಭಕ್ಷಿತೇನ
ಸುಚಕ್ರಿಣಸ್ತಸ್ಯ ಮಹಾತ್ಮನಶ್ಚ ॥
ತೇ ವಾಜಪೇಯಸ್ಯ ಫಲಂ ಲಭಂತೇ
ಸರ್ವಾರ್ಥಯುಕ್ತಾಶ್ಚ ನರಾ ಭವಂತಿ ॥ ೭೨ ॥

ನಾರಾಯಣಂ ದುಃಖವಿನಾಶನಂ ತಂ
ಮಾಯಾವಿಹೀನಂ ಸಕಲಂ ಗುಣಜ್ಞಂ ॥

---

೭೦. ಎಲ್ಲಿ ವಿಷ್ಣುವಿನ ಪಾದೋದಕವಿರುತ್ತದೋ, ಅಲ್ಲಿ ಗಂಗಾದಿ ತೀರ್ಥಗಳಿರುತ್ತವೆ. ಆ ಪಾದೋದಕದಲ್ಲಿ ಸ್ನಾನಮಾಡಿದವರು ಪಾಪರಹಿತರಾಗಿ ವೈಕುಂಠವನ್ನು ಹೊಂದುತ್ತಾರೆ.

೭೧. ಮಹಾ ಉಗ್ರವಾದ ಪಾಪಗಳಿಂದ ಕೂಡಿದವರೂ ಕೂಡ ಆ ಸ್ವಾಮಿಯ ಪಾದೋದಕವನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡರೆ ಅವರು ಮುಕ್ತಿಯನ್ನು ಹೊಂದುತ್ತಾರೆ. ಅಂತಹ ಸ್ವಾಮಿಯ ಪಾದಗಳನ್ನು ನಮಸ್ಕರಿಸುತ್ತೇನೆ.

೭೨. ಮಹಾತ್ಮನಾದ ಆ ಚಕ್ರಿಗೆ ನೈವೇದ್ಯಮಾಡಿದುದನ್ನು ತಿಂದರೆ, ಅವರು ವಾಜಪೇಯಯಾಗದ ಫಲವನ್ನು ಹೊಂದುತ್ತಾರೆ. ಇಷ್ಟಾರ್ಥವನ್ನು ಹೊಂದುತ್ತಾರೆ.

೭೩. ದುಃಖನಾಶಕನಾದ, ಮಾಯೆಯು ಮುಟ್ಟದ, ಗುಣವನ್ನು ಎಣಿಸುವ ನಾರಾಯಣನನ್ನು ಧ್ಯಾನಿಸಿ ಒಳ್ಳೆಯ ಗತಿಯನ್ನು ಹೊಂದುತ್ತಾರೋ ಅಂಥ ನಾರಾಯಣನ ಪಾದಗಳನ್ನು ನಮಸ್ಕರಿಸುತ್ತೇನೆ.

ಯಂ ಧ್ಯಾಯಮಾನಾಃ ಸುಗತಿಂ ವ್ರಜಂತಿ
ತಂ ವಾಸುದೇವಂ ಸತತಂ ನಮಾಮಿ ॥ ೭೯ ॥

ಯೋ ವನ್ದ್ಯಸ್ತ್ವೃಷಿಸಿದ್ಧಚಾರಣಗಣೈರ್ದೇವೈಃ ಸದಾ ಪೂಜ್ಯತೇ
ಯೋ ವಿಶ್ವಸ್ಯ ಹಿ ಸೃಷ್ಟಿಹೇತುಕರಣೇ ಬ್ರಹ್ಮಾದಿಕಾನಾಂ ಪ್ರಭುಃ ॥
ಯಸ್ಸಂಸಾರಮಹಾರ್ಣವೇ ನಿಪತಿತಸ್ಯೋದ್ಧಾರಕೋ ವತ್ಸಲ
ಸ್ತಸ್ಯೈವಾಪಿ ನಮಾಮ್ಯಹಂ ಸುಚರಣೌ ಭಕ್ತ್ಯಾ ವರೌ ಸಾಧಕೌ ॥ ೭೪ ॥

ಯೋ ದೃಷ್ಟೋ ನಿಜಮಂಟಪೇ ಸುರಗುಣೈಃ ಶ್ರೀವಾಮನಃ ಸಾಮಗಃ ।
ಸಾಮೋದ್ಗೀತಕುತೂಹಲಃ ಸುರಗಣೈಸ್ತ್ರೈಲೋಕ್ಯ ಏಕಃ ಪ್ರಭುಃ ॥
ಕುರ್ವಂಸ್ತು ಧ್ವನಿತೈಃ ಸ್ವಕೈರ್ಗತಭಯಾನ್ಯಃ ಪಾಪಭೀತಾನ್ರಣೇ ।
ತಸ್ಯಾಹಂ ಚರಣಾರವಿಂದಯುಗಳಂ ವಂದೇ ಪರಂ ಪಾವನಂ ॥ ೭೫ ॥

ರಾಜನ್ತಂ ನಿಜಮಂಡಲೇ ಮಖಮುಖೇ ಬ್ರಹ್ಮಶ್ರಿಯಾ ಪೂಜಿತಂ
ದಿವ್ಯೇನಾಪಿ ಸ್ವತೇಜಸಾ ಕರಮಯಂ ಯಂ ಚೇನ್ದ್ರನೀಲೋಪಮಂ ॥
ದೇವಾನಾಂ ಹಿತಕಾಮ್ಯಯಾ ಸುತನುಜಂ ವೈರೋಚನಸ್ಯಾರ್ಪಕಂ
ದಾಸತ್ವಂ ಮಮ ದೀಯತಾಂ ಸುರಪತೇ ವಂದೇ ಪರಂ ಪಾವನಂ ॥ ೭೬ ॥

---

೭೪. ಋಷಿಗಳು, ಸಿದ್ಧರು, ಚಾರಣರು, ದೇವತೆಗಳು ಯಾವನನ್ನು ಸದಾ ಪೂಜಿಸುತ್ತಾರೆಯೋ ಯಾವನು ಲೋಕಸೃಷ್ಟಿವಿಷಯದಲ್ಲಿ ಬ್ರಹ್ಮಾದಿಗಳಿಗೂ ಒಡೆಯನೋ, ಯಾವನು ಸಂಸಾರಸಮುದ್ರದಲ್ಲಿ ಬಿದ್ದವರನ್ನು ಉದ್ಧರಿಸುತ್ತಾನೋ ಅಂಥವನ ಪಾದಗಳನ್ನು ಭಕ್ತಿಯಿಂದ ನಮಿಸುತ್ತೇನೆ.

೭೫. ಸಾಮಗಾನಮಾಡುತ್ತಿದ್ದ ವಾಮನರೂಪಿಯಾದ ಯಾವನನ್ನು ದೇವತೆಗಳು ಅವನ ಆಶ್ರಮದಲ್ಲಿ ನೋಡಿದರೋ, ಯಾವನಿಗೆ ಸಾಮಗಾನದಲ್ಲಿ ಕುತೂಹಲವೋ, ಯಾವನು ಲೋಕಕ್ಕೆಲ್ಲಾ ಒಬ್ಬನೇ ಪ್ರಭುವೋ, ಯುದ್ಧದಲ್ಲಿ ತನ್ನ ಧ್ವನಿಯಿಂದಲೇ ಯಮನ ಭಯವನ್ನು ನಾಶಮಾಡುತ್ತಾನೋ ಅವನ ಪಾದಗಳನ್ನು ನಮಿಸುತ್ತೇನೆ.

೭೬. ಯಜ್ಞದ ವೇದಿಕೆಯಲ್ಲಿ ಬ್ರಹ್ಮತೇಜಸ್ಸಿನಿಂದ ರಾಜಿಸುವ, ಇಂದ್ರನೀಲದಂತಿರುವ ಕೈಯನ್ನು ಬಲಿಯಲ್ಲಿ ಯಾಚನೆಗೋಸ್ಕರ ನೀಡಿದ ಆ ಸ್ವಾಮಿಯು ತನಗೆ ದಾಸನಾಗಿರುವಿಕೆಯನ್ನು ನನಗುಂಟುಮಾಡಲಿ.

ತಂ ದೃಷ್ಟಂ ರವಿಮಂಡಲೇ ಮುನಿಗಣೈಸ್ಸಂಪ್ರಾಪ್ತವಸ್ತಂ ದಿವಂ ।
ಚಂದ್ರಾರ್ಕೌ ತು ತಪಂತಮೇವ ಸಹಸಾ ಸಂಪ್ರಾಪ್ತವಂತೌ ಸದಾ ॥
ತಸ್ಯೈವಾಪಿ ಸುಚಕ್ರಿಣಃ ಸುರಗಣಾಃ ಪ್ರಾಪುರ್ಲಯಂ ಸಾಂಪ್ರತಂ ।
ಕಾಯೇ ವಿಶ್ವವಿಕೋಶಕೇ ತಮತುಲಂ ನೌಮಿ ಪ್ರಭುಂ ವಿಕ್ರಮಂ ॥ ೭೭ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಅಷ್ಟಾನವತಿತಮೋಽಧ್ಯಾಯಃ**



೭೭. ಆಕಾಶದಲ್ಲಿ ಸೂರ್ಯಮಂಡಲದಲ್ಲಿ ಯಾವನು ಗೋಚರನಾಗುವನೋ ಸ್ವರ್ಗವನ್ನು ಹೊಂದಲು ಮುನಿಗಳು ಸೂರ್ಯಚಂದ್ರರಂತೆ ಪ್ರಕಾಶಿಸುವ ಯಾವನನ್ನೇ ಯಾವಾಗಲೂ ಹೊಂದಿರುತ್ತಾರೋ, ಎಂತಹ ಚಕ್ರಿಯ ದೇಹದಲ್ಲಿ ದೇವತೆಗಳೆಲ್ಲಾ ಅಡಗುತ್ತಾರೊ, ಪ್ರಪಂಚದ ಕೋಶವಾದ ಅಂತಹ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ.
ತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ನವನವತಿತಮೋಽಧ್ಯಾಯಃ

॥ ವಿಷ್ಣುರುವಾಚ ॥

ಸ್ತೋತ್ರಂ ಪವಿತ್ರಂ ಪರಮಂ ಪುರಾಣಂ
ಪಾಪಾಪಹಂ ಪುಣ್ಯಮಯಂ ಶಿವಂ ಚ ॥
ಧನ್ಯಂ ಸುಸೂಕ್ತಂ ಪರಮಂ ಸುಜಾಪ್ಯಂ
ನಿಶಮ್ಯ ರಾಜನ್ಸ ಸುಖೀ ಬಭೂವ ॥ ೧ ॥

ಗತಾ ಸುತೃಷ್ಣಾ ಕ್ಷುಧಯಾ ಸಮೇತಾ
ದೇವೋಪಮೋ ಭೂಮಿಪತಿರ್ಬಭೂವ ॥
ಭಾರ್ಯಾ ಚ ರಾಜ್ಞಃ ಸುಭಗಾ ಬಭೂವ
ಜಾತಾವುಭೌ ಪಾಪವಿಮುಕ್ತದೇಹೌ ॥ ೨ ॥

---

## ತೊಂಭತ್ತೊಂಭತ್ತನೆಯ ಅಧ್ಯಾಯವು

೧. ಈ ಸ್ತೋತ್ರವು ಪವಿತ್ರವಾದುದು. ಉತ್ತಮವಾದುದು. ಪಾಪನಾಶಕವು. ಪುಣ್ಯಪ್ರದವು. ಮಂಗಳಕರವು. ಧನ್ಯವಾದುದು. ಯುಕ್ತವಾದುದು. ಜಪಿಸಲು ಯೋಗ್ಯವಾದುದು. ಇಂತಹದನ್ನು ಕೇಳಿ ರಾಜನು ಸುಖಿಯಾದನು.

೨. ಆ ರಾಜನಿಗೆ ಬಾಯಾರಿಕೆಯೂ, ಹಸಿವೂ ಹೋದವು. ದೇವತೆಗಳಂತಾದನು. ರಾಜನ ಹೆಂಡತಿಯೂ ಕೂಡ ಪ್ರಕಾಶಮಾನಳಾದಳು. ಅವರ ಪಾಪವು ಹೋಯಿತು.

ಹರಿಸ್ತು ದೇವಃ ಪ್ರಭುರಾವಿರಾಸೀತ್
ವಿಪ್ರೈಃ ಸುಪುಣ್ಯೈರ್ಹರಿಭಕ್ತಿಯುಕ್ತೈಃ ॥
ಆಗತ್ಯ ಭೂಪಂ ಗತಕಲ್ಮಷಂ ತಂ
ಶ್ರೀಶಂಖಚಕ್ರಾಬ್ಜಗದಾಸಿಧರ್ತಾ ॥ ೩ ॥

ಶ್ರೀ ನಾರದೋ ಭಾರ್ಗವವ್ಯಾಸಮುಖ್ಯಾಃ
ಸಮಾಗತಾಸ್ತತ್ರ ಮೃಕಂಡುಸೂನುಃ ॥
ವಾಲ್ಮೀಕಿನಾಮಾ ಮುನಿರ್ವಿಷ್ಣುಭಕ್ತಃ
ಸಮಾಗತೋ ಬ್ರಹ್ಮಸುತೋ ವಸಿಷ್ಠಃ ॥ ೪ ॥

ಗರ್ಗೋ ಮಹಾತ್ಮಾ ಹರಿಭಕ್ತಿಯುಕ್ತೋ
ಜಾಬಾಲಿರೈಭ್ಯಾವಥ ಕಾಶ್ಯಪಶ್ಚ ॥
ಆಜಗ್ಮುರೇತೇ ಹರಿಣಾ ಸಮೇತಾ
ವಿಷ್ಣುಪ್ರಿಯಾ ಭಾಗವತಾಂ ವರಿಷ್ಠಾಃ ॥ ೫ ॥

ಪುಣ್ಯಾಃ ಸುಧನ್ಯಾ ಗತಕಲ್ಮಷಾಸ್ತೇ
ಹರೇಸ್ಸ್ವಪಾದಾಂಬುಜಭಕ್ತಿಲೀನಾಃ ॥
ಶ್ರೀ ವಾಸುದೇವಂ ಪರಿವಾರ್ಯ ತಸ್ಥುಃ
ಸ್ತುವಂತಿ ಭೂಪಂ ವಿವಿಧಪ್ರಕಾರೈಃ ॥ ೬ ॥

---

೩. ಹರಿಯು ಶಂಖ, ಚಕ್ರ, ಗದೆಗಳನ್ನು ಧರಿಸಿಬಂದು ವೈಷ್ಣವರಾದ ಬ್ರಾಹ್ಮಣರೊಡನೆ ಆ ನಿಷ್ಪಾಪನಾದ ರಾಜನಿಗೆ ಪ್ರತ್ಯಕ್ಷನಾದನು.

೪. ನಾರದ, ಭಾರ್ಗವ, ವ್ಯಾಸ, ಮಾರ್ಕಂಡೇಯ, ವಾಲ್ಮೀಕಿ, ವಸಿಷ್ಠ ಇವರೆಲ್ಲರೂ ಅಲ್ಲಿಗೆ ಬಂದರು.

೫. ಗರ್ಗ, ಜಾಬಾಲಿ, ರೈಭ್ಯ, ಕಾಶ್ಯಪ, ಈ ಭಾಗವತಶ್ರೇಷ್ಠರು ಹರಿಯೊಡನೆ ಬಂದರು.

೬. ಅವರೆಲ್ಲರೂ ಪುಣ್ಯವಂತರು, ಧನ್ಯರು, ಪಾಪರಹಿತರು, ಹರಿಭಕ್ತರು, ವಾಸುದೇವನನ್ನು ಸುತ್ತಿಕೊಂಡು ಹೊಗಳುತ್ತಾ ರಾಜನನ್ನು ಸ್ತೋತ್ರಮಾಡಿದರು.

ದೇವಾಶ್ಚ ಸರ್ವೇ ಹುತಭುಙ್ಮುಖಾಶ್ಚ
ಬ್ರಹ್ಮಾ ಹರಶ್ಚಾಪಿ ಸ ದೇವದೇವಃ ॥
ಗಾಯಂತಿ ದಿವ್ಯಂ ಮಧುರಂ ಮನೋಹರಂ
ಗಂಧರ್ವರಾಜಾದಿಸುಗಾಯಕಾಶ್ಚ ॥ ೭ ॥

ಸುದೇವಯುಕ್ತೈಃ ಪರಮಾರ್ಥಸಂಮಿತೈಃ
ಸ್ತನ್ವೈಸ್ಸುಪುಣ್ಯೈರ್ಮುನಯಸ್ಸ್ತುವಂತಿ ॥
ಉಚ್ಚೈಸ್ತರಾಂ ಭೂಪತಿಮೇವ ದೇವತಾ
ಹರಿರ್ಬಭಾಷೇ ವಚನಂ ಮನೋಹರಂ ॥ ೮ ॥

ವರಂ ಯಥೇಷ್ಟಂ ವರಯಸ್ವ ಭೂಪತೇ
ದದಾಮ್ಯಹಂ ತೇ ಪರಿತೋಷತೋ ಯತಃ ॥
ಹರೇಸ್ತು ವಾಕ್ಯಂ ಸ ನಿಶಮ್ಯ ರಾಜಾಃ
ದೃಷ್ಟ್ವಾ ಮುರಾರಿಂ ವದಮಾನಮಗ್ರೇ ॥ ೯ ॥

ನೀಲೋತ್ಪಲಾಭಂ ಮುರಘಾತಿನಂ ಪ್ರಭುಂ
ಶಂಖಾಬ್ಜಚಕ್ರಾಸಿಗದಾಪ್ರಧಾರಿಣಂ ॥
ಶ್ರಿಯಾ ಸಮೇತಂ ಪರಮೇಶ್ವರಂ ತಂ
ರತ್ನೋಜ್ಜ್ವಲಂ ಕಂಕಣಹಾರಭೂಷಿತಂ ॥ ೧೦ ॥

---

೭. ದೇವತೆಗಳಾದ, ಬ್ರಹ್ಮ, ರುದ್ರ, ಗಂಧರ್ವಶ್ರೇಷ್ಠರೂ ಕೂಡ ಒಳ್ಳೆಯ ಗಾಯನದಿಂದ ಅವನನ್ನು ಹೊಗಳುತ್ತಿದ್ದರು.

೮. ಋಷಿಗಳೂ ಕೂಡ ಪರಮಾರ್ಥವುಳ್ಳ ವೇದಗಳ ಋಕ್ಕುಗಳಿಂದ ಆ ರಾಜನನ್ನು ಸ್ತೋತ್ರಮಾಡುತ್ತಿದ್ದರು. ಆಗ ಹರಿಯು ರಾಜನನ್ನು ಕುರಿತಿಂತೆಂದನು.

೯. ಎಲೈ ರಾಜನೇ, ನಿನಗೆ ಬೇಕಾದ ವರವನ್ನು ಬೇಡಿಕೋ. ಸಂತೋಷದಿಂದ ಕೊಡುತ್ತೇನೆ. ಈ ರೀತಿ ಎದುರುಗಡೆಯಲ್ಲಿ ಮಾತನಾಡುತ್ತಿರುವ ಹರಿಯ ಮಾತನ್ನು ರಾಜನು ಕೇಳಿ,

೧೦. ನೀಲೋತ್ಪಲದಂತೆ ಕಾಂತಿಯುಳ್ಳ, ಮುರನನ್ನು ಕೊಂದ, ಶಂಖಚಕ್ರಗಳನ್ನು ಧರಿಸಿರುವ, ಲಕ್ಷ್ಮಿಯಿಂದ ಕೂಡಿರುವ, ಹಾರಾದಿಗಳಿಂದ ಭೂಷಿತನಾದ ಸ್ವಾಮಿಯನ್ನು ನೋಡಿದನು.

ರವಿಪ್ರಭಂ ದೇವಗಣೈಸ್ಸುಸೇವಿತಂ
ಮಹಾರ್ಹಹಾರಾಭರಣೈಃ ಸುಭೂಷಿತಂ ॥
ಸುದಿವ್ಯಗಂಧೈರ್ವರಲೇಪನೈರ್ಹರಿಂ
ಸುಭಕ್ತಿಭಾವೈರವನೀಂ ಗತೋ ನೃಪಃ ॥ ೧೧ ॥

ದಂಡಪ್ರಣಾಮೈಸ್ಸತತಂ ನನಾಮ
ಜಯೇತ್ಯುವಾಚಾಥ ಮಹಾಮುದಂ ಗತಃ ॥
ದಾಸೋಽಸ್ಮಿ ಭೃತ್ಯೋಽಸ್ಮಿ ಸುರೇಶ ತೇ ಸದಾ
ಭಕ್ತಿಂ ನ ಜಾನೇ ತವ ಭಾವಮುತ್ತಮಂ ॥ ೧೨ ॥

ಜಾಯಾನ್ವಿತಂ ಮಾಮಿಹ ಚಾಗತಂ ಹರೇ
ಪ್ರಸಾಹಿ ವೈ ತ್ವಾಂ ಶರಣಂ ಪ್ರಪನ್ನಂ ॥
ಧನ್ಯಾಸ್ತು ತೇ ಮಾಧವ ಮಾನವಾ ದ್ವಿಜಾಃ
ಸದೈವ ಯೇ ಧ್ಯಾನಮನೋವಿಲೀನಾಃ ॥ ೧೩ ॥

ಸಮುಚ್ಚರಂತೋ ಭವ ಕೇಶವೇತಿ
ಪ್ರಯಾಂತಿ ವೈಕುಂಠಮಿತಃ ಸುನಿರ್ಮಲಾಃ ॥

---

೧೧. ಸೂರ್ಯನಂತೆ ಪ್ರಕಾಶವುಳ್ಳ ದೇವತೆಗಳಿಂದ ಸೇವಿಸಲ್ಪಡುತ್ತಿರುವ, ಹಾರಾದಿಗಳಿಂದ ಭೂಷಿತನಾದ, ಗಂಧಾದಿಗಳಿಂದ ಲೇಪಿತನಾದ, ಸ್ವಾಮಿಯನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿದನು.

೧೨. ದಂಡನಮಸ್ಕಾರಗಳನ್ನು ಅನೇಕವಾಗಿ ಮಾಡಿ ಜಯಜಯ ಎಂಬುದಾಗಿ ಹೇಳುತ್ತಾ, ಸಂತೋಷಪಟ್ಟನು. ದಾಸನಾಗಿದ್ದೇನೆ. ಆಳಾಗಿದ್ದೇನೆ. ಭಕ್ತಿಯನ್ನು ತಿಳಿಯೆ. ಉತ್ತಮವಾದ ಭಾವವನ್ನೂ ತಿಳಿಯೆ. ಎಂದು ಹೊಗಳಿದನು.

೧೩. ಹೆಂಡತಿಯೊಡನೆ ಇಲ್ಲಿಗೆ ಬಂದಿರುವ ನನ್ನನ್ನು ಎಲೈ ಹರಿಯೇ, ನೀನು ಕಾಪಾಡು. ಶರಣಾಗತನಾಗಿದ್ದೇನೆ. ಎಲೈ ಮಾಧವನೇ, ಯಾರು ನಿನ್ನ ಧ್ಯಾನದಲ್ಲಿಯೇ ಮಗ್ನರಾಗಿದ್ದಾರೋ, ಅವರೇ ಧನ್ಯರು.

೧೪. ಭವ, ಕೇಶವ ಎಂದು ಉಚ್ಚಾರಣೆಮಾಡಿದರೆ ಅವರು ವೈಕುಂಠವನ್ನು ಹೊಂದುತ್ತಾರೆ. ನಿನ್ನ ಪಾದೋದಕವನ್ನು ತಲೆಯ ಮೇಲೆ ಚುಮುಕಿಸಿಕೊಂಡರೆ

ತಸ್ಯೈವ ಪಾದಾಂಬುಜಮರ್ಚನಂ ಪಯಃ
ಪುಣ್ಯಂ ತಥಾ ಯೇ ಶಿರಸಾ ವಹಂತಿ ॥
ಸಮಸ್ತತೀರ್ಥೋದ್ಭವತೋಯಸಂಪ್ಲುತಾ
ಸ್ತೇ ಮಾನವಾ ಯಾಂತಿ ಹರೇಶ್ಚ ಧಾಮ ॥ ೧೪ ॥

ನಾಸ್ತಿ ಯೋಗೋ ನ ಮೇ ಭಕ್ತಿರ್ನಾಸ್ತಿ ಜ್ಞಾನಂ ನ ಮೇ ಕ್ರಿಯಾ ।
ಕಸ್ಯ ಪುಣ್ಯಸ್ಯ ಸಂಗೇನ ವರಂ ಪಾಪೇ ಪ್ರಯಚ್ಛಸಿ ॥ ೧೫ ॥

॥ ಹರಿರುವಾಚ ॥

ವಾಸುದೇವಾಭಿಧಾನಂ ಯನ್ಮಹಾಪಾತಕನಾಶನಂ ।
ಭವತಾ ವಿಜ್ವಲಾತ್ಪುಣ್ಯಾಚ್ಛ್ರುತಂ ರಾಜನ್ನಿಕಲ್ಮಷಂ ॥ ೧೬ ॥

ತೇನ ತ್ವಂ ಮುಕ್ತಿಭಾಗೀ ಚ ಸಂಜಾತೋ ನಾತ್ರ ಸಂಶಯಃ ।
ಮಮ ಲೋಕೇ ಪ್ರಭುಂಕ್ಷ್ವ ತ್ವಂ ದಿವ್ಯಾನ್ಭೋಗಾನ್ಮನೋನುಗಾನ್ ॥ ೧೭ ॥

ಯದಿ ದೇವ ವರೋ ದೇಯೋ ಮಹ್ಯಂ ದೀನಾಯ ವೈ ತ್ವಯಾ
ವಿಜ್ವಲಾಯ ಪ್ರಯಚ್ಛ ತ್ವಂ ಪ್ರಥಮಂ ವರಮುತ್ತಮಂ ॥ ೧೮ ॥

---

ಅವರೂ ಕೂಡ ವೈಕುಂಠಕ್ಕೆ ಹೋಗುತ್ತಾರೆ. ಆ ಪಾದಾಂಬುವೇ ಸಕಲ ತೀರ್ಥಗಳ ಪುಣ್ಯವನ್ನೂ ಕೊಡುತ್ತದೆ. ಆದ್ದರಿಂದ ಅವರು ವೈಕುಂಠವನ್ನು ಹೊಂದುತ್ತಾರೆ.

೧೫. ನಾನು ಯೋಗವನ್ನು ತಿಳಿಯೆ. ಭಕ್ತಿಯು ನನಗಿಲ್ಲ. ಜ್ಞಾನವನ್ನು ತಿಳಿಯೆ. ಕ್ರಿಯೆಯಂತೂ ಇಲ್ಲವೇ ಇಲ್ಲ. ಈ ರೀತಿಯಾದ ಪಾಪಿಗೆ ಯಾವ ಪುಣ್ಯವಿದೆಯೆಂದು ವರವನ್ನು ಕೊಡುತ್ತೀಯೆ? ಎಂದನು.

೧೬. ಹರಿಯು ಹೇಳಿದನು:—ಮಹಾಪಾತಕಗಳನ್ನು ನಾಶಮಾಡುವ ವಾಸುದೇವಾಭಿಧಾನವೆಂಬ ಸ್ತೋತ್ರವನ್ನು ನೀನು ನಿಷ್ಕಲ್ಮಷನಾದ ವಿಜ್ವಲನಿಂದ ಕೇಳಿದೆಯಷ್ಟೇ!

೧೭. ಅದರಿಂದ ನೀನು ಮುಕ್ತಿಗೆ ಭಾಗಿಯಾದೆ, ಸಂಶಯವಿಲ್ಲ. ನನ್ನ ಲೋಕದಲ್ಲಿ ಉತ್ತಮವಾದ ಭೋಗಗಳನ್ನು ನೀನು ಅನುಭವಿಸು.

೧೮. ಸುಬಾಹುವು ಹೇಳಿದಳು:—ಎಲೈ ಸ್ವಾಮಿಯೇ, ನನಗೆ ನೀನು ವರ ಕೊಡಬೇಕೆಂದಿದ್ದರೆ ಮೊದಲು ವಿಜ್ವಲನಿಗೆ ವರವನ್ನು ಕೊಡು.

॥ ಹರಿರುವಾಚ ॥

ವಿಜ್ವಲಸ್ಯ ಪಿತಾ ಪುಣ್ಯಃ ಕುಂಜಲೋ ಜ್ಞಾನಪಂಡಿತಃ ।
ವಾಸುದೇವಮಹಾಸ್ತೋತ್ರಂ ನಿತ್ಯಂ ಜಪತಿ ಭೂಪತೇ ॥ ೧೯ ॥

ಪುತ್ರೈಶ್ಚ ಪ್ರಿಯಯಾ ಚೈವ ಸಮೇತೋ ಮಾಂ ಪ್ರಪತ್ಸ್ಯತಿ ।
ಯಶ್ಚೈವಂ ಜಪತಿ ಸ್ತೋತ್ರಂ ತಸ್ಯ ದಾಸ್ಯೇ ಮಹತ್ಫಲಂ ॥ ೨೦ ॥

ಏವಮುಕ್ತೇ ಶುಭೇ ವಾಕ್ಯೇ ರಾಜಾ ಕೇಶವಮಬ್ರವೀತ್ ।
ಇದಂ ಸ್ತೋತ್ರಂ ಮಹಾಪುಣ್ಯಂ ಸಫಲಂ ಕುರು ಕೇಶವ ॥ ೨೧ ॥

॥ ವಾಸುದೇವ ಉವಾಚ ॥

ಸತ್ಯೇ ಯುಗೇ ಮಹಾರಾಜ ಯದಾ ಸ್ತೋಷ್ಯತಿ ಮಾನವಃ ।
ತದಾ ಮೋಕ್ಷಂ ಪ್ರದಾಸ್ಯಾಮಿ ತತ್ಕ್ಷಣಾನ್ನಾತ್ರ ಸಂಶಯಃ ॥ ೨೨ ॥

ತ್ರೇತಾಯಾಂ ಮಾಸಮಾತ್ರೇಣ ಮಾಸಷಟ್ಕೇಣ ದ್ವಾಪರೇ ।
ವರ್ಷೈಕೇಣ ಕಲೌ ಪ್ರಾಪ್ತೇ ಯೇ ಜಪಂತಿ ಚ ಮಾನವಾಃ ॥ ೨೩ ॥

---

೧೯. ಹರಿಯು ಹೇಳಿದನು:—ವಿಜ್ವಲನ ತಂದೆಯಾದ ಕುಂಜಲನು ಜ್ಞಾನಿಯು, ಪುಣ್ಯವಂತನು. ಈ ಸ್ತೋತ್ರವನ್ನು ದಿನವೂ ಜಪಿಸುತ್ತಾನೆ.

೨೦. ಆತನು ಹೆಂಡತಿಮಕ್ಕಳೊಂದಿಗೆ ಕೂಡಿ ನನ್ನನ್ನೇ ಹೊಂದುತ್ತಾನೆ. ಯಾವನು ಈ ಸ್ತೋತ್ರವನ್ನು ಜಪಿಸುತ್ತಾನೋ ಅವನಿಗೆ ಮಹಾಫಲವನ್ನು ಕೊಡುತ್ತೇನೆ.

೨೧. ಈ ಮಾತನ್ನು ಹೇಳುತ್ತಲೂ ರಾಜನು ಎಲೈ ಕೇಶವನೇ, ಈ ಸ್ತೋತ್ರವನ್ನು ಸಫಲವಾಗಿ ಮಾಡು ಎಂದನು.

೨೨. ವಾಸುದೇವನು ಹೇಳಿದನು:—ಕೃತಯುಗದಲ್ಲಿ ಈ ಸ್ತೋತ್ರವನ್ನು ಮನುಷ್ಯನು ಹೇಳಿದ ಕೂಡಲೇ ಮೋಕ್ಷವನ್ನು ಕೊಡುತ್ತೇನೆ, ಸಂಶಯವಿಲ್ಲ.

೨೩. ತ್ರೇತಾಯುಗದಲ್ಲಿ ಒಂದು ತಿಂಗಳವರೆಗೂ, ದ್ವಾಪರಯುಗದಲ್ಲಿ ಆರು ತಿಂಗಳವರೆಗೂ, ಕಲಿಯುಗದಲ್ಲಿ ಒಂದು ವರ್ಷದವರೆಗೂ ಜಪಮಾಡುತ್ತಿದ್ದರೆ ಫಲವನ್ನು ಕೊಡುತ್ತೇನೆ.

ಸ್ವರ್ಗಂ ಯಾಸ್ಯಂತಿ ರಾಜೇಂದ್ರ ವೈಷ್ಣವಂ ಗತಿದಾಯಕಂ ।
ತ್ರಿಕಾಲಮೇಕಕಾಲಂ ವಾ ಸ್ನಾತೋ ಜಪತಿ ಬ್ರಾಹ್ಮಣಃ ॥ ೨೪ ॥

ಯಂ ಯಂ ತು ವಾಂಛತೇ ಕಾಮಂ ಸ ಸ ತಸ್ಯ ಭವಿಷ್ಯತಿ ।
ಕ್ಷತ್ರಿಯೋ ಜಯಮಾಪ್ನೋತಿ ಧನಧಾನ್ಯೈರಲಂಕೃತಃ ॥ ೨೫ ॥

ವೈಶ್ಯೋ ಭವಿಷ್ಯತಿ ಶ್ರೀಮಾನ್ ಶೂದ್ರಃ ಸುಖಮವಾಪ್ನುಯಾತ್ ।
ಅಥ ಯಶ್ಶ್ರಾವಯೇತ್ ಸ್ತೋತ್ರಂ ಪಾಪಾನ್ಮುಕ್ತೋ ಭವಿಷ್ಯತಿ ॥ ೨೬ ॥

ಶ್ರಾವಕೋ ನರಕಂ ಘೋರಂ ಕದಾಚಿನ್ನೈವ ಪಶ್ಯತಿ ।
ಮಮ ಸ್ತೋತ್ರಪ್ರಸಾದಾಚ್ಚ ಸರ್ವಸಿದ್ಧೋ ಭವಿಷ್ಯತಿ ॥ ೨೭ ॥

ಭುಂಜಾನೇಷು ಚ ವಿಪ್ರೇಷು ಶ್ರಾದ್ಧಕಾಲೇ ತು ಯಃ ಪಠೇತ್ ।
ಪಿತರೋ ವೈಷ್ಣವಂ ಲೋಕಂ ತೃಪ್ತಾ ಯಾಸ್ಯಂತಿ ಭೂಪತೇ ॥ ೨೮ ॥

---

೨೪. ಆ ರೀತಿ ಜಪಮಾಡಿದವರು ಸ್ವರ್ಗವನ್ನು ಹೊಂದುತ್ತಾರೆ. ಬ್ರಾಹ್ಮಣನು ತ್ರಿಕಾಲದಲ್ಲಿಯೂ ಅಥವಾ ಏಕಕಾಲದಲ್ಲಿಯಾದರೂ ಭಜಿಸಬೇಕು. ಸ್ವರ್ಗವು ಲಭಿಸುತ್ತದೆ.

೨೫-೨೬. ಹಾಗೆ ಬ್ರಾಹ್ಮಣನು ಜಪಿಸಿದರೆ ಅವನಿಗೆ ಬೇಕಾದುವೆಲ್ಲಾ ಸಿದ್ಧಿಸುತ್ತವೆ. ಕ್ಷತ್ರಿಯನು ತ್ರಿಕಾಲದಲ್ಲಿ ಅಥವಾ ಒಪ್ಪತ್ತು ಜಪಿಸಿದರೆ ಜಯಶಾಲಿಯಾಗುತ್ತಾನೆ. ವೈಶ್ಯನು ಅಂತೆಯೇ ಜಪಿಸಿದರೆ ಧನಧಾನ್ಯಗಳಿಂದ ಕೂಡಿ ಶ್ರೀಮಂತನಾಗುತ್ತಾನೆ. ಶೂದ್ರನು ಜಪಿಸಲು ಸುಖಿಯಾಗುತ್ತಾನೆ. ಮತ್ತೊಬ್ಬರಿಗೆ ಈ ಸ್ತೋತ್ರವನ್ನು ಶ್ರವಣಮಾಡಿಸಿದರೂ ಪಾಪದಿಂದ ಬಿಡಲ್ಪಡುತ್ತಾನೆ.

೨೭. ಕೇಳಿದವನು ನರಕವನ್ನು ನೋಡುವುದೂ ಇಲ್ಲ. ನನ್ನ ಸ್ತೋತ್ರದ ಪ್ರಭಾವದಿಂದ ಸರ್ವಸಿದ್ಧಿಯನ್ನು ಹೊಂದುತ್ತಾನೆ.

೨೮. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಊಟಮಾಡುತ್ತಿದ್ದಾಗ ಹೇಳಿದರೆ ಪಿತೃಗಳು ತೃಪ್ತರಾಗಿ ವೈಷ್ಣವಲೋಕವನ್ನು ಹೊಂದುತ್ತಾರೆ.

**ತರ್ಪಣಾಂತೇ ಜಪಂ ಕುರ್ಯಾದ್ಬ್ರಾಹ್ಮಣೋ ವಾಪಿ ಕ್ಷತ್ರಿಯಃ ।**
**ಪಿಬಂತಿ ಚಾಮೃತಂ ತಸ್ಯ ಪಿತರೋ ಹೃಷ್ಟಮಾನಸಾಃ ॥ ೨೯ ॥**

**ಹೋಮೇ ಚ ಯಜ್ಞಮಧ್ಯೇ ಚ ಭಾವಾಜ್ಜಪತಿ ಮಾನವಃ ।**
**ತತ್ರ ವಿಘ್ನಾ ನ ಜಾಯಂತೇ ಸರ್ವಸಿದ್ಧಿರ್ಭವಿಷ್ಯತಿ ॥ ೩೦ ॥**

**ವಿಷಮೇ ದುರ್ಗಸಂಸ್ಥಾನೇ ಸಿಂಹವ್ಯಾಘ್ರಭಯೇಷು ಚ ।**
**ಚೌರಾಣಾಂ ಸಂಕಟೇ ಪ್ರಾಪ್ತೇ ತತ್ರ ಸ್ತೋತ್ರಮುದೀರಯೇತ್ ॥ ೩೧ ॥**

**ತತ್ರಾಭಯಂ ಮಹಾರಾಜ ಸ್ತೋತ್ರಪಾಠಾದ್ಭವಿಷ್ಯತಿ ।**
**ಅಶೇಷೇಷ್ವೇವ ದುರ್ಗೇಷು ರಾಜದ್ವಾರೇ ಗತೇ ನರೇ ॥ ೩೨ ॥**

**ವಾಸುದೇವಾಭಿಧಾನಸ್ಯ ಅಯುತಂ ಜಪತೇ ನರಃ ।**
**ಬ್ರಹ್ಮಚರ್ಯೇಣ ಚ ಸ್ನಾತಃ ಕ್ರೋಧಲೋಭವಿವರ್ಜಿತಃ ॥ ೩೩ ॥**

**ದ್ವಿಲಕ್ಷಂ ಬಿಲ್ವಕೈರ್ಹೋಮಂ ಘೃತಗುಗ್ಗುಲಸಂಯುತಂ ।**
**ವಾಸುದೇವಂ ಪ್ರಪೂಜ್ಯೈವ ಕುರ್ಯಾತ್ಪ್ರಯತಮಾನಸಃ ॥ ೩೪ ॥**

---

೨೯. ತರ್ಪಣ ಮಾಡಿದಮೇಲೆ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ಇದನ್ನು ಜಪಿಸಿದರೆ ಅವನು ಕೊಟ್ಟ ನೀರನ್ನು ಅಮೃತವೆಂದು ಕುಡಿದು ಪಿತೃಗಳು ಸಂತುಷ್ಟರಾಗುತ್ತಾರೆ.

೩೦. ಹೋಮದಲ್ಲೂ ಯಾಗದ ಮಧ್ಯದಲ್ಲಿಯೂ, ಭಕ್ತಿಯಿಂದ ಭಜಿಸಿದರೆ ವಿಘ್ನವುಂಟಾಗದೇ, ಸರ್ವಸಿದ್ಧಿಯುಂಟಾಗುತ್ತದೆ.

೩೧. ಕಷ್ಟಕಾಲದಲ್ಲಿ, ದುರ್ಗಗಳಲ್ಲಿ, ಸಿಂಹ, ಹುಲಿ, ಮೊದಲಾದುವುಗಳ ಭಯ ಬಂದಾಗ, ಕಳ್ಳರ ಕಾಟದಲ್ಲಿ, ಈ ಸೋತ್ರವನ್ನು ಪಠಿಸಬೇಕು.

೩೨-೩೪. ಅಂತಹ ಕಷ್ಟಗಳಲ್ಲಿ ಭಯವು ಹೋಗುತ್ತದೆ. ಕಷ್ಟಗಳಲ್ಲಿ, ರಾಜನ ಸಭೆಯಲ್ಲಿ, ಈ ಸ್ತೋತ್ರವನ್ನು ಹತ್ತುಸಾವಿರ ಬಾರಿ ಜಪಿಸಬೇಕು. ಬ್ರಹ್ಮಚರ್ಯದಿಂದ ಸ್ನಾನಮಾಡಿ ಕ್ರೋಧಲೋಭಗಳನ್ನು ಬಿಟ್ಟು ಎರಡುಲಕ್ಷ ಬಿಲ್ವಪತ್ರೆಗಳಿಂದ ಹೋಮಮಾಡಬೇಕು. ಜೊತೆಯಲ್ಲಿ ತುಪ್ಪ, ಗುಗ್ಗುಲ ಕೂಡಿರಬೇಕು. ವಾಸುದೇವನನ್ನು ಪೂಜಿಸುತ್ತಾ ಇಷ್ಟು ಮಾಡಬೇಕು.

ಸ್ತೋತ್ರಂ ಪ್ರತಿ ತತೋ ದೇಯೋ ಹೋಮೋ ಧ್ಯಾನೇನ ಮಾನವೈಃ ।
ತೇಷಾಂ ಸುಭೃತ್ಯವರ್ತಿತ್ವಂ ಪಾರ್ಶ್ವಂ ನೈವ ತ್ಯಜಾಮ್ಯಹಂ ॥ ೩೫ ॥

ಕಲೌ ಯುಗೇऽಪಿ ಸಂಪ್ರಾಪ್ತೇ ಸ್ತೋತ್ರೇ ದಾಸ್ಯಂ ಪ್ರಯಾಸ್ಯತಿ ।
ವೇದಭಂಗಪ್ರಸಂಗೇನ ಯಸ್ಯ ಕಸ್ಯ ನ ದೀಯತೆ ॥ ೩೬ ॥

ಸರ್ವಕಾಮಸಮೃದ್ಧಾರ್ಥಃ ಸರ್ವದೈವ ಭವಿಷ್ಯತಿ ।
ಏವಂ ಹಿ ಸಫಲಂ ಸ್ತೋತ್ರಂ ಮಯಾ ಭೂಪ ಕೃತಂ ಶೃಣು ॥ ೩೭ ॥

ಬ್ರಹ್ಮಣಾ ನಿರ್ಮಿತಂ ಸ್ತೋತ್ರಂ ಜಪ್ತಂ ರುದ್ರೇಣ ವೈ ಪುರಾ ।
ಬ್ರಹ್ಮಹತ್ಯಾವಿನಿರ್ಮುಕ್ತ ಇಂದ್ರೋ ಮುಕ್ತಶ್ಚ ಕಿಲ್ಬಿಷಾತ್ ॥ ೩೮ ॥

ದೇವಾಶ್ಚ ಋಷಯಸ್ಸರ್ವೇ ಸಿದ್ಧವಿದ್ಯಾಧರೋರಗಾಃ ।
ಜಪಿತ್ವಾ ಸ್ತೋತ್ರಮೇತತ್ತು ಸಿದ್ಧಿಮಾಪುರ್ಯಥೇಪ್ಸಿತಾಂ ॥ ೩೯ ॥

ಪುಣ್ಯೋ ಧನ್ಯಃ ಸ ವೈ ದಾತಾ ಪುತ್ರವಾನ್ಹಿ ಭವಿಷ್ಯತಿ ।
ಮಮ ಸ್ತೋತ್ರಂ ಪಠೇದ್ಯಸ್ತು ನಾತ್ರ ಕಾರ್ಯಾ ವಿಚಾರಣಾ ॥ ೪೦ ॥

---

೩೫. ಅನಂತರ ಸ್ತೋತ್ರಕ್ಕೆ ಬೇಕಾದ ಹೋಮವನ್ನು ಮಾಡಬೇಕು. ಅನಂತರ ಧ್ಯಾನಿಸಬೇಕು. ಅವರು ನನ್ನಲ್ಲಿ ಭೃತ್ಯಶ್ರೇಷ್ಠರಾಗುತ್ತಾರೆ. ನನ್ನ ಪಾರ್ಶ್ವವನ್ನು ಬಿಟ್ಟು ಕದಲುವುದಿಲ್ಲ.

೩೬-೩೭. ಕಲಿಯುಗವು ಬರಲು ಸ್ತೋತ್ರವು ಕೀಳಾಗುತ್ತದೆ. ಆಗ ವೇದದಂತಿರುವ ಇದನ್ನು ಜನಗಳಿಗೆ ಹೇಳುವರೇ ಹೊರತು ವೇದವನ್ನು ಕೊಡುವುದಿಲ್ಲ. ಇದನ್ನು ಜಪಿಸಿದವನು ಸರ್ವದಾ ಇಷ್ಟಾರ್ಥವನ್ನು ಹೊಂದುತ್ತಾನೆ. ಈ ರೀತಿ ಈ ಸ್ತೋತ್ರವನ್ನು ಸಫಲವನ್ನಾಗಿ ಮಾಡಿದ್ದೇನೆ.

೩೮-೩೯. ಈ ಸ್ತೋತ್ರವನ್ನು ಬ್ರಹ್ಮನು ನಿರ್ಮಿಸಿದನು. ರುದ್ರನು ಜಪಿಸಿದನು. ಇಂದ್ರನು ಜಪಿಸಿ ಪಾಪದಿಂದ ಮುಕ್ತನಾದನು. ದೇವತೆಗಳೂ, ಸಿದ್ಧರೂ, ವಿದ್ಯಾಧರರೂ ಇದನ್ನು ಜಪಿಸಿ ಇಷ್ಟಾರ್ಥವನ್ನು ಹೊಂದಿದರು.

೪೦. ನನ್ನ ಸ್ತೋತ್ರವನ್ನು ಪಠಿಸುವವರು ಪುಣ್ಯವಂತರೂ, ಧನ್ಯರೂ, ಪುತ್ರವಂತರೂ, ದಾತರೂ, ಆಗುತ್ತಾರೆ, ಸಂಶಯವಿಲ್ಲ.

ಆಗಚ್ಛ ತ್ವಂ ಸ್ತ್ರಿಯಾ ಸಾರ್ಧಂ ಮಮ ಸ್ಥಾನಂ ನೃಪೋತ್ತಮ ।
ಹಸ್ತಾವಲಂಬನಂ ದತ್ತಂ ಹರಿಣಾ ತಸ್ಯ ಭೂಪತೇಃ ॥ ೪೧ ॥

ನೇದುರ್ದುಂದುಭಯಸ್ತತ್ರ ಗಂಧರ್ವಾ ಲಲಿತಂ ಜಗುಃ ।
ನನೃತುಶ್ಚಾಪ್ಸರಶ್ರೇಷ್ಠಾಃ ಪುಷ್ಪವೃಷ್ಟಿಂ ಪ್ರಚಕ್ರಿರೇ ॥ ೪೨ ॥

ದೇವಾಶ್ಚ ಋಷಯಸ್ಸರ್ವೇ ವೇದಸ್ತೋತ್ರೈಸ್ಸ್ತುವಂತಿ ತೇ ।
ತತೋ ದಯಿತಯಾ ಸಾರ್ಧಂ ಜಗಾಮ ನೃಪತಿರ್ಹರಿಂ ॥ ೪೩ ॥

ತ ಸ್ತೂಯಮಾನಂ ಸುರಸಿದ್ಧಸಂಘೈಃ
ಸ ವಿಜ್ವಲಃ ಪಶ್ಯತಿ ಹೃಷ್ಟಮಾನಸಃ ॥
ಸಮಾಗತಸ್ತಿಷ್ಠತಿ ಯತ್ರ ವೈ ಪಿತಾ
ಮಾತಾ ಚ ವೇಗೇನ ಮಹಾಪ್ರಭಾವಃ ॥ ೪೪ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ನವನವತಿತಮೋಽಧ್ಯಾಯಃ**

---

೪೧. ಎಲೈ ರಾಜನೇ ಹೆಂಡತಿಯೊಡನೆ ಬಾ ಎಂದು ಹೇಳಿ ಹಸ್ತಲಾಘವನ್ನು ಕೊಟ್ಟು ತನ್ನ ಸ್ಥಾನಕ್ಕೆ ಕರೆದನು.

೪೨. ಆಗ ಅಲ್ಲಿ ದುಂದುಭಿಗಳು ಮೊಳಗಿದವು. ಗಂಧರ್ವರು ಚೆನ್ನಾಗಿ ಹಾಡಿದರು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು.

೪೩. ದೇವತೆಗಳು, ಋಷಿಗಳು, ವೇದಸ್ತೋತ್ರಗಳಿಂದ ಸ್ತೋತ್ರಮಾಡಿದರು. ಅನಂತರ ಹೆಂಡತಿಯೊಡನೆ ರಾಜನು ಹರಿಯ ಜೊತೆಯಲ್ಲಿ ಹೇಳಿದನು.

೪೪. ದೇವತೆಗಳು, ಸಿದ್ದರು, ಇವರ ಗುಂಪಿನಿಂದ ಸ್ತೋತ್ರಮಾಡಿಸಿಕೊಳ್ಳುತ್ತಿರುವ ಆತನನ್ನು ಸಂತೋಷದಿಂದ ವಿಜ್ವಲನು ನೋಡುತ್ತಿದ್ದನು. ಪ್ರಭಾವವಂತರಾದ ಅವನ ತಾಯಿತಂದೆಗಳು ಇದನ್ನು ನೋಡಲು ವೇಗದಿಂದ ಓಡಿಬಂದು ನೋಡುತ್ತಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಶತತಮೋಽಧ್ಯಾಯಃ

॥ ವಿಷ್ಣುರುವಾಚ ॥

ನರ್ಮದಾಯಾಸ್ತಟೇ ರಮ್ಯೇ ವಟೇ ತಿಷ್ಠತಿ ವೈ ಪಿತಾ ।
ವಿಜ್ವಲೋಽಪಿ ಸಮಾಯಾತಃ ಪಿತರಂ ಪ್ರಣಿಪತ್ಯ ಸಃ ॥ ೧ ॥

ವಾಸುದೇವಾಭಿಧಾನಸ್ಯ ಸ್ತೋತ್ರಸ್ಯಾಪಿ ಮಹಾಮತಿಃ ।
ಸಮಾಚಷ್ಟೇ ಸ ಧರ್ಮಾತ್ಮಾ ಮಹಿಮಾನಂ ಪಿತುಃ ಪುರಃ ॥ ೨ ॥

ಯಥಾ ವಿಷ್ಣುಸ್ಸಮಾಗತ್ಯ ದದೌ ತಸ್ಮೈ ವರಂ ಶುಭಂ ।
ತತ್ಸರ್ವಂ ಕಥಯಾಮಾಸ ಸುಪ್ರಸನ್ನೇನ ಚೇತಸಾ ॥ ೩ ॥

---

## ನೂರನೆಯ ಅಧ್ಯಾಯವು

೧. ವಿಷ್ಣುವು ಹೇಳಿದನು:—ನರ್ಮದಾನದಿಯ ದಡದ ಆಲದಮರದಲ್ಲಿ ಕುಳಿತಿದ್ದ ತಂದೆಯ ಬಳಿಗೆ ವಿಜ್ವಲನು ಬಂದು, ನಮಸ್ಕರಿಸಿ ನಿಂತನು.

೨. ಆ ವಿಜ್ವಲನು ವಾಸುದೇವಾಭಿಧಾನ ಸ್ತೋತ್ರದ ಮಹಿಮೆಯನ್ನು ತಂದೆಯ ಎದುರಿನಲ್ಲಿ ಹೇಳಿದನು.

೩. ವಿಷ್ಣುವು ಬಂದುದನ್ನೂ, ಆತನು ಪ್ರಸನ್ನನಾಗಿ ವರವನ್ನು ಕೊಟ್ಟುದನ್ನೂ, ಎಲ್ಲವನ್ನೂ ಹೇಳಿದನು.

**ಕುಂಜಲೋಽಪಿ ಚ ವೃತ್ತಾಂತಂ ಸಮಾಕರ್ಣ್ಯ ಚ ಭೂಪತೇಃ ।**
**ಹರ್ಷೇಣ ಮಹತಾವಿಷ್ಟಃ ಪುತ್ರಮಾಲಿಂಗ್ಯ ವಿಜ್ವಲಂ ॥ ೪ ॥**

**ಆಹ ಪುಣ್ಯಂ ಕೃತಂ ವತ್ಸ ತ್ವಯಾ ರಾಜ್ಞಿ ಮಹಾತ್ಮನಿ ।**
**ಉಪಕಾರಂ ಮಹತ್ಪುಣ್ಯಂ ವಾಸುದೇವಸ್ಯ ಕೀರ್ತನಾತ್ ॥ ೫ ॥**

**ಅಥೈವಂ ಸ ಪ್ರಶಸ್ಯಾಪಿ ಆಶೀರ್ಭಿರಭಿನಂದ್ಯ ಚ ।**
**ಸ್ಥಿತಸ್ತಸ್ಮಿನ್ಸ್ವಕೇ ರಮ್ಯೇ ಚ್ಯವನಸ್ಯೋಪಪಶ್ಯತಃ ॥ ೬ ॥**

**ಏತತ್ತೇ ಸರ್ವಮಾಖ್ಯಾತಂ ತೇಷಾಂ ವೃತ್ತಂ ಮಹಾತ್ಮನಾಂ ।**
**ವೈಷ್ಣವಾನಾಂ ಮಹಾರಾಜ ಅನ್ಯತ್ಕಿಂ ತೇ ವದಾಮ್ಯಹಂ ॥ ೭ ॥**

**॥ ವೇನ ಉವಾಚ ॥**

**ಅಮೃತಂ ಶಂಖಪಾತ್ರೇಣ ಪಾನಾರ್ಥಂ ಮಮ ಚಾರ್ಪಿತಂ ।**
**ತಸ್ಮಾತ್ಕಸ್ಯ ನ ಚ ಶ್ರದ್ಧಾ ಪಾತುಂ ಮರ್ತ್ಯಸ್ಯ ಭೂತಲೇ ॥ ೮ ॥**

---

೪. ಕುಂಜಲನು ಆ ರಾಜನ ವೃತ್ತಾಂತವನ್ನು ಕೇಳಿ ಸಂತೋಷದಿಂದ ಮಗನನ್ನು ಅಪ್ಪಿಕೊಂಡನು.

೫. ಪುತ್ರನೇ, ನೀನು ರಾಜನಿಗೆ ಬಹು ಪುಣ್ಯವಾದ ಕೆಲಸವನ್ನು ಮಾಡಿದೆ. ವಾಸುದೇವನ ಕೀರ್ತನೆಯಿಂದ ಪುಣ್ಯಪ್ರದವಾದ ಉಪಕಾರವಾಯಿತು.

೬. ಈ ರೀತಿ ಮಗನನ್ನು ಹೊಗಳಿ, ಆಶೀರ್ವಾದ ಮಾಡಿ, ಚ್ಯವನನು ನೋಡುತ್ತಿದ್ದಂತೆಯೇ ಕುಳಿತಿದ್ದನು.

೭ ಆ ಮಹಾತ್ಮರ ಸಮಾಚಾರಗಳನ್ನೆಲ್ಲಾ ಹೇಳಿದೆನು. ಅವರೆಲ್ಲರೂ ಮಹಾವಿಷ್ಣುಭಕ್ತರು, ಇನ್ನೇನು ಬೇಕು ಕೇಳು. ಹೇಳುತ್ತೇನೆ.

೮. ಶಂಖಪಾತ್ರೆಯಿಂದ ನನಗೆ ಅಮೃತವನ್ನು ಕುಡಿಯಲು ಕೊಟ್ಟಂತಾಯಿತು. ಆದ್ದರಿಂದ ಅದನ್ನು ಕುಡಿಯಲು ಯಾವನಿಗೆ ತಾನೆ ಶ್ರದ್ಧೆಯುಂಟಾಗುವುದಿಲ್ಲ? ವೈಷ್ಣವಜ್ಞಾನವು ಪಾನಗಳಲ್ಲೆಲ್ಲಾ ಉತ್ತಮವಾದುದು.

ಉತ್ತಮಂ ವೈಷ್ಣವಂ ಜ್ಞಾನಂ ಪಾಪಾನಾಮಿಹ ಸರ್ವದಾ ।
ತ್ವಯೈವಂ ಕಥ್ಯಮಾನಸ್ಯ ಪಾನೇ ತೃಪ್ತಿರ್ನ ಜಾಯತೇ ।
ಶ್ರೋತುಂ ಹಿ ದೇವದೇವೇಶ ಮಮ ಶ್ರದ್ಧಾ ವಿವರ್ಧತೇ ॥ ೯ ॥

ಕಥಯಸ್ವ ಪ್ರಸಾದೇದ ಕುಂಜಲಸ್ಯಾಪಿ ಚೇಷ್ಟಿತಂ ।
ಮಹಾತ್ಮನಾ ಕಿಮುಕ್ತಂ ತು ಚತುರ್ಥತನಯಂ ಪ್ರತಿ ॥ ೧೦ ॥

ತನ್ಮೇ ಸುವಿಸ್ತರಾದೇವ ಕಥಯಸ್ವ ಮಹಾಮತೇ ।

॥ ವಿಷ್ಣುರುವಾಚ ॥

ಶ್ರೂಯತಾಮಭಿಧಾಸ್ಯಾಮಿ ಚರಿತಂ ಕುಂಜಲಸ್ಯ ಚ ।
ಬಹುಶ್ರೇಯಸ್ಸಮಾಯುಕ್ತಂ ಚರಿತಂ ಚ್ಯವನಸ್ಯ ಚ ॥ ೧೧ ॥

ಇದಂ ಪುಣ್ಯಂ ನರಶ್ರೇಷ್ಠ ಹ್ಯಾಖ್ಯಾನಂ ಪಾಪನಾಶನಂ ।
ಯಶ್ಶೃಣೋತಿ ನರೋ ಭಕ್ತ್ಯಾ ಗೋಸಹಸ್ರಫಲಂ ಲಭೇತ್ ॥ ೧೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಶತತಮೋಽಧ್ಯಾಯಃ

---

೯. ನೀನು ಹೇಳುತ್ತಿದ್ದರೆ ಕೇಳುವುದರಲ್ಲಿ ತೃಪ್ತಿಯೇ ಉಂಟಾಗುವುದಿಲ್ಲ. ಎಲೈ ಸ್ವಾಮಿಯೇ ಕೇಳಬೇಕೆಂಬ ಶ್ರದ್ಧೆಯು ಹೆಚ್ಚುತ್ತಲಿದೆ.

೧೦. ದಯವಿಟ್ಟು ಕುಂಜಲನು ಮುಂದೆ ಮಾಡಿದುದನ್ನು ಹೇಳು. ನಾಲ್ಕನೆಯ ಮಗನನ್ನು ಕುರಿತು ಅವನೇನೆಂದನು ? ಅದನ್ನು ವಿಸ್ತಾರವಾಗಿ ಹೇಳು.

೧೧. ವಿಷ್ಣುವು ಹೇಳಿದನು :—ಕುಂಜಲನ ಚರಿತ್ರೆಯನ್ನೂ, ಚ್ಯವನನ ಚರಿತ್ರೆಯನ್ನೂ ಹೇಳುತ್ತೇನೆ. ಕೇಳು ಅದು ಬಹು ಶ್ರೇಯಸ್ಕರವಾದುದು.

೧೨. ಈ ಕಥೆಯು ಪಾಪನಾಶಕವಾದುದು. ಇದನ್ನು ಕೇಳಿದರೆ ಸಾವಿರ ಗೋದಾನ ಮಾಡಿದ ಪುಣ್ಯಬರುತ್ತದೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ನೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕಾಧಿಕಶತತಮೋಽಧ್ಯಾಯಃ

॥ ಸೂತಉವಾಚ ॥

ದೇವದೇವೋ ಹೃಷೀಕೇಶಸ್ತ್ವಂಗಪುತ್ರಂ ನೃಪೋತ್ತಮಂ ।
ಸಮಾಚಷ್ಟೇ ಸಮಾಶ್ರೇಯಮಾಖ್ಯಾನಂ ಪಾಪನಾಶನಂ ॥ ೧ ॥

ಶ್ರೂಯತಾಮಭಿಧಾಸ್ಯಾಮಿ ಚರಿತ್ರಂ ಶ್ರೇಯದಾಯಕಂ ।
ದ್ವಿಜಸ್ಯಾಪಿ ಚ ವೃತ್ತಾಂತಂ ಕುಂಜಲಸ್ಯ ಮಹಾತ್ಮನಃ ॥ ೨ ॥

॥ ವಿಷ್ಣುರುವಾಚ ॥

ಕುಂಜಲಶ್ಚಾಪಿ ಧರ್ಮಾತ್ಮಾ ಚತುರ್ಥಂ ಪುತ್ರಮೇವ ಚ ।
ಸಮಾಹೂಯ ಮುದಾ ಯುಕ್ತ ಉವಾಚೈನಂ ಕಪಿಂಜಲಂ ॥ ೩ ॥

---

## ನೂರ ಒಂದನೆಯ ಅಧ್ಯಾಯವು

೧. ಸೂತನು ಹೇಳಿದನು :—ಸ್ವಾಮಿಯಾದ ಹೃಷಿಕೇಶನು ಅಂಗರಾಜನನ್ನು ಕುರಿತು ಶ್ರೇಯಸ್ಕರವೂ, ಪಾಪನಾಶಕವೂ, ಆದ ಈ ಕಥೆಯನ್ನು ಹೇಳಿದನು.

೨. ಕುಂಜಲನೆಂಬ ಪಕ್ಷಿಯ ವಿಷಯವನ್ನು ಹೇಳುತ್ತೇನೆ. ಅದು ಶ್ರೇಯೋದಾಯಕವಾದುದು ಮತ್ತು ಪುಣ್ಯದಾಯಕವಾದುದು.

೩. ವಿಷ್ಣುವು ಹೇಳಿದನು :—ಕುಂಜಲನು ನಾಲ್ಕನೆಯ ಮಗನಾದ ಕಪಿಂಜಲನನ್ನು ಕುರಿತು ಹೀಗೆಂದನು.

**ಕಿಂತು ಪುತ್ರ ತ್ವಯಾ ದೃಷ್ಟಂ ಶ್ರುತಂ ವಾಽಪೂರ್ವಕಂ ಚ ಯತ್ ।**
**ಭೋಜನಾರ್ಥಂ ಪ್ರಯಾಸಿ ತ್ವಮಿತಃ ಕುತ್ರ ಸುತೋತ್ತಮ ।**
**ತದಾಚಕ್ಷ್ವ ಮಹಾಭಾಗ ಯದ್ಧಿ ದೃಷ್ಟಂ ಸುಪುಣ್ಯದಂ ॥ ೪ ॥**

**॥ ಕಪಿಂಜಲ ಉವಾಚ ॥**

**ಯಚ್ಚ ತಾತ ಮಯಾ ದೃಷ್ಟಮಪೂರ್ವಂ ತದ್ವದಾಮ್ಯಹಂ ।**
**ಯನ್ನ ದೃಷ್ಟಂ ಶೃತಂ ಕೇನ ಕಸ್ಮಾನ್ನೈವ ಶ್ರುತಂ ಮಯಾ ।**
**ತದಿಹೈವ ಪ್ರವಕ್ಷ್ಯಾಮಿ ಶ್ರೂಯತಾಮಧುನಾ ಪಿತಃ ॥ ೫ ॥**

**ಶೃಣ್ವನ್ತು ಭ್ರಾತರಸ್ಸರ್ವೇ ಮಾತಸ್ತ್ವಂ ಶೃಣು ಸಾಂಪ್ರತಂ ।**
**ಕೈಲಾಸಃ ಪರ್ವತಶ್ರೇಷ್ಠೋ ಧವಲಶ್ಚಂದ್ರಸನ್ನಿಭಃ ॥ ೬ ॥**

**ನಾನಾಧಾತುಸಮಾಕೀರ್ಣೋ ನಾನಾವೃಕ್ಷೋಪಶೋಭಿತಃ ।**
**ಗಂಗಾಜಲೈಃ ಶುಭೈಃ ಪುಣ್ಯೈಃ ಕ್ಷಾಳಿತಸ್ಸರ್ವತೋಽಪಿ ಚ ॥ ೭ ॥**

**ನದೀನಾಂ ತು ಸಹಸ್ರಾಣಿ ಖ್ಯಾತಾನಿ ವಿವಿಧಾನಿ ಚ ।**
**ಯಸ್ಮಾತ್ತಾತ ಪ್ರಸೂತಾನಿ ಜಲಾನಿ ಶುಭದಾನಿ ಚ ॥ ೮ ॥**

---

೪. ಎಲೈ ಪುತ್ರನೇ, ನೀನು ಅಪೂರ್ವವಾದ ಏನನ್ನು ನೋಡಿದೆ? ಅಥವಾ ಕೇಳಿದೆ, ಹೇಳು. ಆಹಾರಕ್ಕೋಸ್ಕರ ಎಲ್ಲೆಲ್ಲಿಗೆ ಹೊಗುತ್ತೀಯೆ? ನೀನು ನೋಡಿದುದನ್ನು ಹೇಳು.

೫. ಕಪಿಂಜಲನು ಹೇಳಿದನು :—ಎಲೈ ತಂದೆಯೇ ನಾನು ನೋಡಿದ ಅಪೂರ್ವವಾದ ವಿಷಯವನ್ನು ಹೇಳುತ್ತೇನೆ. ನಾನು ನೋಡಿದ ಅಪೂರ್ವವಾದ ವಿಷಯವು ಒಬ್ಬನೂ ನೋಡದುದು. ಕೇಳದುದು. ನಾನು ಒಬ್ಬನಿಗೂ ಹೇಳಿಲ್ಲ. ಅದನ್ನು ಹೇಳುತ್ತೇನೆ, ಕೇಳು. ಸಹೋದರರೆಲ್ಲರೂ ಕೇಳಿರಿ. ಅಮ್ಮಾ ನೀನೂ ಕೇಳು.

೬-೭. ಚಂದ್ರನಂತೆ ಬೆಳ್ಳಗಿರುವ, ಬಗೆಬಗೆಯಾದ ಧಾತುಗಳಿಂದ ಕೂಡಿದ, ನಾನಾ ವೃಕ್ಷಗಳಿಂದ ಕೂಡಿದ ಕೈಲಾಸಪರ್ವತವು ಪ್ರಕಾಶಿಸುತ್ತಿದೆ. ಅದು ಗಂಗಾ ನದಿಯ ನೀರಿನಿಂದೆಲ್ಲ ಕಡೆಯಲ್ಲೂ ತೊಳೆಯಲ್ಪಡುತ್ತಿದೆ.

೮. ಪುಣ್ಯಪ್ರದವಾದ ನೀರುಳ್ಳ ಒಳ್ಳೆಯ ನದಿಗಳೆಲ್ಲವೂ ಸಾವಿರಗಟ್ಟಲೆಯಾಗಿ ಆ ಬೆಟ್ಟದಿಂದ ಹುಟ್ಟಿ ಹರಿಯುತ್ತಿವೆ.

**ತಟಾಗಾನಿ ಸಹಸ್ರಾಣಿ ಸೋದಕಾನಿ ಮಹಾಂತಿ ಚ ।**
**ಮಹಾಗಿರೌ ಸರಸ್ಯಶ್ಚ ಹಂಸಸಾರಸಸೇವಿತಾಃ ॥ ೯ ॥**

**ತಸ್ಮಿನ್ನಿಖರಿಣಾಂ ಶ್ರೇಷ್ಠೇ ಪುಣ್ಯದಾಃ ಪಾಪನಾಶಕಾಃ ।**
**ವಿವಿಧಾನಿ ಪ್ರಶಸ್ತಾನಿ ಪುಷ್ಪಿತಾನಿ ವನಾನಿ ಚ ॥ ೧೦ ॥**

**ನಾನಾವೃಕ್ಷೋಪಯುಕ್ತಾನಿ ಹರಿತಾನಿ ಸಮಂತತಃ ।**
**ಕಿನ್ನರಾಣಾಂ ಗಣೈಶ್ಚೈವ ಅಪ್ಸರೋಭಿಸ್ಸಮಾಕುಲಃ। ॥ ೧೧ ॥**

**ಗಂಧರ್ವೈಶ್ಚಾರಣೈಸ್ಸಿದ್ಧೈರ್ದೇವವೃಂದೈಸ್ಸುಶೋಭಿತಃ ।**
**ದಿವ್ಯವೃಕ್ಷವನೋಪೇತೋ ಗಂಗಾಪಾತೈಃ ಸಮಾಕುಲಃ ॥ ೧೨ ॥**

**ದಿವ್ಯಗಂಧೈಸ್ಸುಗಂಧೈಶ್ಚ ನಾನಾರತ್ನಸಮನ್ವಿತಃ ।**
**ಸ್ಫಾಟಿಕಾಭಿಃ ಶಿಲಾಭಿಶ್ಚ ಸರ್ವತಸ್ಸಮಲಂಕೃತಃ ॥ ೧೩ ॥**

---

೯. ಆ ದೊಡ್ಡ ಪರ್ವತದಲ್ಲಿ ನೀರಿನಿಂದ ಕೂಡಿದ ಅನೇಕ ಕೆರೆಗಳೂ, ಕೊಳಗಳೂ ಇವೆ. ಅವುಗಳಲ್ಲಿ ಹಂಸಗಳೂ, ಸಾರಸಗಳೂ, ಬೇಕಾದಷ್ಟು ಇದ್ದು ಪ್ರಕಾಶಿಸುತ್ತವೆ.

೧೦. ಆ ಪರ್ವತದಲ್ಲಿ ಪುಣ್ಯತಮವಾದ, ಪಾಪನಾಶಕವಾದ ಪುಷ್ಪಗಳಿಂದ ಕೂಡಿದ ನಾನಾಬಗೆಯಾದ ವನಗಳಿವೆ.

೧೧. ಹಸುರಾಗಿರುವ ಅನೇಕ ವೃಕ್ಷಗಳು ಈ ಪರ್ವತದಲ್ಲಿ ಎಲ್ಲೆಲ್ಲಿಯೂ ಇವೆ. ಕಿನ್ನರರು, ಅಪ್ಸರರೂ, ಅನೇಕರು ಇಲ್ಲಿ ಇದ್ದಾರೆ.

೧೨. ಗಂಧರ್ವರು, ಚಾರಣರು, ಸಿದ್ಧರು, ದೇವತೆಗಳು, ಇವರಿಂದ ಶೋಭಿತವಾಗಿದೆ. ಮನೋಹರವಾದ ವನಗಳಿಂದಲೂ, ಗಂಗೆಯ ಜಲಪಾತದಿಂದಲೂ ಕೂಡಿದೆ.

೧೩. ಉತ್ತಮ ಗಂಧದಿಂದಲೂ, ಸುಗಂಧಗಳಿಂದಲೂ, ನಾನಾಬಗೆಯಾದ ರತ್ನಗಳಿಂದಲೂ, ಸ್ಫಟಿಕಶಿಲೆಗಳಿಂದಲೂ, ಎಲ್ಲ ಕಡೆಯಲ್ಲೂ ಅಲಂಕೃತವಾಗಿದೆ.

**ಸೂರ್ಯತೇಜೋಮಯೋ ರಾಜಂಸ್ತೇಜೋಭಿಶ್ಚ ಸಮಾಕುಲಃ ।**
**ಚಂದನೈಶ್ಚಾಗುರುಗಂಧೈಶ್ಚ ಬಕುಳೈರ್ನೀಲಪುಷ್ಪಕೈಃ ॥ ೧೪ ॥**

**ನಾನಾಪುಷ್ಪಮಯೈರ್ವೃಕ್ಷೈಃ ಸರ್ವತ್ರ ಸಮಲಂಕೃತಃ ।**
**ಪಕ್ಷಿಣಾಂ ಸುನಿನಾದೈಶ್ಚ ದಿವ್ಯಾನಾಂ ಮಧುರಾಯತೇ ॥ ೧೫ ॥**

**ಷಟ್ಪದಾನಾಂ ನಿನಾದೈಶ್ಚ ವೃಕ್ಷೈರ್ನೈ ಮಧುರಾಯತೇ ।**
**ಕೋಕಿಲಾನಾಂ ತು ಗೀರ್ಭಿಶ್ಚ ಧ್ವನಿತಃ ಸಕಲೋ ಗಿರಿಃ ॥**
**ಗಣೈಃ ಕೋಟಿಭಿರಾಕೀರ್ಣಂ ತತ್ರಾಸ್ತೇ ಶಿವಮಂದಿರಂ ॥ ೧೬ ॥**

**ಸ್ವರ್ಗಾಭಿರಮಣಂ ಪುಣ್ಯಂ ಪುಣ್ಯದಂ ಸುಶಿಲೋಚ್ಚಯಂ ।**
**ದಿಗ್ಗಜಾನಾಂ ಸುಘೋಷೈಶ್ಚ ಶಬ್ದಿತಂ ಚ ಸಮಂತತಃ ॥ ೧೭ ॥**

**ನಾನಾಮೃಗೈಸ್ಸಮಾಕೀರ್ಣಂ ಶಾಖಾಮೃಗಸಮಾಕುಲಂ ।**
**ಮಯೂರಕೇಕಾಘೋಷೈಶ್ಚ ಗುಹಾಸು ಚ ವಿನಾದಿತಂ ॥ ೧೮ ॥**

---

೧೪-೧೫. ಸೂರ್ಯನ ತೇಜಸ್ಸಿನಿಂದ ವ್ಯಾಪ್ತವಾಗಿದೆ. ಚಂದನ, ಅಗರು, ಗಂಧ, ಬಕುಲ, ಮುಂತಾದ ಪುಷ್ಪವೃಕ್ಷಗಳಿಂದ ಅಲಂಕೃತವಾಗಿದೆ. ದಿವ್ಯವಾದ ಪಕ್ಷಿಗಳ ಗಾನದಿಂದ ಮನೋಹರವಾಗಿದೆ.

೧೬. ದುಂಬಿಗಳ ಕೂಗಿನಿಂದ ಕೂಡಿರುವ ಮರಗಳಿಂದ ಕೂಡಿದೆ, ಕೋಗಿಲೆಗಳು ಕೂಗುವುದರಿಂದ ಆ ಪರ್ವತವು ಪ್ರತಿಧ್ವನಿಯನ್ನು ಕೊಡುತ್ತಿದೆ. ಈ ರೀತಿಯಾದ ಪರ್ವತದಲ್ಲಿ ಅನೇಕ ಶಿವಗಣಗಳಿಂದ ಕೂಡಿದ ಒಂದು ಶಿವಮಂದಿರವಿದೆ.

೧೭. ಅದು ಸ್ವರ್ಗಕ್ಕಿಂತಲೂ ಮನೋಹರವಾದುದು. ಪುಣ್ಯವನ್ನು ಕೊಡತಕ್ಕದು. ದಿಗ್ಗಜಗಳ ಶಬ್ದದಿಂದ ಎಲ್ಲಾ ಕಡೆಯಲ್ಲೂ ಕೂಗು ಕೇಳಿಸುತ್ತದೆ.

೧೮. ನಾನಾ ಮೃಗಗಳಿಂದಲೂ, ಕಪಿಗಳ ಗುಂಪುಗಳಿಂದಲೂ, ಕೂಡಿದೆ. ನವಿಲುಗಳ ಕೇಕೆಗಳಿಂದ ಅಲಂಕೃತವಾಗಿದೆ.

ಕಂದಲೈರ್ಲೇಪನೈಃ ಕೂಟೈಃ ಸಾನುಭಿಶ್ಚ ವಿರಾಜಿತಂ ।
ನಾನಾಪ್ರಸ್ರವಣೋಪೇತಮೌಷಧೀಭಿರ್ವಿರಾಜಿತಂ ॥ ೧೯ ॥

ದಿವ್ಯಂ ದಿವ್ಯಗುಣೋಪೇತಂ ಪುಣ್ಯಧಾಮಸಮಾಕುಲಂ ।
ಸೇವಿತಂ ಪುಣ್ಯಲೋಕೈಶ್ಚ ಪುಣ್ಯರಾಶಿಂ ಮಹಾಗಿರಿಂ ॥ ೨೦ ॥

ಪುಳಿಂದಭಿಲ್ಲಕೋಲೈಶ್ಚ ಸೇವಿತಂ ಪರ್ವತೋತ್ತಮಂ ।
ವಿಕಟೈಃ ಶಿಖರೈಃ ಕೂಟೈರದ್ರಿರಾಜಃ ಪ್ರಶೋಭತೇ ॥ ೨೧ ॥

ಅನ್ಯೈರ್ನಾನಾವಿಧೈಃ ಪುಷ್ಪೈಃ ಕೌತುಕೈರ್ಮಂಗಳೈಶ್ಶುಭೈಃ ।
ಗಂಗೋದಕಪ್ರಪಾತೈಶ್ಚ ಮಹಾಶಬ್ದಂ ಪ್ರಶುಶ್ರುವೇ ॥ ೨೨ ॥

ಶಂಕರಸ್ಯ ಗೃಹಂ ತಾತ ಕೈಲಾಸಂ ಗತವಾನಹಂ ।
ತತ್ರಾಶ್ಚರ್ಯಂ ಮಯಾ ದೃಷ್ಟಂ ಯನ್ನ ದೃಷ್ಟಂ ಕದಾ ಶ್ರುತಂ ॥ ೨೩ ॥

---

೧೯. ಗೆಡ್ಡೆಗೆಣಸುಗಳಿಂದಲೂ, ಧಾತುಗಳಿಂದಲೂ, ಕೋಡುಗಲ್ಲುಗಳಿಂದಲೂ, ತಪ್ಪಲುಗಳಿಂದಲೂ ಪ್ರಕಾಶಿಸುತ್ತಿದೆ. ಅನೇಕ ಝರಿಗಳಿಂದ ಕೂಡಿದ ಔಷಧಿಗಳಿಂದ ಪ್ರಕಾಶಿಸುತ್ತದೆ.

೨೦. ದಿವ್ಯವಾದುದು, ದಿವ್ಯಗುಣವುಳ್ಳದು. ಪುಣ್ಯಸ್ಥಳಗಳೂ, ಪುಣ್ಯಾತ್ಮರಾದ ಜನರೂ ಅಲ್ಲಿದ್ದಾರೆ. ಪುಣ್ಯದ ರಾಶಿಯಂತೆಯೇ ಆ ಗಿರಿಯಿದೆ.

೨೧. ಬೇಡರು, ಭಿಲ್ಲರು, ಹಂದಿಗಳಿಂದ ಆ ಪರ್ವತವು ಕೂಡಿದೆ. ದೊಡ್ಡದಾಗಿ, ಅಗಾಧವಾದ ಶಿಖರಗಳಿಂದ ಆ ಪರ್ವತವು ಪ್ರಕಾಶಿಸುತ್ತಿದೆ.

೨೨. ಆಶ್ಚರ್ಯಕರವಾದ ಬಗೆಬಗೆಯ ಹೂಗಳಿಂದ ಕೂಡಿದೆ. ಗಂಗಾನದಿಯ ನೀರುಬೀಳುವ ಎತ್ತರವಾದ ಪ್ರದೇಶಗಳಲ್ಲಿ ಹೆಚ್ಚು ಶಬ್ದದಿಂದ ಕೂಡಿದೆ.

೨೩. ಶಂಕರನ ಮನೆಯಾದ ಕೈಲಾಸಪರ್ವತಕ್ಕೆ ಹೋಗಿದ್ದೆನು. ಅಲ್ಲಿ ಎಂದೂ ಕೇಳದ ಯಾರೂ ನೋಡದ ಒಂದು ಆಶ್ಚರ್ಯವನ್ನು ಕಂಡೆನು.

ಶ್ರೂಯತಾಮಭಿಧಾಸ್ಯಾಮಿ ತಾತ ಸರ್ವಂ ಮಯೋದಿತಂ ।
ಶಿಖರಾದ್ಗಿರಿರಾಜಸ್ಯ ಮೇರೋಃ ಪುಣ್ಯಾನ್ಮಹೋದಯಾತ್ ॥ ೨೪ ॥

ಹಿಮಕ್ಷೀರಸವರ್ಣಸ್ತು ಪ್ರವಾಹಃ ಪತತೇ ಭುವಿ ।
ಗಂಗಾಯಾಶ್ಚ ಮಹಾಭಾಗ ರಂಹಸಾ ಭೋಗವರ್ಜಿತಃ ।
ಕೈಲಾಸಸ್ಯ ಶಿರಃ ಪ್ರಾಪ್ಯ ತತ್ರ ವಿಸ್ತರತಾಂ ಗತಃ ॥ ೨೫ ॥

ದಶಯೋಜನವಿಸ್ತೀರ್ಣಸ್ತತ್ರ ಗಂಗಾಹ್ರದೋ ಮಹಾನ್ ।
ಮಹಾತೋಯೇನ ಪುಣ್ಯೇನ ವಿಮಲೇನ ವಿರಾಜತೇ ॥ ೨೬ ॥

ಸರ್ವತೋಭದ್ರತಾಂ ಪ್ರಾಪ್ತೋ ಮಹಾಹಂಸೈಃ ಪ್ರಶೋಭತೇ ।
ನಾಮೋಚ್ಚಾರೇಣ ದಿವ್ಯೇನ ಪುಣ್ಯೇನ ಮಧುರೇಣ ಚ ॥ ೨೭ ॥

ಹಂಸಾಸ್ತತ್ರ ಪ್ರಕೂಜಂತಿ ತೇನ ಸ್ರೋತೋ ವಿರಾಜತೇ ॥
ತಸ್ಯೈವಾಗ್ರೇ ಶಿಲಾಯಾಂ ಹಿ ಕನ್ಯಾ ಚೈಕಾ ಮಹಾಮತೇ ॥ ೨೮ ॥

ಆಸೀನಾ ಮುಕ್ತಕೇಶಾ ತು ರೂಪದ್ರವಿಣಶಾಲಿನೀ ।
ದಿವ್ಯರೂಪಸುಸಂಪನ್ನಾ ಸರ್ವಲಕ್ಷಣಸಂಯುತಾ ॥ ೨೯ ॥

---

೨೪. ಎಲೈ ತಾತನೇ ಕೇಳು, ಹೇಳುತ್ತೇನೆ. ಅಲ್ಲಿ ಮೇರುವಿನ ಶಿಖರದಿಂದ ಹಾಲಿನಂತೆ ಬೆಳ್ಳಗಿರುವ, ಒಂದು ಪ್ರವಾಹವು ಬೀಳುತ್ತಿರುತ್ತದೆ.

೨೫-೨೬. ಗಂಗೆಯನೀರು ಅಲ್ಲಿ ಬಹು ವೇಗವಾಗಿರುವುದರಿಂದ ಅಲ್ಲಿ ಅದರ ಉಪಯೋಗ ಯಾರಿಗೂ ಇರುವುದಿಲ್ಲ. ಕೈಲಾಸದ ಶಿಖರಕ್ಕೆ ಬರುತ್ತಲೂ, ಅಲ್ಲಿ ವಿಸ್ತಾರವಾಗುತ್ತದೆ. ಆ ಅಗಲಸ್ಥಳವು ಹತ್ತುಯೋಜನಗಳ ಸುತ್ತಳತೆಯುಳ್ಳದ್ದಾಗಿದೆ. ಅಲ್ಲಿ ನೀರು ಶುದ್ಧವಾಗಿದೆ. ಮಹಾ ಪುಣ್ಯಪ್ರದವೂ ಹೌದು.

೨೭. ಎಲ್ಲಾ ಕಡೆಯೂ, ಮಂಗಳಸ್ವರೂಪವಾಗಿ ಹಂಸಗಳಿಂದಲೂ, ಕೂಡಿದೆ. ಅದರ ದಿವ್ಯವಾದ ನಾಮೋಚ್ಚಾರಣವು ಪುಣ್ಯಪ್ರದವು. ಹಂಸಗಳು ಅಲ್ಲಿ ಕೂಗುತ್ತಿರುತ್ತವೆ. ಅಂತಹ ಪ್ರವಾಹವು ಪ್ರಕಾಶಿಸುತ್ತದೆ.

೨೮-೨೯. ಅದರ ಒಂದು ಕಲ್ಲಿನ ಮೇಲೆ ಓರ್ವ ಕನ್ಯೆಯು ಕುಳಿತಿದ್ದಳು. ಕೂದಲನ್ನು ಬಿಚ್ಚಿಕೊಂಡು, ಸುಂದರಿಯಾಗಿ ಎಲ್ಲಾ ಲಕ್ಷಣಗಳಿಂದಲೂ ಕೂಡಿ, ಅಲಂಕಾರಗಳನ್ನೆಲ್ಲಾ ಮಾಡಿಕೊಂಡು ಅಲ್ಲಿ ಪ್ರಕಾಶಿಸುತ್ತಿದ್ದಳು.

ದಿವ್ಯಾಲಂಕಾರಸಂಭೂಷಾ ಸಾ ಚ ತತ್ರ ವಿರಾಜತೇ ।
ನ ಜಾನೇ ಗಿರಿರಾಜಸ್ಯ ತನಯಾ ವಾ ಮಹೋದಧೇಃ ॥ ೩೦ ॥

ನೋ ವಾಸ್ತಿ ಬ್ರಹ್ಮಣಃ ಪತ್ನೀ ನೋ ವಾ ಸ್ವಾಹಾ ಭವಿಷ್ಯತಿ ।
ಇಂದ್ರಾಣೀ ವಾ ಮಹಾಭಾಗಾ ರೋಹಿಣೀ ವಾ ಭವಿಷ್ಯತಿ ॥ ೩೧ ॥

ಈದೃಶೀ ನ ಯಮಸ್ಯಾಪಿ ಯುವತೀ ಪರಿದೃಶ್ಯತೇ ।
ಅನ್ಯಾಸಾಂ ಚ ಸುದಿವ್ಯಾನಾಂ ನಾರೀಣಾಂ ತಾತ ಸರ್ವಥಾ ॥ ೩೨ ॥

ಯಾದೃಶಂ ಶೀಲಸದ್ಭಾವಂ ಗುಣರೂಪಂ ತು ದೃಶ್ಯತೇ ।
ಅಪ್ಸರಸಾಂ ಕದಾ ನಾಸ್ತಿ ತಾದೃಶಂ ರೂಪಲಕ್ಷಣಂ ॥ ೩೩ ॥

ಯಾದೃಶಂ ತು ಮಯಾ ದೃಷ್ಟಂ ತದಂಗೇ ವಿಶ್ವಮೋಹನಂ ।
ಶಿಲಾಪದೇ ಸಮಾಸೀನಾ ದುಃಖೇನಾಪಿ ಸಮಾಕುಲಾ ॥ ೩೪ ॥

ರುದತೇ ಸುಸ್ವರೈರ್ಬಾಲಾ ಅನೇಕೈಃ ಸ್ವಜನೈರ್ವಿನಾ ।
ಅಶ್ರೂಣಿ ಪಾತಮಾನಾನಿ ಮುಕ್ತಾಭಾನಿ ಬಹೂನಿ ಚ ॥ ೩೫ ॥

---

೩೦-೩೧. ಆಕೆಯು ಪಾರ್ವತಿಯೋ, ಲಕ್ಷ್ಮಿಯೋ, ಸರಸ್ವತಿಯೋ, ಸ್ವಾಹಾದೇವಿಯೋ, ಶಚೀದೇವಿಯೋ, ರೋಹಿಣಿಯೋ, ಯಾವಳೆಂಬುದನ್ನು ನಾನು ಕಾಣೆ.

೩೨. ಯಮನ ಹೆಂಡತಿಯೂ ಕೂಡ ಇಷ್ಟು ರೂಪವತಿಯಾಗಿ ಕಾಣುವುದಿಲ್ಲ. ಇವರೇ ಅಂದಮೇಲೆ ಮಿಕ್ಕವರ ವಿಷಯವನ್ನು ಹೇಳಬೇಕಾದುದೇ ಇಲ್ಲ.

೩೩. ಆಕೆಯಲ್ಲಿರುವ ಶೀಲ, ಸ್ವಭಾವ, ಗುಣ, ರೂಪಗಳು, ಅಪ್ಸರಸ್ತ್ರೀಯರಲ್ಲೂ, ಸಹ ಯಾವಾಗಲೂ ಇಲ್ಲವೇ ಇಲ್ಲ.

೩೪-೩೫. ಆಕೆಯ ಅಂಗದಲ್ಲಿ ವಿಶ್ವಮೋಹನವಾದ ರೂಪವೇ ಇದ್ದರೂ ಕಲ್ಲಿನ ಮೇಲೆ ಕುಳಿತು ಕಣ್ಣೀರುಬಿಡುತ್ತಾ ಅಳುತ್ತಿದ್ದಳು. ಆ ಕಣ್ಣೀರುಗಳು ಮುತ್ತಿನಂತೆ ಕೆಳಗೆ ಬೀಳುತ್ತಿದ್ದುವು.

ನಿರ್ಮಲಾನಿ ಪತಂತ್ಯತ್ರ ಸ್ರೋತಸ್ಯೇವ ಮಹಾಮತೇ ।
ಬಿಂದವೋ ಮೌಕ್ತಿಕಾಭಾಸ್ತೇ ಪತಿತಾ ಹಿ ಮಹೋದಕೇ ॥ ೩೬ ॥

ತೇಭ್ಯೋ ಭವಂತಿ ಪದ್ಮಾನಿ ಹೃದ್ಯಾನಿ ಸುರಭೀಣಿ ಚ ।
ಪದ್ಮಾನಿ ಜಜ್ಞಿರೇ ತೇಭ್ಯೋ ನೇತ್ರಾಶ್ರುಭ್ಯೋ ಮಹಾಮತೇ ॥ ೩೭ ॥

ಗಂಗಾಂಭಸಿ ತರಂತ್ಯೇವ ಅಸಂಖ್ಯಾತಾನಿ ತಾನಿ ತು ।
ಪತಿತಾನಿ ಸುಹೃದ್ಯಾನಿ ರಂಹಸಾ ಯಾಂತಿ ತಾನಿ ತು ॥ ೩೮ ॥

ಗಂಗಾಪ್ರವಾಹಮಧ್ಯೇ ತು ಹಂಸವೃಂದೈಃ ಸಮಂ ಪಿತಃ ।
ಭಾಗೀರಥ್ಯಾಃ ಪ್ರವಾಹಸ್ತು ತಸ್ಮಾಚ್ಚೈವ ವಿನಿರ್ಗತಃ ॥ ೩೯ ॥

ಕೈಲಾಸಶಿಖರಂ ಪ್ರಾಪ್ಯ ರತ್ನಾಖ್ಯಂ ಚಾರುಕಂದರಂ ।
ವರ್ತತೇ ತೋಯಪೂರ್ಣಸ್ತು ಯೋಜನದ್ವಯವಿಸ್ತೃತಃ ॥ ೪೦ ॥

ಹಂಸವೃಂದಸಮಾಕೀರ್ಣೋ ಜಲಪಕ್ಷಿಸಮಾಕುಲಃ ।
ನಾನಾವರ್ಣವಿಶೇಷಾಣಿ ಸಂತಿ ಪದ್ಮಾನಿ ತತ್ರ ಚ ॥ ೪೧ ॥

---

೩೬. ನಿರ್ಮಲವಾದ ಆ ಕಣ್ಣೀರಿನ ಬಿಂದುಗಳು ಆ ನದಿಯ ನೀರಿನಲ್ಲಿ ಬೀಳುತ್ತವೆ.

೩೭. ಆ ಕಣ್ಣೀರಿನಿಂದ ಚೆನ್ನಾಗಿರುವ ಪದ್ಮಗಳು ಆ ನೀರಿನಲ್ಲಿ ಹುಟ್ಟುತ್ತವೆ.

೩೮. ಗಂಗೆಯ ನೀರಿನಲ್ಲಿ ಆ ಕಣ್ಣೀರಿನಿಂದ ಹುಟ್ಟಿದ ಪದ್ಮಗಳು ಸಹಸ್ರ ಸಂಖ್ಯೆಯಿಂದ ಅತ್ತಿತ್ತಲಾಗಿ ಓಡಿಯಾಡುತ್ತವೆ.

೩೯. ಗಂಗಾಪ್ರವಾಹದ ಮಧ್ಯದಲ್ಲಿ ಹಂಸಗಳೊಡನೆ ಈ ಕಮಲಗಳೂ ಓಡಾಡುತ್ತವೆ. ಭಾಗೀರಥಿಯ ಪ್ರವಾಹವು ಆ ಸರೋವರದಿಂದಲೇ ಹೊರಟಿದೆ.

೪೦. ಅದು ಕೈಲಾಸಶಿಖರದಲ್ಲಿ ರತ್ನವೆಂಬ ಹೆಸರುಳ್ಳ ಒಂದು ಗುಹೆಯನ್ನು ಹೊಕ್ಕು ಎರಡು ಯೋಜನ ವಿಸ್ತಾರದ ಒಂದು ಕೆರೆಯಾಗಿದೆ.

೪೧. ಹಂಸ ಇನ್ನೂ ಅನೇಕಬಗೆಯ ಪಕ್ಷಿಗಳು ಇವುಗಳಿಂದ ಬಗೆಬಗೆಯಾಗಿ ಕಾಣುತ್ತ ಬಗೆಬಗೆಯ ಪದ್ಮಗಳಿಂದ ಕೂಡಿದೆ.

ಪ್ರವಾಹೇ ನಿರ್ಮಲೇ ತಾತ ಮುನಿವೃಂದನಿಷೇವಿತೇ ।
ಅಶ್ರುಭ್ಯೋ ಯಾನಿ ಜಾತಾನಿ ಪ್ರಭಾತೇ ಕಮಲಾನಿ ಚ ॥ ೪೨ ॥

ಗಂಗೋದಕಪ್ಲುತಾನ್ಯೇವ ಸೌರಭ್ಯಾಣಿ ಮಹಾಂತಿ ಚ ।
ಪ್ರಭವಂತಿ ಪ್ರವಾಹೇ ತು ನಿರ್ಮಲೇ ಜಲಪೂರಿತೇ ।
ಜಲಮಧ್ಯೇ ಸುಹಂಸೈಶ್ಚ ಜಲಪಕ್ಷಿನಿನಾದಿತೇ ॥ ೪೩ ॥

॥ ಸೂತಉವಾಚ ॥

ರತ್ನಾಢ್ಯೇ ತು ಗಿರೌ ತಸ್ಮಿನ್ ರತ್ನೇಶ್ವರಮಹೇಶ್ವರಃ ।
ದೇವದೈತ್ಯೈಃ ಸುಪೂಜ್ಯೋಽಪಿ ತಿಷ್ಠತ್ಯೇವ ತು ಸರ್ವದಾ ॥ ೪೪ ॥

ತತ್ರ ದೃಷ್ಟೋ ಮಯಾ ತಾತ ಕಶ್ಚಿತ್ಪುಣ್ಯಮಯೋ ಮುನಿಃ ।
ಜಟಾಭಾರಸಮಾಕ್ರಾಂತೋ ನಿರ್ವಾಸಾ ದಂಡಧಾರಕಃ ॥ ೪೫ ॥

ನಿರಾಧಾರೋ ನಿರಾಹಾರಸ್ತಪಸಾತೀವ ದುರ್ಬಲಃ ।
ಕೃಶಾಂಗೋಽಪ್ಯಸ್ಥಿಸಂಘಾತಸ್ತ್ವಚ್ಮಾತ್ರೇಣೈವ ಚೇಷ್ಟಿತಃ ॥ ೪೬ ॥

---

೪೨-೪೩. ಮುನಿಗಳಿಂದ ಸೇವಿತವಾದ ಆ ಪ್ರವಾಹದಲ್ಲಿ ಕಣ್ಣೀರಿನಿಂದ ಹುಟ್ಟಿದ ಆ ಕಮಲಗಳು ಬೆಳಗಿನ ಹೊತ್ತಿನಲ್ಲಿ ಅರಳಿ ವಾಸನೆಯಿಂದ ಆ ಗಂಗೋದಕದಲ್ಲಿ ತೇಲುತ್ತವೆ.. ಅವೇ ಆ ಪ್ರವಾಹದಲ್ಲಿಯೂ ಹುಟ್ಟುತ್ತವೆ. ನೀರಿನ ಮಧ್ಯದಲ್ಲಿ ಹಂಸಗಳೂ, ನೀರುಹಕ್ಕಿಗಳೂ, ಇರುವ ಸ್ಥಳದಲ್ಲೆಲ್ಲಾ ಹುಟ್ಟಿ ಪ್ರಕಾಶಿಸುತ್ತವೆ.

೪೪. ಸೂತನು ಹೇಳಿದನು :—ರತ್ನದಿಂದ ಕೂಡಿದ ಆ ಬೆಟ್ಟದಲ್ಲಿ ರತ್ನೇಶ್ವರನೆಂಬ ಒಂದು ಈಶ್ವರಲಿಂಗವಿದೆ. ದೇವ ದೈತ್ಯರೆಲ್ಲರೂ ಅಲ್ಲಿಗೆ ಬಂದು ಅದನ್ನು ಪೂಜೆ ಮಾಡುತ್ತಾರೆ. ಅದು ಅಲ್ಲಿಯೇ ಇರತಕ್ಕದ್ದು.

೪೫. ಆ ಜಾಗದಲ್ಲಿ ಜಟೆಗಳಿಂದ ಕೂಡಿ ದಂಡವನ್ನು ಹಿಡಿದು ದಿಗಂಬರನಾಗಿರುವ ಒಬ್ಬ ಮುನಿಯನ್ನು ಕಂಡೆನು.

೪೬. ಅವನು ನಿರಾಧಾರನು, ನಿರಾಹಾರನು, ತಪಸ್ಸಿನಿಂದ ಬಲಹೀನನು, ಕೃಶವಾಗಿ ಮೂಳೆಗಳ ಮೇಲೆ ಚರ್ಮದ ಹೊದಿಕೆಯನ್ನು ಹಾಕಿದಂತಿದ್ದನು.

ಭಸ್ಮನಾಕುಲಿತಾನ್ಯೇವ ತಸ್ಯಾಂಗಾನಿ ಮಹಾತ್ಮನಃ ।
ಶುಷ್ಕಪತ್ರಾಣಿ ಭಕ್ಷೇತ ಶೀರ್ಣಾನಿ ಪತಿನಾನಿ ಚ　　॥ ೪೭ ॥

ಶಿವಭಕ್ತಸ್ಸಮಾಸೀನೋ ದುಃಖಾಧಾರೋ ಮಹಾತಪಾಃ ।
ಅಶ್ರುಭ್ಯೋ ಯಾನಿ ಜಾತಾನಿ ಪದ್ಮಾನಿ ಸುಹೃದ್ಯಾನಿ ಚ　　॥ ೪೮ ॥

ಗಂಗಾತೋಯಾತ್ಸಮಾನೀಯ ದೇವದೇವಂ ಪ್ರಪೂಜಯೇತ್ ।
ರತ್ನೇಶ್ವರಂ ಮಹಾಭಾಗೋ ನೃತ್ಯಗೀತವಿಶಾರದಃ　　॥ ೪೯ ॥

ಗಾಯತೇ ನೃತ್ಯತೇ ತಸ್ಯ ದ್ವಾರಸ್ಥಸ್ತ್ರಿಪುರದ್ವಿಷಃ ।
ತತ್ರಾಗತ್ಯ ಸ ಧರ್ಮಾತ್ಮಾ ರೋದತೇ ಸುಸ್ವರೈರಪಿ　　॥ ೫೦ ॥

ಏವಂ ದೃಷ್ಟಂ ಮಯಾ ತಾತ ಅಪೂರ್ವಂ ವದತಾಂ ವರ ।
ಕಥಯಸ್ವ ಪ್ರಸಾದಾನ್ಮೇ ಯದಿ ತ್ವಂ ವೇತ್ಸಿ ಕಾರಣಂ　　॥ ೫೧ ॥

ಸಾ ಕಾ ನಾರೀ ಮಹಾಭಾಗ ಕಸ್ಮಾತ್ತತ್ರ ಪ್ರರೋದಿತಿ ।
ಕಸ್ಮಾತ್ಸದೈವ ಪುರುಷೋ ದೇವಮರ್ಚೇನ್ಮಹೇಶ್ವರಂ　　॥ ೫೨ ॥

---

೪೭. ಆತನು ಮೈಗೆ ಬೂದಿಯನ್ನು ಬಳಿದುಕೊಂಡಿದ್ದನು. ತಾನಾಗಿಯೇ ಬಿದ್ದ ಒಣಗಿದ ಎಲೆಗಳನ್ನು ತಿನ್ನುತ್ತಿದ್ದನು.

೪೮-೪೯. ಶಿವಭಕ್ತನಾದ ಆ ಮುನಿಯು ದುಃಖಿಯಾಗಿ, ಮಹಾತಪಸ್ವಿಯಾಗಿ, ಕಣ್ಣೀರು ಬಿದ್ದು ಹುಟ್ಟಿದ ಆ ಕಮಲಗಳನ್ನು ಗಂಗೆಯ ನೀರಿನಿಂದ ತಂದು ಆ ರತ್ನೇಶ್ವರನನ್ನು ನೃತ್ಯಗೀತಗಳಿಂದ ಪೂಜಿಸುತ್ತಿದ್ದನು.

೫೦. ಆ ಸ್ವಾಮಿಯ ದೇವಸ್ಥಾನದ ಬಾಗಿಲಿನಲ್ಲಿ ಗಾನಮಾಡುತ್ತಾನೆ. ಕುಣಿಯುತ್ತಾನೆ. ಆದರೆ ಆತನು ಆ ಸರೋವರಕ್ಕೆ ಬಂದು ಅಳುತ್ತಿರುತ್ತಾನೆ.

೫೧. ಎಲೈ ತಂದೆಯೇ, ಈ ರೀತಿಯಾದ ಅಪೂರ್ವ ವಿಷಯವನ್ನು ನೋಡಿದೆನು. ನೀನು ಇದರ ಕಾರಣವನ್ನು ತಿಳಿದಿದ್ದರೆ ಕೃಪೆಮಾಡಿ ಹೇಳು.

೫೨. ಆ ಹೆಂಗಸು ಯಾರು? ಏಕೆ ಅಲ್ಲಿ ಅಳುತ್ತಾಳೆ? ಆ ಮನುಷ್ಯನು ಏಕೆ ಅಲ್ಲಿ ನಿತ್ಯವೂ ಪೂಜೆಮಾಡುತ್ತಾನೆ? ದಯವಿಟ್ಟು ತಿಳಿಸಿ ಈ ಸಂದೇಹ ನಿವೃತ್ತಿ ಮಾಡು.

**ತನ್ಮೇ ತ್ವಂ ವಿಸ್ತರಾದ್ಬ್ರೂಹಿ ಸರ್ವಸಂದೇಹಕಾರಣಂ ।**
**ಏವಮುಕ್ತೋ ಮಹಾಪ್ರಾಜ್ಞಃ ಕುಂಜಲೋಽಪಿ ಸುತೇನ ಹಿ ।**
**ಕಪಿಂಜಲೇನ ಪ್ರೋವಾಚ ವಿಸ್ತರಾಚ್ಛೃಣ್ವತೋ ಮುನೇ ॥ ೫೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಏಕಾಧಿಕಶತತಮೋಽಧ್ಯಾಯಃ**



---

೫೩. ಈ ರೀತಿ ಮಗನಾದ ಕಪಿಂಜಳನು ಹೇಳಲು, ತಂದೆಯಾದ ಕುಂಜಲನು ವಿಸ್ತಾರವಾಗಿ ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಒಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವ್ಯಧಿಕಶತತಮೋಽಧ್ಯಾಯಃ

---

॥ ಕುಂಜಲ ಉವಾಚ ॥

ಸರ್ವಂ ವತ್ಸ ಪ್ರವಕ್ಷ್ಯಾಮಿ ಯತ್ತ್ವಯೋಕ್ತಂ ಮಮಾಧುನಾ ।
ಭವಯೋರ್ನಿರ್ವೇದನಂ ಯತ್ತು ತಸ್ಮಾಜ್ಜಾತಂ ದ್ವಿಜೋತ್ತಮ ॥ ೧ ॥

ಏಕದಾ ತು ಮಹಾದೇವೀ ಪಾರ್ವತೀ ಪರ್ವತೋತ್ತಮೇ ।
ಕ್ರೀಡಮಾನಾ ಮಹಾತ್ಮಾನಮೀಶ್ವರಂ ವಾಕ್ಯಮಬ್ರವೀತ್ ॥ ೨ ॥

ಮಮೋರಸಿ ಮಹಾದೇವ ಮಹದೇತತ್ಸುದೋಹದಂ ।
ದರ್ಶಯಸ್ವ ಮಮಾಗ್ರೇ ತ್ವಂ ಕಾನನಂ ಕಾನನೋತ್ತಮಂ ॥ ೩ ॥

---

## ನೂರ ಎರಡನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಎಲೈ ಪುತ್ರನೇ, ನೀನು ನನಗೆ ಹೇಳಿದ ವಿಷಯಗಳೆಲ್ಲವನ್ನೂ ತಿಳಿಸುತ್ತೇನೆ. ಪಾರ್ವತೀಪರಮೇಶ್ವರರ ಆ ದುಃಖವೂ, ಅದು ಯಾತರಿಂದ ಹುಟ್ಟಿತೆಂಬುದೂ ವಿಸ್ತರಿಸಲ್ಪಡುತ್ತದೆ.

೨. ಆ ಪರ್ವತದಲ್ಲಿ ಕ್ರೀಡಿಸುತ್ತಿದ್ದ ಪಾರ್ವತಿಯು ಒಂದುಸಾರಿ ಪ್ರೀತಿಯಿಂದ ಶಿವನನ್ನು ಕುರಿತು ಇಂತೆಂದಳು.

೩. ಎಲೈ ಮಹಾದೇವನೇ, ನನಗೆ ಇನ್ನೊಂದು ಆಸೆ ಹುಟ್ಟಿದೆ. ನನ್ನೆದುರಿಗೆ ಒಂದು ಉತ್ತಮೋತ್ತಮವಾದ ಉದ್ಯಾನವನವನ್ನು ತೋರಿಸು.

॥ ಮಹಾದೇವ ಉವಾಚ ॥

ಏವಮಸ್ತು ಮಹಾದೇವಿ ನಂದನಂ ದೇವಸಂಕುಲಂ ।
ದರ್ಶಯಿಷ್ಯಾಮಿ ತೇ ಪುಣ್ಯಂ ದ್ವಿಜಸಿದ್ಧನಿಷೇವಿತಂ ॥ ೪ ॥

ಏವಮಾಭಾಷ್ಯ ತಾಂ ದೇವೀಂ ತಯಾ ಸಹ ಗಣೈಸ್ತತಃ ।
ಜಗ್ಮತುರ್ವತ್ಸ ತೌ ದೇವೌ ನಂದನಂ ನವಮೇವ ತು ॥ ೫ ॥

ಸರ್ವಾಂಗಸುಂದರಂ ಪುಷ್ಪಮಾಲ್ಯಾದ್ಯಾಭರಣೈರ್ಯುತಂ ।
ಘಂಟಾಮಾಲಾಭಿಸಂಯುಕ್ತಂ ಕಿಂಕಿಣೀಜಾಲಮಾಲಿನಂ ॥ ೬ ॥

ವಸನೈಃ ಪದ್ಮಪುಷ್ಪೈಸ್ತು ಮುಕ್ತಾಮಾಲ್ಯಸುಶೋಭಿತಂ ।
ಹಂಸಚಂದ್ರಪ್ರತೀಕಾಶಂ ವೃಷಭಂ ಚಾರುಲಕ್ಷಣಂ ॥ ೭ ॥

ಸಮಾರೂಢೋ ಮಹಾದೇವೋ ಗಣಕೋಟಿಸಮಾವೃತಃ ।
ನಂದಿಭೃಂಗಿಮಹಾಕಾಲಸ್ಕಂದಚಂಡಮನೋಹರಾಃ ॥ ೮ ॥

ವೀರಭದ್ರೋ ಗಣೇಶಶ್ಚ ಪುಷ್ಪದಂತೋ ಜನೇಶ್ವರಃ ।
ಸುಬಲೋಽತಿಬಲೋ ನಾಮ ಮೇಘನಾದೋ ಘಟಾವಹಃ ॥ ೯ ॥

---

೪. ಮಹಾದೇವನು ಹೇಳಿದನು :—ದೇವಿಯೇ, ಹಾಗೇ ಆಗಲಿ ಬ್ರಾಹ್ಮಣರು, ಸಿದ್ಧರುಗಳಿಂದ ಸೇವಿಸಲ್ಪಟ್ಟ, ಉತ್ತಮವಾದ ನಂದನವನದಂತಿರುವ ಒಂದು ವನವನ್ನು ತೋರಿಸುತ್ತೇನೆ.

೫. ಹೀಗೆಂದು ಆ ಪಾರ್ವತಿಗೆ ಹೇಳಿ, ಆಕೆಯೊಡನೆಯೂ, ಗಣಗಳೊಡನೆಯೂ, ಕೂಡಿಕೊಂಡು ಹೊಸ ನಂದನವನಕ್ಕೆ ಹೋದನು.

೬-೭. ಎಲ್ಲಾ ವಿಷಯದಲ್ಲಿಯೂ ಸುಂದರವಾದ ಹೂಮಾಲೆಯಿಂದ ಅಲಂಕರಿಸಲ್ಪಟ್ಟ, ಘಂಟೆಗಳಿಂದಲೂ, ಗೆಜ್ಜೆಗಳಿಂದಲೂ, ಕೂಡಿರುವ, ಪದ್ಮಗಳನ್ನು ಬಿಡಿಸಿರುವ ಬಟ್ಟೆಗಳನ್ನು ಹೊದ್ದಿಸಿರುವ, ಸುಲಕ್ಷಣವಾದ ಬಸವನನ್ನು ಶಿವನು ಹತ್ತಿದನು.

೮-೧೧. ನಂದಿ, ಭೃಂಗಿ, ಮಹಾಕಾಲ, ಸ್ಕಂದ, ಚಂಡ, ಮನೋಹರ, ವೀರಭದ್ರ, ಗಣೇಶ, ಪುಷ್ಪದಂತ, ಜನೇಶ್ವರ, ಸುಬಲ, ಅತಿಬಲ, ಮೇಘನಾದ,

ಘಂಟಾಕರ್ಣಶ್ಚ ಕಾಳಿಂದಃ ಪುಳಿಂದೋ ವೀರಬಾಹುಕಃ ।
ಕೇಶಾರಿಃ ಕಿಂತರೋ ನಾಮ ಚಂದ್ರಹಾಸಃ ಪ್ರಜಾಪತಿಃ ॥ ೧೦ ॥

ಏತೇ ಚಾನ್ಯೇ ಚ ಬಹವಃ ಸನಕಾದ್ಯಾಸ್ತಪೋಧನಾಃ ।
ಗಣೈಶ್ಚ ಕೋಟಿಸಂಖ್ಯಾಕೈಃ ಸ ಶಿವಃ ಪರಿವಾರಿತಃ ॥ ೧೧ ॥

ನಂದನಂ ವನಮೇವಾಪಿ ಸೇವಿತಂ ದೇವಕಿನ್ನರೈಃ ।
ಪ್ರವಿವೇಶ ಮಹಾದೇವೋ ಗಣೈರ್ದೇವ್ಯಾ ಚ ಸೇವಿತಃ ॥ ೧೨ ॥

ದರ್ಶಯಾಮಾಸ ದೇವೇಶೋ ಗಿರಿಜಾಯೈ ಸುಶೋಭಿತಂ ।
ನಾನಾಪಾದಪಸಂಛನ್ನಂ ಫಲಪುಷ್ಪಸಮಾಕುಲಂ ॥ ೧೩ ॥

ದಿವ್ಯರಂಭಾಸಮಾಕೀರ್ಣಂ ಪುಷ್ಪವದ್ಭಿಶ್ಚ ಚಂಪಕೈಃ ।
ಮಲ್ಲಿಕಾಭಿಸ್ಸುಪುಷ್ಪಾಭಿರ್ಮಾಲತೀಜಾಲಸಂಕುಲಂ ॥ ೧೪ ॥

ನಿತ್ಯಪುಷ್ಪಿತಶಾಖಾಭಿಃ ಪಾದಪೈಃ ಶೋಭಿತಂ ವನಂ ।
ರಾಜಮಾನಂ ಮಹಾವೃಕ್ಷೈಶ್ಚಂದನೈಶ್ಚಾರುಗಂಧಿಭಿಃ ॥ ೧೫ ॥

---

ಘಟಾವಹ, ಘಂಟಕರ್ಣ, ಕಾಳಿಂದ, ಪುಳಿಂದ, ವೀರಬಾಹುಕ, ಕೇಶಾರಿ, ಕಿಂಕರ, ಚಂದ್ರಹಾಸ, ಪ್ರಜಾಪತಿ, ಸನಕ, ಸನಂದಾದಿಗಳು, ಸನತ್ಕುಮಾರಾದಿಗಳಿಂದಲೂ, ಕೋಟಿ ಸಂಖ್ಯೆಯುಳ್ಳ ಗಣಗಳಿಂದಲೂ ಕೂಡಿಕೊಂಡು ಹೊರಟನು

೧೨. ದೇವ ಕಿನ್ನರರಿಂದ ಸೇವಿತವಾದ ಆ ನಂದನವನವನ್ನು ಗಣಗಳೊಡನೆಯೂ, ದೇವಿಯೊಡನೆಯೂ, ಕೂಡಿ ಪ್ರವೇಶಿಸಿದನು.

೧೩. ಬಗೆಬಗೆ ಮರಗಳಿಂದ ಕೂಡಿದ, ಫಲಪುಷ್ಪಗಳುಳ್ಳ ಆ ವನವನ್ನು ಆಕೆಗೆ ತೋರಿಸಿದನು.

೧೪. ಉತ್ತಮವಾದ ಬಾಳೆಯಿಂದಲೂ, ಹೂಗಳುಳ್ಳ ಸಂಪಿಗೆಯ ಮರಗಳಿಂದಲೂ, ಹೂ ಬಿಟ್ಟಿರುವ ಮಲ್ಲಿಗೇ ಬಳ್ಳಿಯಿಂದಲೂ, ಮಾಲತಿ, ಜಾಜಿ ಮುಂತಾದ ಪುಷ್ಪ ಬಳ್ಳಿಗಳಿಂದಲೂ, ಆ ವನವು ಕೂಡಿದ್ದಿತು.

೧೫. ಯಾವಾಗಲೂ ಹೂ ಬಿಟ್ಟಿರುವ ಮರಗಳಿಂದಲೂ, ಒಳ್ಳೆಯ ವಾಸನೆಯುಳ್ಳ ಗಂಧವೇ ಮುಂತಾದ ಮರಗಳಿಂದಲೂ ಪ್ರಕಾಶಿಸುತ್ತಿತ್ತು.

ದೇವದಾರುವನೈರ್ಜುಷ್ಟಂ ಲವಂಗೈಶ್ಚ ಸಮಾಕುಲಂ ।
ಸರಳೈರ್ನಾರಿಕೇಳೈಶ್ಚ ತದ್ವತ್ಪೂಗೀಫಲದ್ರುಮೈಃ ॥ ೧೬ ॥

ಖರ್ಜೂರಪನಸೈರ್ದಿವ್ಯೈಃ ಫಲಭಾರಾವನಾಮಿತೈಃ ।
ಪರಿಮಳೋದ್ಗಾರಸಂಯುಕ್ತೈರ್ಗುರುವೃಕ್ಷಸಮಾಕುಲಂ ।
ಅಗ್ನಿತೇಜಸ್ಸಮಾಭಾಸೈಃ ಸಪ್ತಪರ್ಣೈಃ ಸುಪುಷ್ಪಿತೈಃ ॥ ೧೭ ॥

ರಾಜವೃಕ್ಷೈಃ ಕದಂಬೈಶ್ಚ ಪುಷ್ಪಶೋಭಾಸಮನ್ವಿತಂ ।
ಜಂಬುನಿಂಬಮಹಾವೃಕ್ಷೈರ್ಮಾತುಲಿಂಗಸಮಾಕುಲಂ ॥ ೧೮ ॥

ನಾರಂಗೈಸ್ಸಿಂಧುವಾರೈಶ್ಚ ಪಿಪ್ಪಲೈಃ ಶಾಲತಿಂದುಕೈಃ ।
ಉದುಂಬರೈಃ ಕಪಿತ್ಥೈಶ್ಚ ಜಂಬುಪಾದಪಶೋಭಿತಂ ॥ ೧೯ ॥

ಲಕುಚೈಃ ಪುಷ್ಪಸೌಗಂಧೈಃ ಸ್ಫುಟನಾರೈಃ ಸಮಾಕುಲಂ ।
ಚೂತೈಶ್ಚ ಫಲರಾಜಾದ್ಯೈರ್ನೀಲೈಶ್ಚೈವ ಘನೋಪಮೈಃ ॥ ೨೦ ॥

ಶೋಭಿತಂ ನಂದನಂ ಪುಣ್ಯಂ ಶಿವೇನ ಪರಿದರ್ಶಿತಂ ।
ಶೋಭಿತಂ ಚ ದ್ರುಮೈಶ್ಚಾನ್ಯೈಃ ಸರ್ವೈರ್ನೀಲವನೋಪಮೈಃ ॥ ೨೧ ॥

ಸರ್ವಕಾಮಫಲೋಪೇತೈಃ ಕಲ್ಯಾಣಫಲದಾಯಕೈಃ ।
ಕಲ್ಪದ್ರುಮೈರ್ಮಹಾಪುಣ್ಯೈಃ ಶೋಭಿತಂ ನಂದನಂ ವನಂ ॥ ೨೨ ॥

---

೧೬-೧೭. ದೇವದಾರು, ಲವಂಗ, ಸರಳ, ತೆಂಗು, ಅಡಕೆ, ಖರ್ಜೂರ, ಹಲಸು, ಇವುಗಳು ಫಲವನ್ನು ಬಿಟ್ಟು ಅದರ ಭಾರಕ್ಕೆ ಬಗ್ಗಿದ್ದುವು. ವಾಸನೆಯನ್ನು ಬೀರುತ್ತಿರುವ ಅಗರು ಪಚ್ಚಕರ್ಪೂರದ ಮರಗಳಿಂದಲೂ, ಕೂಡಿದ್ದಿತು.

೧೮-೨೦. ಕಕ್ಕೆಮರಗಳು, ಕಡಪವಮರಗಳು, ಪುಷ್ಪವನ್ನು ಬಿಟ್ಟಿದ್ದುವು. ನೇರಳೆ, ಬೇವು. ಹೇರಳೆ, ಕಿತ್ತಳೆ, ಲಕ್ಕಿ, ಅರಳಿ, ಸಾಲ, ತಿಂದುಕ, ಅತ್ತಿ, ಬೇಲ, ಒಳ್ಳೆಯ ಹೂಗಳನ್ನು ಬಿಟ್ಟಿರುವ ಮಾವು, ಇವುಗಳು ಮೇಘಮಂಡಲವನ್ನು ಮುಟ್ಟುತ್ತಾ, ಸೊಂಪಾಗಿ ಬೆಳದಿದ್ದುವು. ಇಂತಹ ಒಳ್ಳೆಯ ಮರಗಳಿಂದ ಆ ವನವು ಕೂಡಿತ್ತು. ಇಂತಹ ವನವನ್ನು ಶಿವನು ತೋರಿಸಿದನು.

೨೧-೨೨. ನೀಲವನವೆಂಬಂತಿರುವ, ಅನೇಕ ಚೆನ್ನಾಗಿರುವ ಮರಗಳಿಂದ ಶೋಭಿತವಾದ, ಎಲ್ಲಾ ಇಷ್ಟಗಳನ್ನೂ ಕೊಡುವ ಕಲ್ಪವೃಕ್ಷಗಳಿಂದಲೂ ಕೂಡ, ಆ ನಂದನವನವು ಪ್ರಕಾಶಿಸುತ್ತಿತ್ತು.

ನಾನಾಪಕ್ಷಿನಿನಾದೈಶ್ಚ ಸಂಕುಲಂ ಮಧುರಸ್ವರೈಃ ।
ಕೋಕಿಲಾನಾಂ ರುತೈಃ ಪುಣ್ಯೈರುದ್ಘುಷ್ಟಂ ಮಧುಕಾರಿಭಿಃ ॥ ೨೩ ॥

ಮಕರಂದವಿಲೀನಾಭಿರ್ಭ್ರಮರೀಭಿರ್ವಿರಾಜಿತಂ ।
ನಾನಾವೃಕ್ಷೈಸ್ಸಮಾಕೀರ್ಣಂ ನಾನಾಮೃಗಗಣಾಕುಲಂ ॥ ೨೪ ॥

ವೃಕ್ಷೇಭ್ಯಃ ಪತಿತೈಃ ಪುಷ್ಪೈಃ ಸುಗಂಧೈಃ ಪತಿತೈರ್ಭುವಿ ।
ಸಾ ಚ ಭೂ ರಾಜತೇ ಪುತ್ರ ಪೂಜಿತೇವ ಸುಗಂಧಿಭಿಃ ॥ ೨೫ ॥

ತತ್ರ ವಾಪ್ಯೋ ಮಹಾಪುಣ್ಯಾಃ ಪದ್ಮಸೌಗಂಧಿನಿರ್ಮಲಾಃ ।
ತೋಯೈಸ್ತಾಃ ಕ್ಷುಭಿತಾಃ ಪುತ್ರ ಹಂಸಕಾರಂಡಘೋಷಿತಾಃ ॥ ೨೬ ॥

ತಟಾಗೈಶ್ಚಾಗರಪ್ರಖ್ಯೈಃ ತೋಯಸೌಗಂಧ್ಯಪೂಜಿತೈಃ ।
ನಂದನಂ ಭಾತಿ ಸರ್ವತ್ರ ಗಣೈರಪ್ಸರಸಾಂ ಮಹತ್ ॥ ೨೭ ॥

ವಿಮಾನೈಃ ಕಲಶೈಃ ಶುಭ್ರೈರ್ಹೇಮದಂಡೈಸ್ಸುಶೋಭನೈಃ ।
ನಂದನಂ ವನರಾಜಸ್ತು ಪ್ರಾಸಾದೈಶ್ಚ ಸುಶೋಭಿತಃ ॥ ೨೮ ॥

---

೨೩-೨೫. ಮಧುರಸ್ವರವುಳ್ಳ ಹಕ್ಕಿಗಳ ಧ್ವನಿಯಿಂದ ಕೂಡಿದೆ. ಕೋಕಿಲೆಗಳ ಧ್ವನಿಗಳಿಂದ ಕೂಡಿದೆ. ಮಕರಂದದಲ್ಲಿ ಆಸಕ್ತವಾದ ದುಂಬಿಗಳಿಂದ ಕೂಡಿದೆ. ನಾನಾ ವೃಕ್ಷಗಳಿಂದಲೂ, ನಾನಾ ಮೃಗಗಳಿಂದಲೂ, ಕೂಡಿದೆ. ಅಲ್ಲಿರುವ ಭೂಮಿಯ ಮೇಲೆ ಸುವಾಸನೆಯಾದ ಹೂಗಳು ಬಿದ್ದಿರುವುದರಿಂದ ಅದನ್ನು ಪೂಜಿಸಿದಂತೆ ಕಾಣುತ್ತದೆ.

೨೬ ಪದ್ಮದ ವಾಸನೆಯುಳ್ಳ ನಿರ್ಮಲವಾದ ಕೊಳಗಳು ಅಲ್ಲಿವೆ. ಅದರ ನೀರು ಹಂಸಬಕಗಳಿಂದ ಅಲ್ಲೋಲಕಲ್ಲೋಲವಾಗುತ್ತಿವೆ.

೨೭. ಸುವಾಸನೆಯುಳ್ಳ ನೀರಿರುವ ಕೆರೆಗಳಿಂದಲೂ, ಅಪ್ಸರಸ್ತ್ರೀಯರಿಂದಲೂ, ಆ ವನವು ಶೋಭಿತವಾಗಿದೆ.

೨೮. ಒಳ್ಳೆಯ ಮಹಡಿಯುಳ್ಳ, ಚಿನ್ನಾಗಿರುವ ಕಲಶಗಳುಳ್ಳ, ಅದಕ್ಕೆ ಚಿನ್ನದ ದಂಡವುಳ್ಳ ಮನೆಗಳಿಂದ ಶೋಭಿತವಾಗಿದೆ.

ಯತ್ರ ಯತ್ರ ಪ್ರಭಾತ್ಯೇವ ಕಿನ್ನರಾಣಾಂ ಮಹಾಗಣೈಃ ।
ಗಂಧರ್ವೈರಪ್ಸರೋಭಿಶ್ಚ ಸುರೂಪಾಭಿರ್ದ್ವಿಜೋತ್ತಮ ॥ ೨೯ ॥

ದೇವತಾನಾಂ ವಿನೋದೈಶ್ಚ ಮುನಿವೃಂದೈಸ್ಸುಯೋಗಿಭಿಃ ।
ಸರ್ವತ್ರ ಶೋಭತೇ ಪುಣ್ಯಂ ಸ್ಥಾನಂ ತು ನಂದನಸ್ಯ ಚ ॥ ೩೦ ॥

ಏವಂ ಸಮಾಲೋಕ್ಯ ಮಹಾನುಭಾವೋ
ಭವಶ್ಚ ದೇವ್ಯಾ ಸಹಿತೋ ಮಹಾತ್ಮಾ ॥
ಶ್ರೀನಂದನಂ ಪುಣ್ಯವತಾಂ ನಿವಾಸಂ
ಸುಖಾಕರಂ ಶಾಸ್ತ್ರಿಗುಣೈರುಪಪನ್ನಂ ॥ ೩೧ ॥

ಆದಿತ್ಯತೇಜಸ್ಸಮತೇಜಸಾಂ ಗಣೈಃ
ಪ್ರಭಾತಿ ವೈ ರಶ್ಮಿಭಿರ್ಜಾತರೂಪೈಃ ॥
ಪುಷ್ಪೈಃ ಫಲೈ ಕಾಮಗುಣೋಪಪನ್ನೈಃ
ಕಲ್ಪದ್ರುಮೋ ನಂದನಕಾನನೇಽಪಿ ॥ ೩೨ ॥

ಏವಂವಿಧಂ ಪಾದಪರಾಜಮೇವ
ಸಮೀಕ್ಷ್ಯ ದೇವೀ ಚ ಶಿವಂ ಬಭಾಷೇ ॥

---

೨೯. ಕಿನ್ನರರ ಗುಂಪು, ಗಂಧರ್ವರು, ಅಪ್ಸರಸ್ತ್ರೀಯರು, ಅಲ್ಲಿ ಎಲ್ಲಾ ಕಡೆಯಲ್ಲಿಯೂ ಇದ್ದಾರೆ.

೩೦. ದೇವತೆಗಳ ತಮಾಷೆಗಳಿಂದಲೂ, ಯೋಗಿಗಳ ಯೋಗದಿಂದಲೂ, ಆ ನಂದನವನದ ಜಾಗಗಳು ಪ್ರಕಾಶಿಸುತ್ತವೆ.

೩೧. ಆ ಮಹಾತ್ಮನಾದ ಶಿವನು. ಹೆಂಡತಿಯೊಡನೆ ಈ ರೀತಿಯಾಗಿ ಪುಣ್ಯ ನಿವಾಸವಾದ, ಸುಖಕರವಾದ, ಶಾಂತಿಯಿಂದ ಕೂಡಿದ ಆಶ್ರಮವನ್ನು ನೋಡಿದನು.

೩೨. ಸೂರ್ಯನ ಕಾಂತಿಯಂತೆ ಕಾಂತಿಯುಳ್ಳ, ಸುವರ್ಣದ ತೇಜಸ್ಸಿನಿಂದಲೂ, ಪುಷ್ಪಫಲಗಳಿಂದ ಕೂಡಿ ಇಷ್ಟಾರ್ಥವನ್ನು ಕೊಡುವ ಕಲ್ಪವೃಕ್ಷಗಳಿಂದಲೂ ಅದು ಕೂಡಿದೆ.

ಅಸ್ಯಾಭಿದಾನಂ ಕಥಯಸ್ವ ನಾಥ
ಸರ್ವಸ್ಯ ಪುಣ್ಯಸ್ಯ ನಗಸ್ಯ ಪುಣ್ಯಂ ॥ ೩೩ ॥

॥ ಶಿವ ಉವಾಚ ॥

ಅಸ್ಯ ಪ್ರತಿಷ್ಠಾ ಮಹತೀ ಶುಭಾಖ್ಯಾ
ದೇವೇಷು ಮುಖ್ಯೋ ಮಧುಸೂದನಶ್ಚ ।
ನದೀಷು ಮುಖ್ಯಾ ಸುರನಿಮ್ನಗಾಪಿ
ವಿಸೃಷ್ಟಿಕರ್ತಾ ಚ ಯಥೈವ ಧಾತಾ ॥ ೩೪ ॥

ಸುಖಾವಹಾನಾಂ ತು ಯಥೈವ ಚಂದ್ರೋ
ಭೂತೇಷು ಮುಖ್ಯಾ ಚ ಯಥೈವ ಪೃಥ್ವೀ ॥
ನಗೇಂದ್ರರಾಜೋ ಹಿ ಯಥಾ ನಗಾನಾಂ
ಜಲಾಶಯೇಷ್ವೇವ ಯಥಾ ಸಮುದ್ರಃ ॥ ೩೫ ॥

ಮಹೌಷಧೀನಾಮಿವ ದೇವಿ ಚಾನ್ನಂ
ಮಹೀಧರಾಣಾಂ ಹಿಮವಾನ್ಯಥೈವ ॥
ವಿದ್ಯಾಸು ಮುಖ್ಯೇ ಚ ಯಥಾತ್ಮವಿದ್ಯಾ
ಲೋಕೇಷು ಸರ್ವೇಷು ಯಥಾ ನರೇಂದ್ರಃ ॥ ೩೬ ॥

---

೩೩. ಪಾರ್ವತಿಯು ಇಂತಹ ಉತ್ತಮವಾದ ಮರವನ್ನು ನೋಡಿ ಈ ಪರ್ವತಕ್ಕೇ ಪುಣ್ಯರೂಪವಾದ ಈ ಮರದ ಹೆಸರೇನು ? ಎಂದು ಕೇಳಿದಳು.

೩೪-೩೬. ಶಿವನು ಹೇಳಿದನು :—ಇದರ ಯೋಗ್ಯತೆಯು ಬಹು ದೊಡ್ಡದು. ಇದರ ಹೆಸರು ಶುಭವೆಂದು. ದೇವತೆಗಳಲ್ಲಿ ಮಧುಸೂಧನನೂ, ನದಿಗಳಲ್ಲಿ ಗಂಗೆಯೂ, ಸೃಷ್ಟಿಕರ್ತೃಗಳಲ್ಲಿ ಬ್ರಹ್ಮನೂ, ಸುಖಕರರಲ್ಲಿ ಚಂದ್ರನೂ, ಪಂಚಭೂತಗಳಲ್ಲಿ ಭೂಮಿಯೂ, ಪರ್ವತಗಳಲ್ಲಿ ಹಿಮವಂತನೂ, ನೀರುಗಳಲ್ಲಿ ಸಮುದ್ರವೂ, ಓಷಧಿಗಳಲ್ಲಿ ಅನ್ನವೂ, ನಗಗಳಲ್ಲಿ ನಗೇಂದ್ರರಾಜನೂ, ವಿದ್ಯೆಗಳಲ್ಲಿ ವೇದಾಂತವೂ, ಪ್ರಪಂಚದಲ್ಲೆಲ್ಲಾ ರಾಜನೂ, ಹೇಗೆ ಮುಖ್ಯವೋ, ಹಾಗೆಯೇ ಈ ವೃಕ್ಷರಾಜನು ಮುಖ್ಯನಾದವನು. ವಿಷ್ಣುಪತ್ನಿಯಾದ ಲಕ್ಷ್ಮಿಯು ಹೇಗೆ ಎಲ್ಲರಿಗೂ ಅತಿಥಿಯೋ ಹಾಗೆ ಎಲ್ಲರಿಗೂ ಇದು ಅತಿಥಿಯು.

ತಥೈವ ಮುಖ್ಯಸ್ತರುರಾಜ ಏಷಃ
ಸರ್ವಾತಿಥಿಃ ಸರ್ವಪತೇಃ ಶ್ರಿಯೋಪಮಃ ॥

॥ ಪಾರ್ವತ್ಯುವಾಚ ॥

ಗುಣಾಂಶ್ಚ ಶಂಭೋ ಮಮ ಕೀರ್ತಯಸ್ವ
ವೃಕ್ಷಾಧಿಪಸ್ಯಾಪಿ ಶುಭಾನ್ ಸುಪುಣ್ಯಾನ್ ॥ ೩೭ ॥

ಆಕರ್ಣ್ಯ ದೇವೋ ವಚನಂ ಬಭಾಷೇ
ದೇವ್ಯಾಸ್ತು ಸರ್ವಂ ಸುತರೋರ್ಹಿ ತಸ್ಯ ॥
ಯಂ ಯಂ ತು ಕಲ್ಪಯಂತಿ ಸುಪುಣ್ಯಯುಕ್ತಾ
ದೇವೋಪಮಾ ದೇವವರಾಶ್ಚ ದೇವಿ ॥ ೩೮ ॥

ತಂ ತಂ ಹಿ ವೃಕ್ಷಃ ಪ್ರದದಾತಿ ತೇಭ್ಯಃ
ಫಲಾದ್ರಸಾನಾಂ ಚ ಸ ವೃಕ್ಷ ಏಕಃ ॥
ತಸ್ಮಾಚ್ಚ ಸರ್ವೇ ಪ್ರಭವಂತಿ ಪುಣ್ಯಾ
ದುಷ್ಪ್ರಾಪ್ಯಮತ್ರೈವ ತಪೋಧಿಕಾಸ್ತೇ ॥ ೩೯ ॥

---

೩೭. ಪಾರ್ವತಿಯು ಕೇಳಿದಳು:—ಈ ವೃಕ್ಷರಾಜನ ಗುಣಗಳನ್ನು ನನಗೆ ಹೇಳು ಎಂದಳು.

೩೮. ದೇವಿಯ ಆ ಮಾತನ್ನು ಕೇಳಿ ಶಿವನು ಹೇಳಿದನು. ಎಲೈ ದೇವಿ! ದೇವತೆಗಳೂ, ದೇವತೆಗಳಂತಿರುವವರೂ, ಪುಣ್ಯವಂತರೂ, ಏನೇನನ್ನು ಮನಸ್ಸಿನಲ್ಲಿ ಬೇಕೆಂದು ಅಪೇಕ್ಷಿಸುತ್ತಾರೆಯೋ ಅವರವರಿಗೆ ಆಯಾಯ ರಸಗಳನ್ನೂ ಹಣ್ಣುಗಳನ್ನೂ ಈ ವೃಕ್ಷ ಒಂದೇ ಕೊಡುತ್ತದೆ.

೩೯. ತಪೋಧಿಕರಾದ ಅವರಿಗೆ ಯಾವುದು ಸಿಕ್ಕುವುದು ಕಷ್ಟವೋ, ಅದೆಲ್ಲವನ್ನೂ ಇದು ಕೊಡುತ್ತದೆ. ಇದು ದೇವತೆಗಳಿಗೆ ಪ್ರಾಣಕ್ಕಿಂತಲೂ, ಅಧಿಕವಾದ ರತ್ನವು. ದಿವ್ಯವಾದುದು. ಇದನ್ನೇ ಮುಖ್ಯರಾದ ದೇವತೆಗಳೆಲ್ಲರೂ ಅನುಭವಿಸುತ್ತಾರೆ.

ಜೀವಾಧಿಕಂ ರತ್ನಮಯಂ ಸುದಿವ್ಯಂ
ದೇವಾಸ್ತು ಭುಂಜಂತಿ ಮಹಾಪ್ರಧಾನಾಃ ॥
ಶುಶ್ರಾವ ದೇವೀ ವಚನಂ ಶಿವಸ್ಯ
ಆಶ್ಚರ್ಯಭೂತಂ ಮನಸಾ ವಿಚಿಂತ್ಯ ॥ ೪೦ ॥

ತಸ್ಯಾನುಮತ್ಯಾ ಪರಿಕಲ್ಪಿತಂ ಚ
ಸ್ತ್ರೀಭಾವರೂಪಂ ಸುಗುಣಂ ಸುರೂಪಂ ॥
ಸರ್ವಾಂಗರೂಪಂ ಸುಗುಣಂ ಸುರೂಪಂ
ತಸ್ಮಾತ್ತದಾ ಸಾ ಗಿರಿಜಾ ಪ್ರಲೇಭೇ ॥ ೪೧ ॥

ವಿಶ್ವಸ್ಯ ಮೋಹಾಯ ಯಥೋಪವಿಷ್ಟಾ
ಸಹಾಯರೂಪಾ ಮಕರಧ್ವಜಸ್ಯ ॥
ಕ್ರೀಡಾನಿಧಾನಂ ಸುಖಸಿದ್ಧಿರೂಪಂ
ಸರ್ವಾಭಿಪನ್ನಾ ಕಮಲಾಯತಾಕ್ಷೀ ॥ ೪೨ ॥

ಪದ್ಮಾನನಾ ಪದ್ಮಕರಾ ಸುಪದ್ಮಾ
ಚಾಮೀಕರಸ್ಯಾಪಿ ಯಥಾ ಸುಮೂರ್ತಿಃ ॥

---

೪೦-೪೧. ಈಶ್ವರನ ಈ ಮಾತನ್ನು ಪಾರ್ವತಿಯು ಕೇಳಿದಳು. ಒಂದು ಆಶ್ಚರ್ಯವಾದ ವಿಷಯವನ್ನು ಮನಸ್ಸಿನಲ್ಲಿ ಯೋಚಿಸಿ ಶಿವನ ಅನುಮತಿಯಿಂದ ಮನಸ್ಸಿನಲ್ಲಿದ್ದಂತೆ ಗುಣವತಿಯಾದ, ಸರ್ವಾಂಗಸುಂದರಿಯಾದ ಒಬ್ಬಳನ್ನು ಆ ಮರದಿಂದ ಪಡೆದಳು.

೪೨. ಇವಳು ಕುಳಿತಿರುವುದನ್ನು ನೋಡಿದರೆ ಈಕೆಯು ಮನ್ಮಥನಿಗೆ ಸಹಾಯಕಳಾಗಿ ಪ್ರಪಂಚವನ್ನೇ ಮೋಹಗೊಳಿಸುವುದಕ್ಕೆ ಕುಳಿತಿದ್ದಾಳೋ ಎನ್ನುವಂತಿದ್ದಳು. ಸ್ತ್ರೀಗೆ ನಿಧಿರೂಪವಾದವಳು, ಸುಖಕ್ಕೆ ಸಿದ್ಧರೂಪಳು. ಎಲ್ಲದರಿಂದಲೂ ಕೂಡಿದವಳು.

೪೩. ಪದ್ಮದಂತೆ ಮುಖವುಳ್ಳವಳು. ಪದ್ಮವನ್ನು ಕೈಲಿ ಹಿಡಿದಿದ್ದಾಳೆ. ಸುವರ್ಣದ ಮೂರ್ತಿಯೋ ಎಂಬಂತೆ ಪರಿಶುದ್ಧವಾದ ಕಾಂತಿಯುಳ್ಳವಳು. ಒಳ್ಳೆಯ ಲೀಲೆಯುಳ್ಳವಳು. ಸ್ವಲ್ಪ ಬಗ್ಗಿದ್ದಾಳೆ.

ಪ್ರಭಾಸು ತದ್ವದ್ವಿಮಲಾ ಸುತೇಜಾ
ಲೀಲಾಸುತೇಜಾಶ್ಚ ಸುಕುಂಚಿತಾಸ್ತೇ ॥ ೪೩ ॥

ಪ್ರಲಂಬಕೇಶಾಃ ಪರಿಸೂಕ್ಷ್ಮಬದ್ಧಾಃ
ಪುಷ್ಪೈಸ್ಸುಗಂಧೈಃ ಪರಿಲೇಪಿತಾಶ್ಚ ॥
ಪ್ರಬದ್ಧಕುಂತಾ ದೃಢಕೇಶಬಂಧೈ
ರ್ವಿಭಾತಿ ಸಾ ರೂಪವರೇಣ ಬಾಲಾ ॥ ೪೪ ॥

ಸೀಮನ್ತಮಾರ್ಗೇ ಚ ಮುಕ್ತಾಫಲಾನಾಂ
ಮಾಲಾ ವಿಭಾತ್ಯೇವ ಯಥಾ ತರೂಣಾಂ ॥
ಸೀಮಂತಮೂಲೇ ತಿಲಕಂ ಸುದೇವ್ಯಾ
ಯಥೋದಿತೋ ದೈತ್ಯಗುರುಸ್ಸುತೇಜಾಃ ॥ ೪೫ ॥

ಭಾಲೇ ಸುಪದ್ಮೇ ಮೃಗನಾಭಿಪದ್ಮ
ಸಮುತ್ಥತೇಜಃ ಪ್ರಕರೈರ್ವಿಭಾತಿ ॥
ಸೀಮಂತಮೂಲೇ ತಿಲಕಸ್ಯ ತೇಜಃ
ಪ್ರಕಾಶಯೇದ್ರೂಪಶ್ರಿಯಂ ಸುಲೋಕೇ ॥ ೪೬ ॥

---

೪೪. ತಲೆಕೂದಲು ಉದ್ದವಾಗಿದೆ. ಮತ್ತು ಸಣ್ಣಗೆ ಸೂಕ್ಷ್ಮವಾಗಿದೆ. ಹೂವನ್ನು ಮುಡಿದಿದ್ದಾಳೆ. ಗಂಧವನ್ನು ಹಚ್ಚಿಕೊಂಡಿದ್ದಾಳೆ. ತಲೆಯಲ್ಲಿ ಜಡೆಯನ್ನು ಹಾಕಿಕೊಂಡಿದ್ದರೆ ಬರುಬರುತ್ತ ಸಣ್ಣನಾಗಿ ಕುಂತವೆಂಬ ಆಯುಧದಂತಿದೆ. ಇಂತಹ ರೀತಿಯಿಂದಲೂ, ರೂಪದಿಂದಲೂ, ಆಕೆಯು ಪ್ರಕಾಶಿಸುತ್ತಿದ್ದಾಳೆ.

೪೫. ಬೈತಲೆಯಲ್ಲಿ ಮುತ್ತಿನ ಮಾಲೆಯು ಪ್ರಕಾಶಿಸುತ್ತದೆ ಬೈತಲೆಯ ಮೊದಲಿನಲ್ಲಿ ಹಣೆಯತಿಲಕವು, ಆಕಾಶದಲ್ಲಿ ಶುಕ್ರಗ್ರಹವು ಹುಟ್ಟಿದಂತೆ ಪ್ರಕಾಶಿಸುತ್ತದೆ.

೪೬. ಹಣೆಯಲ್ಲಿ ಕಸ್ತೂರಿಯು ಪದ್ಮಕಾಂತಿಯುತವಾಗಿ ಪ್ರಕಾಶಿಸುತ್ತದೆ. ಬೈತಲೆಯ ಬುಡದಲ್ಲಿರುವ ತಿಲಕದ ತೇಜಸ್ಸು ಆಕೆಯ ರೂಪವನ್ನು ಹೆಚ್ಚಿಸುತ್ತದೆ.

ಕೇಶೇಷು ಮುಕ್ತಾಫಲಕೇ ಚ ಭಾಲೇ
ತಸ್ಯಾಸ್ಸುಶೋಭಾಂ ವಿಕರೋತಿ ನಿತ್ಯಂ ॥
ಯಥಾ ತು ಚಂದ್ರಃ ಪರಿತೋ ವಿಭಾತಿ
ಸುರಮ್ಯಚೇಷ್ಟೇವ ವಿಭಾತಿ ತದ್ವತ್ ॥ ೪೭ ॥

ಸಂಪೂರ್ಣಚಂದ್ರೋಽಪಿ ಯಥಾ ವಿಭಾತಿ
ಜ್ಯೋತ್ಸ್ನಾ ನಿಪಾತೇನ ಹಿಮಾಂಶುತೇಜಃ ॥
ತಸ್ಯಾಸ್ತು ವಕ್ತ್ರಂ ಪರಿಭಾತಿ ತದ್ವ
ಚ್ಛೋಭಾಕರಂ ವಿಶ್ವವಿಶಾರದಂ ಚ ॥ ೪೮ ॥

ಹಿಮಾಂಶುರೇವಾಪಿ ಕಳಂಕಯುಕ್ತಃ
ಸಂಕ್ಷೀಯತೇ ನಿತ್ಯಕಳಾವಿಹೀನಃ ॥
ಸಂಪೂರ್ಣಮಸ್ತ್ಯೇವ ಸದೈವ ಹೃಷ್ಟಂ
ತಸ್ಯಾಸ್ತು ವಕ್ತ್ರಂ ಪರಿನಿಷ್ಕಳಂಕಂ ॥ ೪೯ ॥

ಗಂಧಂ ವಿಕಾಶಂ ಕಮಲೇ ಸ್ವಕೀಯಂ
ತತಸ್ಸಮಾಲೋಕ್ಯ ಸುಖಂ ನ ಲೇಭೇ ॥

---

೪೭. ಚಂದ್ರನು ಆಕಾಶದಲ್ಲಿ ಪ್ರಕಾಶಿಸುವಂತೆ ಆ ಕೇಶಗಳ ಸಮೀಪದಲ್ಲಿಯೂ, ಮುತ್ತುಗಳ ಹತ್ತಿರದಲ್ಲಿಯೂ, ಆ ತಿಲಕವು ಪ್ರಕಾಶಿಸುತ್ತ ಕಾಂತಿಯನ್ನು ಆಕೆಯ ರೂಪಕ್ಕೆ ಹೆಚ್ಚಿಸುತ್ತದೆ.

೪೮. ಪೂರ್ಣಚಂದ್ರನು ತನ್ನ ಬೆಳದಿಂಗಳಿನಿಂದ ಹೇಗೆ ಪ್ರಕಾಶಿಸುತ್ತಾನೋ ಹಾಗೆ ಆಕೆಯ ಮುಖವು ಕಾಂತಿಯಿಂದ ಕೂಡಿ ಪ್ರಕಾಶಿಸುತ್ತಿತ್ತು.

೪೯. ಚಂದ್ರನು ಕಳಂಕವನ್ನು ಹೊಂದಿರುವನು. ದಿನದಿನಕ್ಕೂ ಕ್ಷಯಿಸುತ್ತಾನೆ. ಈಕೆಯ ಮುಖವು ಹಾಗಲ್ಲ. ಸಂಪೂರ್ಣವಾಗಿಯೂ, ಕಳಂಕಶೂನ್ಯವಾಗಿಯೂ, ಸಂತೋಷಗೊಂಡೂ, ಕ್ಷಯಹೀನವಾಗಿಯೂ ಇದೆ.

೫೦. ಈಕೆಯು ಕಮಲದಲ್ಲಿ ತನ್ನ ವಾಸನೆಯಿರುವುದನ್ನು ನೋಡಿ ಖೇದಗೊಂಡಳು. ಈಕೆಯು ಪದ್ಮಾನನಳು. ಸರ್ವಗುಣೋಪಪನ್ನಳಾದ ಈಕೆಯು ಆ ಕಮಲದಿಂದ ನಿರ್ಮಿಸಲ್ಪಟ್ಟವಳಲ್ಲವೇ ?

ಪದ್ಮಾನನಾ ಸರ್ವಗುಣೋಪಪನ್ನಾ
ಮದೀಯಭಾವೈಃ ಪರಿನಿರ್ಮಿತೇಯಂ ॥ ೫೦ ॥

ಗಂಧಂ ಸ್ವಕೀಯಂ ತು ವಿಪಶ್ಯ ಪದ್ಮಂ
ತಸ್ಯಾ ಮುಖಾದ್ವಾತಿ ಜಗತ್ಸಮೀರಃ ॥
ಲಜ್ಜಾಭಿಯುಕ್ತಂ ಸಹಸಾ ಬಭೂವ
ಜಲಂ ಸಮಾಶ್ರಿತ್ಯ ಸದೈವ ತಿಷ್ಠತಿ ॥ ೫೧ ॥

ಕತಿಮತಿನಿಯತಬುದ್ಧ್ಯಾ ಸುಧಿಯೋ ವದಂತಿ
ಸಮುದನನ್ನೃಪತೇಃ ಕೋಶಂ ಸಮುದ್ರಕಳಾಭಿಃ ॥
ಸುವರದಶನರತ್ನೈರ್ಹಾಸ್ಯಲೀಲಾಭಿಯುಕ್ತಾ
ಅರುಣಅಧರಬಿಂಬಂ ಶೋಭಮಾನಸ್ತು ಆಸ್ಯಃ ॥ ೫೨ ॥

ಶುದ್ಧಾ ಸುನಾಸಿಕಾ ತಸ್ಯಾಃ ಸುಕರ್ಣೌ ರತ್ನಭೂಷಿತೌ ।
ಹೇಮಕಾಂತಿಸಮೋಪೇತೌ ಕಪೋಲೌ ದೀಪ್ತಿಸಂಯುತೌ ॥ ೫೩ ॥

ರೇಖಾತ್ರಯಂ ಪ್ರಶೋಭೇತ ಗ್ರೀವಾಯಾಂ ಪರಿಸಂಸ್ಥಿತಂ ।
ಸೌಭಾಗ್ಯಸಂಪಚ್ಛೃಂಗಾರೈಸ್ತಿಸ್ರೋ ರೇಖಾ ಇಹೈವ ಹಿ ॥ ೫೪ ॥

---

೫೧. ಪದ್ಮವು ತನ್ನ ಗಂಧವೇ ಉತ್ತಮವೆಂದು ತಿಳಿದಿತ್ತು. ಆಕೆಯ ಮುಖದಿಂದ ಬೀಸುವ ಗಾಳಿಯಲ್ಲಿ ವಾಸನೆಯನ್ನು ನೋಡಿ ಅದೇ ಹೆಚ್ಚೆಂದು ತಿಳಿದು ಲಜ್ಜೆಪಟ್ಟು ಜಾಗ್ರತೆಯಾಗಿ ನೀರನ್ನು ಹೊಕ್ಕು ಅವಿತುಕೊಂಡಿತು.

೫೨. ಉತ್ತಮವಾದ ಹಲ್ಲುಗಳಿಂದಲೂ, ಕೆಂದುಟಿಗಳಿಂದಲೂ ಪ್ರಕಾಶಿಸುತ್ತಿರುವ ಈಕೆಯ ಮುಖವನ್ನು ನೋಡಿ ಬುದ್ಧಿವಂತರಾದ ವಿದ್ವಾಂಸರು ಮನ್ಮಥನು ಕಳೆಗಳನ್ನು ಈಕೆಯ ಮುಖವೆಂಬ ಕೋಶದಲ್ಲಿಟ್ಟು ಮುದ್ರೆಯೊತ್ತಿರುವನೆಂದು ಹೇಳುವರು.

೫೩. ಅವಳ ಮೂಗು ಶುದ್ಧವಾಗಿಯೂ, ಕಿವಿಗಳು ರತ್ನಾಭರಣದಿಂದ ಕೂಡಿಯೂ, ಗಲ್ಲಗಳು ಸುವರ್ಣದ ಕಾಂತಿಯುಳ್ಳವುಗಳಾಗಿಯೂ, ಇವೆ.

೫೪. ಆಕೆಯ ಕುತ್ತಿಗೆಯಲ್ಲಿರುವ ಮೂರು ರೇಖೆಗಳನ್ನು ನೋಡಿದರೆ ಸೌಭಾಗ್ಯ, ಸಂಪತ್ತು, ಶೃಂಗಾರಗಳ ಮೂರು ರೇಖೆಗಳಂತೆ ಕಾಣುತ್ತವೆ. ಆ ಮೂರೂ, ಇಲ್ಲೇ ಇರುವುವು.

ಸುಸ್ತನೌ ಕಠಿಣೌ ಪೀನೌ ವರ್ತುಲೌ ಬಿಲ್ವಸನ್ನಿಭೌ ।
ತಸ್ಯಾಃ ಕಂದರ್ಪಕಲಶಾವಭಿಷೇಕಾಯ ಕಲ್ಪಿತೌ ।
ಅಂಸಾವತೀವ ಶೋಭೇತೇ ಸುಸಮೌ ಮಾನಸಾನ್ವಿತೌ ॥ ೫೫ ॥

ಸುಭುಜೌ ವರ್ತುಳೌ ಸ್ನಿಗ್ಧೌ ಸುವರ್ಣೌ ಲಕ್ಷಣಾನ್ವಿತೌ ।
ಸುಸಮೌ ಕರಪದ್ಮೌ ತೌ ಪದ್ಮವರ್ಣೌ ಸುಶೀತಲೌ ॥ ೫೬ ॥

ದಿವ್ಯಲಕ್ಷಣಸಂಪನ್ನೌ ಪದ್ಮಸ್ವಸ್ತಿಕಸಂಯುತೌ
ಸರಳಾಃ ಪದ್ಮಸಂಯುಕ್ತಾ ಅಂಗುಳ್ಯೋ ನಖಸಂಯುತಾಃ ॥ ೫೭ ॥

ನಖಾನಿ ಮಣಿಭಾಸೀನಿ ಜಲಬಿಂದುನಿಭಾನಿ ಚ ।
ಪದ್ಮಗರ್ಭಪ್ರತಿಚ್ಛನ್ನೋ ವರ್ಣಸ್ತದಂಗಸಂಭವಃ ॥ ೫೮ ॥

ಪದ್ಮಗಂಧಾ ಚ ಸರ್ವಾಂಗೇ ಪದ್ಮೇವ ಭಾತಿ ಭಾಮಿನೀ ।
ಸರ್ವಲಕ್ಷಣಸಂಪನ್ನಾ ನಾಗಕನ್ಯಾ ಸುಶೋಭಿತಾ ॥ ೫೯ ॥

---

೫೫. ಈಕೆಯ ಸ್ತನಗಳು, ದುಂಡಗೂ, ಮನೋಹರವಾಗಿಯೂ, ಗಟ್ಟಿಯಾಗಿಯೂ, ಬಿಲ್ವಪತ್ರೆಯ ಕಾಯಿಯಂತಿವೆ. ಇದನ್ನು ನೋಡಿದರೆ ಆಕೆಯಲ್ಲಿರುವ ಮನ್ಮಥನಿಗೆ ಅಭಿಷೇಕಮಾಡಲು ಆ ಕಲಶಗಳನ್ನು ಇಟ್ಟುಕೊಂಡಿರುವಳೋ ಎಂಬಂತಿವೆ. ಭುಜಶಿರಸ್ಸುಗಳು ಸಮವಾಗಿ ಅಳತೆಗೆ ತಕ್ಕಂತಿವೆ.

೫೬-೫೭. ಭುಜಗಳು ದುಂಡಗೂ ಮನೋಹರವಾಗಿಯೂ, ಒಳ್ಳೆಯ ಬಣ್ಣವುಳ್ಳವುಗಳಾಗಿಯೂ, ಲಕ್ಷಣದಿಂದ ಕೂಡಿಯೂ ಇವೆ. ಕೈಗಳು ಸಮವಾಗಿಯೂ, ಪದ್ಮವರ್ಣವುಳ್ಳವಾಗಿಯೂ, ಶೀತಳವಾಗಿಯೂ ಇವೆ. ದಿವ್ಯವಾದ ಲಕ್ಷಣಗಳಿಂದ ಕೂಡಿರುವುದಲ್ಲದೇ ಪದ್ಮಸ್ವಸ್ತಿಕರೇಖೆಗಳಿಂದ ಕೂಡಿವೆ. ಉಗುರಿನಿಂದ ಕೂಡಿರುವ ಈಕೆಯ ಬೆರಳುಗಳು ಪದ್ಮಚಿನ್ಹೆಯಿಂದ ಕೂಡಿವೆ.

೫೮. ಉಗುರುಗಳು ಮಣಿಯ ಕಾಂತಿಯುಳ್ಳವು. ಮತ್ತು ನೀರಿನ ಹನಿಯಂತೆ ಇರುವುವು. ಅದರಲ್ಲಿರುವ ಬಣ್ಣವು ಪದ್ಮದ ಒಳಭಾಗದ ಬಣ್ಣದಂತಿದೆ.

೫೯. ಎಲ್ಲಾ ಅವಯವಗಳಲ್ಲಿಯೂ, ಪದ್ಮದ ವಾಸನೆಯುಳ್ಳವಳಾಗಿ ಪದ್ಮದಂತೆ ಕಾಣಿಸುತ್ತಾಳೆ. ಸರ್ವಲಕ್ಷಣಸಂಪನ್ನಳಾಗಿ ನಾಗಕನ್ಯೆಯಂತಿದ್ದಾಳೆ.

ರಕ್ತೋತ್ಪಲನಿಭೌ ಪಾದೌ ಸುಶಕ್ತೌ ಚಾತಿಶೋಭನೌ ।
ರತ್ನಜ್ಯೋತಿಸ್ಸಮಾಕಾರಾ ನಖಾಃ ಪಾದಾಗ್ರಸಂಭವಾಃ ॥ ೬೦ ॥

ಯಥೋದ್ದಿಷ್ಟಂ ಚ ಶಾಸ್ತ್ರೇಷು ತಥಾ ಚಾಂಗೇ ಪ್ರದೃಶ್ಯತೇ ।
ಸರ್ವಾಭರಣಶೋಭಾಂಗೀ ಹಾರಕಂಕಣನೂಪುರಾ ॥ ೬೧ ॥

ಮೇಖಲಾಕಟಿಸೂತ್ರೇಣ ಕಾಂಚಿನಾದೇನ ರಾಜತೇ ।
ನೀಲೇನ ಪಟ್ಟವಸ್ತ್ರೇಣ ಪರಾಂ ಶೋಭಾಂ ಗತಾ ತು ಸಾ ॥ ೬೨ ॥

ಕಂಚುಕೇನಾಪಿ ದಿವ್ಯೇನ ಸುರಕ್ತೇನ ಗುಣಾನ್ವಿತಾ ।
ಪಾರ್ವತೀಕಲ್ಪಿತಾದ್ಭಾವಾದ್ಗುಣಂ ಪ್ರಾಪ್ಯ ಮಹೋದಯಂ ॥ ೬೩ ॥

ಕಲ್ಪದ್ರುಮಾನ್ಮುದಂ ಲೇಭೇ ಶಂಕರಂ ವಾಕ್ಯಮಬ್ರವೀತ್ ।
ಯಥೋಕ್ತಂ ತು ತ್ವಯಾ ದೇವ ತಥಾ ದೃಷ್ಟಂ ವನಂ ಮಯಾ ।
ಯಾದೃಶಂ ಕಥ್ಯತೇ ಭಾವೈಸ್ತಾದೃಶಂ ಪರಿದೃಶ್ಯತೇ ॥ ೬೪ ॥

---

೬೦. ಹೆಜ್ಜೆಗಳು ಕೆಂಪಾದ ನೈದಿಲೆಯಂತಿವೆ. ಗಟ್ಟಿಯಾಗಿವೆ. ಮನೋಹರವಾಗಿವೆ. ಕಾಲಿನ ಉಗುರುಗಳು ರತ್ನದ ಕಾಂತಿಯಂತಿವೆ.

೬೧. ಈಕೆಯ ಅವಯವಗಳನ್ನು ನೋಡಿದರೆ ಶಾಸ್ತ್ರದಲ್ಲಿರುವಂತೆಯೇ ಇವೆ. ಹಾರ, ಬಳೆ, ಕಾಲ್ಕಿಂಚು ಮೊದಲಾದ ಸಮಸ್ತ ಆಭರಣಗಳನ್ನೂ ಹಾಕಿಕೊಂಡಿದ್ದಾಳೆ. ಈಕೆಯ ಡಾಬು ಕಟಿಸೂತ್ರದಿಂದ ಕೂಡಿಕೊಂಡು ಒಡ್ಯಾಣದ ಶಬ್ದದಿಂದ ಕೂಡಿದೆ.

೬೨. ನೀಲಿಯ ರೇಷ್ಮೆಯವಸ್ತ್ರದಿಂದ ಉತ್ತಮವಾದ ಕಾಂತಿಯನ್ನು ಹೊಂದಿದ್ದಾಳೆ.

೬೩. ಕೆಂಪಗಿರುವ ಕುಪ್ಪಸದಿಂದಲೂ ಉತ್ತಮಳಾಗಿ ಕಾಣಿಸುತ್ತಿದ್ದಳು. ಪಾರ್ವತಿಯು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದುದಕ್ಕಿಂತಲೂ ಹೆಚ್ಚು ಭಾವವನ್ನು ಹೊಂದಿದ್ದಳು. ಕಲ್ಪವೃಕ್ಷದಿಂದ ಹೊಂದುವ ಸಂತೋಷಕ್ಕಿಂತಲೂ, ಹೆಚ್ಚಾದ ಸಂತೋಷವನ್ನು ಹೊಂದಿದವಳು. ಶಂಕರನನ್ನು ಕುರಿತು ಇಂತೆಂದಳು.

೬೪. ಸ್ವಾಮಿ, ನೀನು ಹೇಗೆ ಹೇಳಿದೆಯೋ ಅದರಂತೆಯೇ ಕಾಣಿಸುತ್ತಿದೆ. ಭಾವಗಳನ್ನು ಹೇಗೆ ಹೇಳುತ್ತೇವೆಯೋ ಹಾಗೆಯೇ ಕಾಣಿಸುತ್ತಿದೆ.

॥ ಸೂತ ಉವಾಚ ॥

**ಅಥ ಸಾ ಚಾರುಸರ್ವಾಂಗೀ ತಯೋಃ ಪಾರ್ಶ್ವೇ ಸಮೇತ್ಯ ವೈ ।**
**ಪಾದಾಂಬುಜಂ ನನಾಮಾಥ ಸಾ ಭಕ್ತ್ಯಾ ಉಭಯೋರ್ಮುದಾ ॥ ೬೫ ॥**

**ಉವಾಚ ವಚನಂ ಸ್ನಿಗ್ಧಂ ಹೃದ್ಯಂ ಹಾರಿ ಚ ಸಾ ತದಾ ।**
**ಕಸ್ಮಾದ್ದೃಷ್ಟಾ ತ್ವಯಾ ಮಾತಃ ಕಥಯಸ್ವಾತ್ರ ಕಾರಣಂ ॥ ೬೬ ॥**

॥ ದೇವ್ಯುವಾಚ ॥

**ವೃಕ್ಷಸ್ಯ ಕೌತುಕಾದ್ಭಾವಾನ್ಮಯಾ ವೈ ಪ್ರತ್ಯಯಃ ಕೃತಃ ।**
**ಸದ್ಯಃ ಪ್ರಾಪ್ತಂ ಫಲಂ ಭದ್ರೇ ಭವತೀರೂಪಸಂಪದಾ ॥ ೬೭ ॥**

**ಅಶೋಕಸುಂದರೀನಾಮ್ನಾ ಲೋಕೇ ಖ್ಯಾತಿಂ ಪ್ರಯಾಸ್ಯಸಿ ।**
**ಸರ್ವಸೌಭಾಗ್ಯಸಂಪನ್ನಾ ಮಮ ಪುತ್ರೀ ನ ಸಂಶಯಃ ॥ ೬೮ ॥**

**ಸೋಮವಂಶೇ ತು ವಿಖ್ಯಾತೋ ಯಥಾ ದೇವಃ ಪುರಂದರಃ ।**
**ನಹುಷೋ ನಾಮ ರಾಜೇಂದ್ರಸ್ತವ ನಾಥೋ ಭವಿಷ್ಯತಿ ॥ ೬೯ ॥**

---

೬೫. ಸೂತನು ಹೇಳಿದನು:—ಆಮೇಲೆ ಆ ಸುಂದರಿಯು ಅವರ ಹತ್ತಿರಕ್ಕೆ ಬಂದು ಭಕ್ತಿಯಿಂದ ಅವರಿಗೆ ನಮಸ್ಕರಿಸಿದಳು.

೬೬. ಎಲೈ ತಾಯಿಯೇ, ನೀನೇತಕ್ಕೆ ನನ್ನನ್ನು ಬರಮಾಡಿದೆ? ಕಾರಣವನ್ನು ಹೇಳೆಂಬುದಾಗಿ ಮೆಲ್ಲಗೆ ಮನೋಹರವಾದ ಧ್ವನಿಯಿಂದ ಕೇಳಿದಳು.

೬೭. ದೇವಿಯು ಹೇಳಿದಳು:—ಈ ಮರದಲ್ಲಿರುವ ಆಶ್ಚರ್ಯವನ್ನು ನೋಡಲು, ಅದರಲ್ಲಿ ನಂಬಿಕೆಯನ್ನು ಪಡೆಯಲು ಹೀಗೆ ಮಾಡಿದೆನು. ನಿನ್ನಲ್ಲಿರುವ ರೂಪಸಂಪತ್ತಿನಿಂದ ಒಡನೆಯೇ ಅದರ ಫಲವು ಸಿಕ್ಕಿತು.

೬೮. ಸರ್ವಸೌಭಾಗ್ಯದಿಂದ ಕೂಡಿದ ನೀನು ನನ್ನ ಮಗಳು. ಸಂಶಯವಿಲ್ಲ. ನೀನು ಅಶೋಕಸುಂದರಿಯೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧಳಾಗು.

೬೯. ಚಂದ್ರವಂಶದಲ್ಲಿ ಇಂದ್ರನಂತೆ ಪ್ರಸಿದ್ಧನಾದ, ರಾಜನಾದ ನಹುಷನೆಂಬುವನು ನಿನಗೆ ಗಂಡನಾಗುವನು.

**ಏವಂ ದತ್ವಾ ವರಂ ತಸ್ಯೈ ಜಗಾಮ ಗಿರಿಜಾ ಗಿರಿಂ ।**
**ಕೈಲಾಸಂ ಶಂಕರೇಣಾಪಿ ಮುದಾ ಸಾ ಪರಯಾನ್ವಿತಾ ॥ ೭೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ದ್ವ್ಯಧಿಕಶತತಮೋಽಧ್ಯಾಯಃ**



೭೦. ಹೀಗೆ ಆಕೆಗೆ ವರವನ್ನು ಕೊಟ್ಟು ಪಾರ್ವತಿಯು ಶಂಕರನೊಡನೆ ಸಂತೋಷದಿಂದ ಕೈಲಾಸಪರ್ವತಕ್ಕೆ ಹೋದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರ್ಯಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಅಶೋಕಸುಂದರೀ ಜಾತಾ ಸರ್ವಯೋಷಿದ್ವರಾ ತದಾ ।
ರೇಮೇ ತು ನಂದನೇ ಪುಣ್ಯೇ ಸರ್ವಕಾಮಗುಣಾನ್ವಿತೇ ॥ ೧ ॥

ಸುರೂಪಾಭಿಸ್ಸುಕನ್ಯಾಭಿರ್ದೇವಾನಾಂ ಚಾರುಹಾಸಿನೀ ।
ಸರ್ವಾನ್ ಭೋಗಾನ್ ಪ್ರಭುಂಜಾನಾ ಗೀತನೃತ್ಯವಿಚಕ್ಷಣಾ ॥ ೨ ॥

ವಿಪ್ರಚಿತ್ತಿಸುತೋ ಹುಂಡೋ ರೌದ್ರಸ್ತೀವ್ರಶ್ಚ ಸರ್ವದಾ ।
ಸ್ವೇಚ್ಛಾಚಾರೋ ಮಹಾಕಾಮೀ ನಂದನಂ ಪ್ರವಿವೇಶ ಹ ॥ ೩ ॥

---

## ನೂರ ಮೂರನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ಹೀಗೆ ಆಗ ಅಶೋಕಸುಂದರಿಯು ಹುಟ್ಟಿದಳು. ಸಮಸ್ತ ಇಷ್ಟಗಳನ್ನು ಕೊಡುವ ಆ ನಂದನವನದಲ್ಲಿ ಆಕೆಯು ಕ್ರೀಡಿಸುತ್ತಿದ್ದಳು.

೨. ರೂಪವತಿಯರೂ, ಯೋಗ್ಯರೂ, ಆದ ದೇವಕನ್ಯೆಯರೊಡನೆ ಆಕೆಯು ನೃತ್ಯಗೀತಗಳನ್ನಾಡುತ್ತ ಸಮಸ್ತ ಭೋಗಗಳನ್ನು ಅನುಭವಿಸಿದಳು.

೩. ವಿಪ್ರಚಿತ್ತಿಯೆಂಬವನ ಮಗನು ಹುಂಡನೆಂಬುವನು. ಆತನು ಕ್ರೂರಿ, ಕೋಪಿ, ಸ್ವೇಚ್ಛಾಚಾರಿ, ಬಹುಕಾಮಿ, ಇಂಥಹವನು ಆ ನಂದನವನಕ್ಕೆ ಒಂದು ಸಾರಿ ಬಂದನು.

ಅಶೋಕಸುಂದರೀಂ ದೃಷ್ಟ್ವಾ ಸರ್ವಾಲಂಕಾರಶೋಭಿತಾಂ ।
ತಸ್ಯಾಸ್ತು ದರ್ಶನಾದ್ದೈತ್ಯೋ ವಿದ್ಧಃ ಕಾಮಸ್ಯ ಮಾರ್ಗಣೈಃ ॥ ೪ ॥

ತಾಮುವಾಚ ಮಹಾತಾಯಃ ಕಾ ತ್ವಂ ಕಸ್ಯಾಸಿ ಸುಂದರಿ ।
ಕಸ್ಮಾತ್ತ್ವಂ ಕಾರಣಾಚ್ಚಾತ್ರ ಹ್ಯಾಗತಾಸಿ ವನೋತ್ತಮಂ ॥ ೫ ॥

॥ ಅಶೋಕಸುಂದರ್ಯುವಾಚ ॥

ಶಿವಸ್ಯಾಪಿ ಸುಪುಣ್ಯಸ್ಯ ಸುತಾಹಂ ಶೃಣು ಸಾಂಪ್ರತಂ ।
ಸ್ವಸಾಹಂ ಕಾರ್ತಿಕೇಯಸ್ಯ ಜನನೀ ಗಿರಿಜಾ ಮಮ ॥ ೬ ॥

ಬಾಲಭಾವೇನ ಸಂಪ್ರಾಪ್ತಾ ಲೀಲಯಾ ನಂದನಂ ವನಂ ।
ಭವಾನ್ ಕೋ ಹಿ ಕಿಮರ್ಥಂ ತು ಮಾಮೇವಂ ಪರಿಪೃಚ್ಛಸಿ ॥ ೭ ॥

॥ ಹುಂಡ ಉವಾಚ ॥

ವಿಪ್ರಚಿತ್ತೇಸ್ಸುತಶ್ಚಾಹಂ ಗುಣಲಕ್ಷಣಸಂಯುತಃ ।
ಹುಂಡೇತಿ ನಾಮ್ನಾ ವಿಖ್ಯಾತೋ ಬಲವೀರ್ಯಸಮನ್ವಿತಃ ॥ ೮ ॥

---

೪. ಸರ್ವಾಲಂಕಾರಶೋಭಿತಳಾದ ಆ ಅಶೋಕಸುಂದರಿಯನ್ನು ನೋಡಿ, ಒಡನೆಯೇ ಕಾಮಪೀಡೆಯಿಂದ ಬಾಧಿತನಾದನು.

೫. ಆಗ ಆಕೆಯನ್ನು ಕುರಿತು ನೀನಾರು? ನೀನಾರ ಮಗಳು? ಇಲ್ಲಿಗೇಕೆ ಬಂದಿದ್ದೀಯೆ? ಎಂದು ಕೇಳಿದನು.

೬. ಅಶೋಕಸುಂದರಿಯು ಹೇಳಿದಳು :—ನಾನು ಮಹಾನುಭಾವನಾದ ಶಿವನ ಮಗಳು. ಷಣ್ಮುಖನಿಗೆ ತಂಗಿಯು. ಪಾರ್ವತೀದೇವಿಯೇ ನನ್ನ ತಾಯಿಯು.

೭. ಚಿಕ್ಕಂದಿನ ಚಾಪಲ್ಯದಿಂದ ಆಟಕ್ಕೋಸ್ಕರ ಈ ನಂದನವನಕ್ಕೆ ಬಂದಿದ್ದೇನೆ. ನೀನಾರು? ನೀನೇತಕ್ಕೋಸ್ಕರ ನನ್ನನ್ನು ಹೀಗೆ ಕೇಳುತ್ತಿದ್ದೀಯೆ?

೮. ಹುಂಡನು ಹೇಳಿದನು :—ನಾನು ವಿಪ್ರಚಿತ್ತಿಯ ಮಗನು. ಸರ್ವಲಕ್ಷಣಗಳಿಂದ ಕೂಡಿದ್ದೇನೆ. ಬಲವೂ, ದರ್ಪವೂ ನನ್ನಲ್ಲಿವೆ. ನನ್ನ ಹೆಸರು ಹುಂಡನೆಂದು. ರಾಕ್ಷಸರಲ್ಲಿ ನಾನೇ ಶ್ರೇಷ್ಠನು. ನನ್ನ ಸಮ ಮತ್ತೊಬ್ಬನೂ ಇಲ್ಲ.

ದೈತ್ಯಾನಾಮಪ್ಯಹಂ ಶ್ರೇಷ್ಠೋ ಮತ್ಸಮೋ ನಾಸ್ತಿ ರಾಕ್ಷಸಃ ।
ದೇವೇಷು ಮರ್ತ್ಯಲೋಕೇಷು ತಪಸಾ ಯಶಸಾ ಕುಲೈಃ ।
ಅನ್ಯೇಷು ನಾಗಲೋಕೇಷು ಧನಭಾಗ್ಯೈರ್ವರಾನನೇ ॥ ೯ ॥

ದರ್ಶನಾತ್ತೇ ವಿಶಾಲಾಕ್ಷಿ ಇತಃ ಕಂದರ್ಪಮಾರ್ಗಣೈಃ ।
ಶರಣಂ ತೇಽಪ್ಯಹಂ ಪ್ರಾಪ್ತಃ ಪ್ರಸಾದಸುಮುಖೀ ಭವ ।
ಭವಸ್ವ ವಲ್ಲಭಾ ಭಾರ್ಯಾ ಮಮ ಪ್ರಾಣಸಮಾ ಪ್ರಿಯಾ ॥ ೧೦ ॥

॥ ಅಶೋಕಸುಂದರ್ಯುವಾಚ ॥

ಶ್ರೂಯತಾಮಭಿಧಾಸ್ಯಾಮಿ ಸರ್ವಸಂಬಂಧಕಾರಣಂ ।
ಭವಿತವ್ಯಾ ಸುಜಾತಸ್ಯ ಲೋಕೇ ಸ್ತ್ರೀಪುರುಷಸ್ಯ ಹಿ ।
ಭವಿತವ್ಯಸ್ತಥಾ ಭರ್ತಾ ಸ್ತ್ರೀಯಾ ಯಸ್ಸದೃಶೋ ಗುಣೈಃ ॥ ೧೧ ॥

ಸಂಸಾರೇ ಲೋಕಮಾರ್ಗೋಽಯಂ ಶೃಣು ಹುಂಡ ಯಥಾವಿಧಿ ।
ಅಸ್ತ್ಯೇವಂ ಕಾರಣಂ ಚಾತ್ರ ಯಥಾ ತೇ ನ ಭವಾಮ್ಯಹಂ ॥ ೧೨ ॥

---

೯. ತಪಸ್ಸು, ಯಶಸ್ಸು, ಕುಲ, ಧನ, ಭಾಗ್ಯಗಳಲ್ಲಿ, ದೇವಮನುಷ್ಯ ನಾಗರಲ್ಲಿ ನನ್ನಂತೆ ಮತ್ತಾರೂ ಶ್ರೇಷ್ಠರಿಲ್ಲ.

೧೦. ಎಲೈ ವಿಶಾಲಾಕ್ಷಿಯೇ, ನಿನ್ನನ್ನು ನೋಡಿದಾಗಿನಿಂದ ಕಂದರ್ಪನ ಬಾಣ ಗಳಿಂದ ಹೊಡೆಯಲ್ಪಟ್ಟವನಾಗಿದ್ದೇನೆ. ನಿನ್ನನ್ನು ಶರಣುಹೊಂದಿದ್ದೇನೆ. ಅನು ಗ್ರಹಿಸು. ನೀನು ನನಗೆ ಹೆಂಡತಿಯಾಗು. ಪ್ರಾಣಸಮಳಾದ ಪ್ರಿಯಳಾಗು.

೧೧. ಅಶೋಕಸುಂದರಿಯು ಹೇಳಿದಳು ;—ಅಯ್ಯಾ, ಸಂಬಂಧಕ್ಕೆ ಕಾರಣ ಗಳನ್ನು ಹೇಳುತ್ತೇನೆ ಕೇಳು. ಲೋಕದಲ್ಲಿ ಹುಟ್ಟಿದ ಗಂಡಸು ಮತ್ತು ಹೆಂಗಸರು ಮದುವೆಯಾಗುವುದು ಸಹಜವಾದರೂ ಅವರವರಿಗೆ ಸರಿಯಾದ ಗುಣವುಳ್ಳವರನ್ನು ಅವರವರು ಮದುವೆಯಾಗಬೇಕು.

೧೨. ಇದು ಸಂಸಾರದ ಮಾರ್ಗವು. ಮತ್ತು ವಿಧಿಯುಕ್ತವೂ ಆದುದು. ಆದರೆ ನಿನಗೆ ನಾನು ಹೆಂಡತಿಯಾಗದಿರಲು ಕಾರಣಗಳಿವೆ. ಹೇಳುತ್ತೇನೆ. ಕೇಳು.

ಸುಭಾಷ್ಯಾ ದೈತ್ಯರಾಜೇಂದ್ರ ಶೃಣುಷ್ವ ಯತಮಾನಸಃ ।
ತರುರಾಜಾದಹಂ ಜಾತಾ ಯದಾ ಕಾಲೇ ಮಹಾಮತೇ ॥ ೧೩ ॥

ಶಂಭೋರ್ಭಾವಂ ಸುಸಂಗೃಹ್ಯ ಪಾರ್ವತ್ಯಾ ಕಲ್ಪಿತಾಸ್ಮ್ಯಹಂ ।
ದೇವಸ್ಯಾನುಮತೋ ದೇವ್ಯಾ ಸೃಷ್ಟೋ ಭರ್ತಾ ಮಮೈವ ಹಿ ॥ ೧೪ ॥

ಸೋಮವಂಶೇ ಮಹಾಪ್ರಾಜ್ಞಃ ಸ ಧರ್ಮಾತ್ಮಾ ಭವಿಷ್ಯತಿ ।
ಜಿಷ್ಣುರ್ಜಿಷ್ಣುಸಮೋ ವೀರ್ಯೇ ತೇಜಸಾ ಪಾವಕೋಪಮಃ ॥ ೧೫ ॥

ಸರ್ವಜ್ಞಸ್ಸತ್ಯಸಂಧಶ್ಚ ತ್ಯಾಗೇ ವೈಶ್ರವಣೋಪಮಃ ।
ಯಜ್ವಾ ದಾನಪತಿಸ್ಸೋಽಪಿ ರೂಪೇಣ ಮನ್ಮಥೋಪಮಃ ॥ ೧೬ ॥

ನಹುಷೋ ನಾಮ ಧರ್ಮಾತ್ಮಾ ಗುಣಶೀಲಮಹಾನಿಧಿಃ ।
ದೇವ್ಯಾ ದೇವೇನ ಮೇ ದತ್ತಃ ಖ್ಯಾತೋ ಭರ್ತಾ ಭವಿಷ್ಯತಿ ॥ ೧೭ ॥

ಯಸ್ಮಾತ್ಸರ್ವಗುಣೋಪೇತಂ ಪುತ್ರಂ ಪ್ರಾಪ್ಸ್ಯಾಮಿ ಸುಂದರಂ ।
ಇಂದ್ರೋಪೇಂದ್ರಸಮಂ ಲೋಕೇ ಯಯಾತಿಂ ಜನವಲ್ಲಭಂ ॥ ೧೮ ॥

---

೧೩-೧೪. ದೈತ್ಯರಾಜನೇ ಕೇಳು. ನಾನು ವೃಕ್ಷರಾಜನಿಂದ ಹುಟ್ಟಿದೆ. ಶಂಭುವಿನ ಅಭಿಪ್ರಾಯಗಳನ್ನು ಸಂಗ್ರಹಮಾಡಿ ಪಾರ್ವತಿಯು ನನ್ನನ್ನು ಸೃಷ್ಟಿ ಮಾಡಿದಳು. ನನಗೆ ಶಂಕರನ ಅನುಮತಿಯಿಂದ ಪಾರ್ವತಿಯು ಒಬ್ಬ ಗಂಡನನ್ನು ಗೊತ್ತುಮಾಡಿದ್ದಾಳೆ.

೧೫-೧೭. ಸೋಮವಂಶದಲ್ಲಿ ಬುದ್ಧಿವಂತನೂ, ಧರ್ಮಾತ್ಮನೂ, ಇಂದ್ರನಿಗೆ ಸಮನೂ, ಅಗ್ನಿಯಂತೆ, ತೇಜಸ್ಸುಳ್ಳವನೂ, ಸರ್ವಜ್ಞನೂ, ಸತ್ಯವಂತನೂ, ದಾನಿಯೂ, ಯಾಗಮಾಡತಕ್ಕವನೂ, ಸುಂದರನೂ, ಗುಣಶೀಲಸಂಪನ್ನನೂ, ಆದ ನಹುಷ ನೆಂಬುವನು ಇದ್ದಾನೆ. ಪಾರ್ವತೀಪರಮೇಶ್ವರರು ಅವನನ್ನು ನನಗೆ ಗಂಡನನ್ನಾಗಿ ಕೊಟ್ಟು ಅವನು ಪ್ರಸಿದ್ಧನಾಗುತ್ತಾನೆಂದು ಹೇಳಿದ್ದಾರೆ.

೧೮. ಅವನಿಂದ ನಾನು ಸುಂದರನಾದ, ಇಂದ್ರ ವಿಷ್ಣುಗಳಿಗೆ ಸಮಾನನಾದ, ಜನಪ್ರಿಯನಾದ ಯಯಾತಿ ಎಂಬ ಮಗನನ್ನು ಹೊಂದಬೇಕು.

ಲಪ್ಸ್ಯಾಮ್ಯಹಂ ಹಿತಂ ವೀರಂ ಯಸ್ಮಾಚ್ಛಂಭೋಃ ಪ್ರಸಾದತಃ ।
ಅಹಂ ಪತಿವ್ರತಾ ವೀರ ಪರಭಾರ್ಯಾ ವಿಶೇಷತಃ ॥ ೧೯ ॥

ಅತಸ್ತ್ವಂ ಸರ್ವದಾ ಹುಂಡ ತ್ಯಜ ಭ್ರಾಂತಿಮಿತೋ ವ್ರಜ ।
ಪ್ರಹಸ್ಯೈವಂ ವಚೋ ಬ್ರೂತೇ ಸೋಽಶೋಕಸುಂದರೀಂ ಪ್ರತಿ ॥ ೨೦ ॥

॥ ಹುಂಡ ಉವಾಚ ॥

ನೈವ ಯುಕ್ತಂ ತ್ವಯಾ ಪ್ರೋಕ್ತಂ ದೇವ್ಯಾ ದೇವೇನ ಚೈವ ಹಿ ।
ನಹುಷೋ ನಾಮ ಧರ್ಮಾತ್ಮಾ ಸೋಮವಂಶೇ ಭವಿಷ್ಯತಿ ॥ ೨೧ ॥

ಭವತೀ ವಯಸಾ ಜ್ಯೇಷ್ಠಾ ಸ ಕನಿಷ್ಠೋ ನ ಯುಜ್ಯತೇ ।
ಕನಿಷ್ಠಾ ಸ್ತ್ರೀ ಪ್ರಶಸ್ತಾ ಸ್ಯಾತ್ಪುರುಷೋ ನ ಪ್ರಶಸ್ಯತೇ ॥ ೨೨ ॥

ಕದಾ ಸ ಪುರುಷೋ ಭದ್ರೇ ತವ ಭರ್ತಾ ಭವಿಷ್ಯತಿ ।
ತಾರುಣ್ಯಂ ಯೌವನಂ ಯಾವನ್ನಾಶಮೇವ ಪ್ರಯಾಸ್ಯತಿ ॥ ೨೩ ॥

---

೧೯. ನಾನು ಶಂಭುವಿನ ಅನುಗ್ರಹದಿಂದ ಹಿತನಾದ, ವೀರನಾದ ಮಗನನ್ನು ಪಡೆಯಬೇಕು. ನಾನು ಪತಿವ್ರತೆ, ಅಲ್ಲದೆ ಪರನ ಹೆಂಡತಿಯೂ ಆಗಿದ್ದೇನೆ.

೨೦. ಎಲೈ ಹುಂಡನೇ, ಆದ್ದರಿಂದ ನೀನು ನನ್ನ ಮೇಲಿನ ಭ್ರಾಂತಿಯನ್ನು ಬಿಟ್ಟುಬಿಡು. ಎನ್ನಲು, ಹುಂಡನು ಅಶೋಕಸುಂದರಿಯನ್ನು ಕುರಿತು ಇಂತೆಂದನು.

೨೧-೨೨. ಹುಂಡನು ಹೇಳಿದನು:—ಸುಂದರಿ! ನೀನು ಹೇಳಿದುದು ಸರಿಯಲ್ಲ. ಪಾರ್ವತೀಪರಮೇಶ್ವರರು ಹೇಳಿದ್ದು ಸರಿಯಲ್ಲ. ನಹುಷನು ಇನ್ನುಮೇಲೆ ಚಂದ್ರವಂಶದಲ್ಲಿ ಹುಟ್ಟುತ್ತಾನೆ. ವಯಸ್ಸಿನಿಂದ ನೀನು ದೊಡ್ಡವಳು. ಅವನು ಚಿಕ್ಕವನು. ಮದುವೆಯಲ್ಲಿ ಗಂಡನಿಗೆ ತನಗಿಂತಲೂ ವಯಸ್ಸಿನಲ್ಲಿ ಚಿಕ್ಕವಳೇ ಪ್ರಶಸ್ತಳು. ವಯಸ್ಸಿನಿಂದ ಚಿಕ್ಕವನಾದ ಗಂಡನು ಪ್ರಶಸ್ತನಲ್ಲ.

೨೩. ಅವನು ಹುಟ್ಟಿ ನಿನಗೆ ಗಂಡನಾಗುವ ವೇಳೆಗೆ ನಿನ್ನ ತಾರುಣ್ಯವೂ, ಯೌವನವೂ ನಾಶವಾಗಿಯೇ ಹೋಗುತ್ತವೆ.

ಯೌವನಸ್ಯ ಬಲೇನಾಪಿ ರೂಪವತ್ಯಸ್ಸದಾ ಸ್ತ್ರಿಯಃ ।
ಪುರುಷಾಣಾಂ ವಲ್ಲಭತ್ವಂ ಪ್ರಯಾತಿ ವರವರ್ಣಿನಿ ॥ ೨೪ ॥

ತಾರುಣ್ಯಂ ಹಿ ಮಹಾಮೂಲ್ಯಂ ಯುವತೀನಾಂ ವರಾನನೇ ।
ತಸ್ಯಾಧಾರೇಣ ಭುಂಜಂತಿ ಭೋಗಾನ್ಕಾಮಾ‌ರ್ ಮನೋನುಗಾರ್ ॥ ೨೫ ॥

ಕದಾ ಸೋಽಭ್ಯೇಷ್ಯತೇ ಭದ್ರ ಆಯುಪುತ್ರಃ ಶೃಣುಷ್ವ ಮೇ ।
ಯೌವನಂ ವರ್ತತೇಽದ್ಯೈವ ವೃಥಾ ಚೈವ ಭವಿಷ್ಯತಿ ॥ ೨೬ ॥

ಗರ್ಭತ್ವಂ ಚ ಶಿಶುತ್ವಂ ಚ ಕೌಮಾರಂ ಚ ನಿಶಾಮಯ ।
ಕದಾ ಸ ಯೌವನೋಪೇತಸ್ತವ ಯೋಗ್ಯೋ ಭವಿಷ್ಯತಿ ॥ ೨೭ ॥

ಯೌವನಸ್ಯ ಪ್ರಲೋಭೇನ ಪಿಬಸ್ವ ಮಧುಮಾಧವೀಂ ।
ಮಯಾ ಸಹ ವಿಶಾಲಾಕ್ಷಿ ರಮಸ್ವ ತ್ವಂ ಸುಖೇನ ವೈ ॥ ೨೮ ॥

---

೨೪. ಯೌವನದ ಬಲದಿಂದಲೇ ಹೆಂಗಸರು ರೂಪವತಿಯಾಗಿರುವರು. ಆ ಸ್ತ್ರೀಯರಿಗೆ ಯೌವನವು ಹೋದಮೇಲೆ ಪುರುಷರಿಗೆ ಅಂತಹ ಸ್ತ್ರೀಯರು ಪ್ರಿಯರಾಗುವುದಿಲ್ಲ. ಆ ಯೌವನವಿದ್ದರೇನೇ ಅವರು ಆ ಗಂಡಸರಿಗೆ ಪ್ರೀತಿಪಾತ್ರರಾಗುವುದು.

೨೫. ಆದ್ದರಿಂದ ತಾರುಣ್ಯವು ಹೆಂಗಸರಿಗೆ ಬಹು ಬೆಲೆಯುಳ್ಳದ್ದು. ಅದರ ಆಧಾರದಿಂದಲೇ ಅವರು ಎಲ್ಲಾ ಭೋಗಗಳನ್ನೂ ಅನುಭವಿಸುವುದು.

೨೬. ಆ ಆಯುಪುತ್ರನಾದ ನಹುಷನು ಯಾವಾಗ ಬರುವನೋ? ನಿನ್ನ ಯೌವನವು ಈಗಲೇ ಪ್ರಾರಂಭವಾಗಿದೆ. ಅಷ್ಟುವೇಳೆಗೆ ಅದು ನಾಶವಾಗುತ್ತದೆ.

೨೭. ಆ ನಹುಷನು ಹುಟ್ಟಿ ಬಾಲ್ಯ, ಕೌಮಾರಗಳನ್ನು ಕಳೆದು ಯೌವನವಂತನಾಗಿ ನಿನಗೆ ಯೋಗ್ಯನಾಗುವುದು ಯಾವಾಗ?

೨೮. ಯೌವನದ ಸಾರ್ಥಕತೆಯಿಂದ ನನ್ನೊಡನೆ ಮದ್ಯಪಾನಾದಿಗಳನ್ನು ಮಾಡುತ್ತ ಸುಖದಿಂದ ರಮಿಸು. ಎನ್ನಲು

**ಹುಂಡಸ್ಯ ವಚನಂ ಶ್ರುತ್ವಾ ಶಿವಸ್ಯ ತನಯಾ ಪುನಃ ।**
**ಉವಾಚ ದಾನವೇಂದ್ರಂ ಸಾ ಸಾಧೋ ತನ್ನ ಭವಿಷ್ಯತಿ ॥ ೨೯ ॥**

**ಅಷ್ಟಾವಿಂಶತಿಕೇ ಪ್ರಾಪ್ತೇ ದ್ವಾಪರಾಖ್ಯೇ ಯುಗೇ ತದಾ ।**
**ಶೇಷಾವತಾರೋ ಧರ್ಮಾತ್ಮಾ ವಸುದೇವಸುತೋ ಬಲಃ ॥ ೩೦ ॥**

**ರೈವತಸ್ಯ ಸುತಾಂ ಭಾರ್ಯಾಂ ದಿವ್ಯಾಂ ಚೈವ ಕರಿಷ್ಯತಿ ।**
**ಸಾಪಿ ಜಾತಾ ಮಹಾಭಾಗಾ ಕೃತಾಖ್ಯೇ ಹಿ ಯುಗೋತ್ತಮೇ ॥ ೩೧ ॥**

**ಯುಗತ್ರಯಪ್ರಮಾಣೇನ ಸಾ ಹಿ ಜ್ಯೇಷ್ಠಾ ಬಲಾದಪಿ ।**
**ಬಲಸ್ಯಾಪಿ ಪ್ರಿಯಾ ಜಾತಾ ರೇವತೀ ಪ್ರಾಣಸಂಮಿತಾ ॥ ೩೨ ॥**

**ಭವಿಷ್ಯದ್ದ್ವಾಪರೇ ಪ್ರಾಪ್ತ ಇಹ ಸಾ ತು ಭವಿಷ್ಯತಿ ।**
**ಮಾಯಾವತೀ ಪುರಾ ಜಾತಾ ಗಂಧರ್ವತನಯಾ ವರಾ ॥ ೩೩ ॥**

**ಅಪಹೃತ್ಯ ನಿಹತ್ಯೈವ ಶಂಬರೋ ದಾನವೋತ್ತಮಃ ।**
**ತಸ್ಯಾ ಭರ್ತಾ ಸಮಾಖ್ಯಾತೋ ಮಾಧವಸ್ಯ ಸುತೋ ಬಲೀ ॥ ೩೪ ॥**

---

೨೯. ಶಿವನ ಪುತ್ರಿಯು ಹುಂಡನ ಈ ಮಾತನ್ನು ಕೇಳಿ, ಎಲೈ ಸಾಧುವೇ ಅದು ಆಗಲಾರದು ಎಂದಳು.

೩೦-೩೧. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಶೇಷನು ಅವತಾರಮಾಡಿ ವಸುದೇವನಿಗೆ ಬಲನೆಂಬ ಮಗನಾಗುವನು. ಅವನು ರೈವತನ ಮಗಳನ್ನು ಮದುವೆ ಯಾಗುವನು. ಅವಳು ಈ ಕೃತಯುಗದಲ್ಲೇ ಹುಟ್ಟಿರುವಳಲ್ಲವೇ.

೩೨. ಆಕೆಯು ಮೂರು ಯುಗಗಳಷ್ಟು ವಯಸ್ಸಿನಿಂದ ಬಲನಿಗಿಂತ ದೊಡ್ಡ ವಳಲ್ಲವೇ ? ಆದರೂ ಆಕೆಯು ಆತನಿಗೆ ಪ್ರಾಣಪ್ರಿಯಳಾದ ಹೆಂಡತಿಯಾಗಿ ಮುಂದಿನ ದ್ವಾಪರಯುಗದಲ್ಲಿ ಆಗುತ್ತಾಳಲ್ಲವೆ ?

೩೩-೩೪. ಹಿಂದೆ ಒಬ್ಬಳು ಮಾಯಾವತಿ ಎಂಬವಳಿದ್ದಳು. ಆಕೆಯು ಗಂಧರ್ವನ ಮಗಳು. ಶಂಬರಾಸುರನು ಆಕೆಯನ್ನು ಕದ್ದುಕೊಂಡು ಹೋಗಿರಲು, ಕೃಷ್ಣನ ಮಗನಾದ ಪ್ರದ್ಯುಮ್ನನು ಆತನನ್ನು ಕೊಂದು ಆಕೆಯನ್ನು ಮದುವೆ ಮಾಡಿದನು.

ಪ್ರದ್ಯುಮ್ನೋ ನಾಮ ವಿರೇಶೋ ಯಾದವೇಂದ್ರಸ್ಯ ನಂದನಃ ।
ತಸ್ಮಿನ್ ಯುಗೇ ಭವಿಷ್ಯೇ ಚ ಭಾವ್ಯಂ ಪೃಷ್ಟಂ ಪುರಾತನೈಃ ॥ ೩೫ ॥

ವ್ಯಾಸಾದಿಭಿರ್ಮಹಾಭಾಗೈರ್ಜ್ಞಾನವದ್ಭಿರ್ಮಹಾತ್ಮಭಿಃ ।
ಏವಂ ಹಿ ದೃಶ್ಯತೇ ದೈತ್ಯ ವಾಕ್ಯಂ ದೇವ್ಯಾ ತದೋದಿತಂ ॥ ೩೬ ॥

ಮಾಂ ಪ್ರತ್ಯುಕ್ತಂ ಯಥಾ ಧಾತ್ರಾ ಪುತ್ರ್ಯಾ ಹಿಮವತಸ್ತದಾ ।
ತ್ವಂ ತು ಲೋಭೇನ ಕಾಮೇನ ಲುಬ್ಧೋ ವದಸಿ ದುಷ್ಕೃತಂ ॥ ೩೭ ॥

ಕಿಲ್ಬಿಷೇಣ ಸಮಾಯುಕ್ತಂ ವೇದಶಾಸ್ತ್ರವಿವರ್ಜಿತಂ ।
ಯದ್ಯಸ್ಯ ದೃಷ್ಟಮೇವಾಪ್ತಿ ಶುಭಂ ವಾಪ್ಯಶುಭಂ ಯಥಾ ॥ ೩೮ ॥

ಪೂರ್ವಕರ್ಮಾನುಸಾರೇಣ ತದ್ಭವಿಷ್ಯತಿ ತಸ್ಯ ಚ ।
ದೇವಾನಾಂ ಬ್ರಾಹ್ಮಣಾನಾಂ ಚ ವದನೇ ಯತ್ಸುಭಾಷಿತಂ ॥ ೩೯ ॥

ನಿಸ್ಸರೇದ್ಯದಿ ಸತ್ಯಂ ತದನ್ಯಥಾ ನೈವ ಜಾಯತೇ ।
ಮದ್ಭಾಗ್ಯಾದೇವಮಾಜ್ಞಾತಂ ನಹುಷಸ್ಯಾಪಿ ತಸ್ಯ ಚ ।
ಸಮಾಯೋಗಂ ವಿಚಾರ್ಯೈವ ದೇವ್ಯಾ ಪ್ರೋಕ್ತಂ ಶಿವೇನ ಚ ॥ ೪೦ ॥

---

೩೫-೩೬. ಆ ಪ್ರದ್ಯುಮ್ನನೆಂಬುವನು ಯಾದವನ ವಂಶದಲ್ಲಿ ಹುಟ್ಟಿದವನು. ಆ ಯುಗದಲ್ಲಿ ಮುಂದಿನ ಯುಗಗಳ ವಿಷಯವನ್ನು ವ್ಯಾಸಾದಿಗಳು ಈರೀತಿ ಹೇಳಿದ್ದಾರೆ. ಆದ್ದರಿಂದಲೇ ದೇವಿಯು ಈರೀತಿ ಹೇಳಿರುವುದು. ಅದು ತಪ್ಪುವುದಿಲ್ಲ.

೩೭. ನನ್ನನ್ನು ಕಾಪಾಡಿದ ಪಾರ್ವತಿಯು ನನಗೆ ಹೀಗೆ ಹೇಳಿದ್ದಾಳೆ. ನೀನು ಕಾಮದಿಂದಲೂ, ಲೋಭದಿಂದಲೂ, ಸಂಕುಚಿತ ಮನಸ್ಸುಳ್ಳವನಾಗಿ ಕೆಟ್ಟಮಾತನ್ನಾಡುತ್ತಿದ್ದೀಯೆ.

೩೮-೩೯. ಪಾಪದಿಂದ ಕೂಡಿರುವ, ವೇದಶಾಸ್ತ್ರವಿರುದ್ಧವಾದ ಮಾತನ್ನಾಡುತ್ತೀಯೆ. ಯಾವಯಾವನು ಮಾಡಿದ ಒಳ್ಳೆಯದು ಕೆಟ್ಟದ್ದು ಯಾವಯಾವವು ಇವೆಯೋ ಅವವು ಅವವರಿಗೆ ಪೂರ್ವಕರ್ಮಕ್ಕೆ ಅನುಸಾರವಾಗಿ ನಡೆಯುತ್ತವೆ. ದೇವತೆಗಳು ಬ್ರಾಹ್ಮಣರು ಹೇಳಿದುದು ಪೂರ್ವಕರ್ಮಕ್ಕನುಸಾರವಾಗಿ ನಡೆಯುತ್ತದೆ.

೪೦. ಆ ದೇವಬ್ರಾಹ್ಮಣರುಗಳ ಬಾಯಿಂದ ಹೊರಟುದು ನಿಶ್ಚಯವಾಗಿಯೇ ಆಗುತ್ತದೆ. ಬೇರೆ ಆಗುವುದೇ ಇಲ್ಲ. ಪಾರ್ವತಿಪರಮೇಶ್ವರರು ನಮ್ಮ ಸಮಾ

ಏವಂ ಜ್ಞಾತ್ವಾ ಶಮಂ ಗಚ್ಛ ತ್ಯಜ ಭ್ರಾನ್ತಿಂ ಮನಸ್ಥಿತಾಂ ।
ನೈವ ಶಕ್ತೋ ಭವಾನ್ದೈತ್ಯ ಮನೋ ಮೇ ಚಾಲಿತುಂ ಧ್ರುವಂ ॥ ೪೧ ॥

ಪತಿವ್ರತಾದೃಢಂ ಚಿತ್ತಂ ಕಃ ಪ್ರಚಾಲಯಿತುಂ ವಿಭುಃ ।
ಮಹಾಶಾಪೇನ ಯೋಕ್ಷ್ಯಾಮಿ ಇತೋ ಗಚ್ಛ ಮಹಾಸುರ ॥ ೪೨ ॥

ಏವಮಾಕರ್ಣ್ಯ ತದ್ವಾಕ್ಯಂ ಹುಂಡೋ ವೈ ದಾನವೋ ಬಲೀ ।
ಮನಸಾ ಚಿಂತಯಾಮಾಸ ಕಥಂ ಭಾರ್ಯಾ ಭವೇದಿಯಂ ॥ ೪೩ ॥

ವಿಚಿಂತ್ಯ ಹುಂಡೋ ಮಾಯಾವೀ ಅನ್ತರ್ಧಾನಂ ಸಮಾಗತಃ ।
ಮಾಯಯಾ ಕನ್ಯಕಾರೂಪೋ ಬಭೂವ ಮಮ ನಂದನ ॥ ೪೪ ॥

ಸಾ ಕನ್ಯಾಪಿ ವರಾರೋಹಾ ಮಾಯಾರೂಪಾಗಮತ್ತತಃ ।
ಹಾಸ್ಯಲೀಲಾಸಮಾಯುಕ್ತಾ ಯತ್ರಾಸ್ತೇ ಭವನಂದಿನೀ ॥ ೪೫ ॥

---

ಯೋಗವನ್ನು ತಿಳಿದೇ ನನ್ನ ಭಾಗ್ಯದಿಂದ ನಹುಷನಿಗೂ ನನಗೂ ಹೀಗೆ ಆಗಲೆಂದು ಹೇಳಿದ್ದಾರೆ.

೪೧. ಇದನ್ನು ತಿಳಿದು ಶಾಂತಿಯನ್ನು ಹೊಂದು. ಮನಸ್ಸಿನ ಭ್ರಾಂತಿಯನ್ನು ಬಿಟ್ಟುಬಿಡು. ಎಲೈ ದೈತ್ಯನೇ, ನನ್ನ ಮನಸ್ಸನ್ನು ಚಲಿಸುವಂತೆ ಮಾಡುವುದಕ್ಕೆ ನಿನಗೆ ಸಾಧ್ಯವಿಲ್ಲ.

೪೨. ಪತಿವ್ರತೆಯ ದೃಢವಾದ ಮನಸ್ಸನ್ನು ಯಾರು ತಾನೇ ಬದಲಾಯಿಸಬಲ್ಲರು? ಬಲವಾದ ಶಾಪವನ್ನು ಕೊಟ್ಟೇನು. ಇಲ್ಲಿಂದ ಮೊದಲು ಹೊರಡು.

೪೩. ಈ ಮಾತನ್ನು ಕೇಳಿ ಬಲಿಷ್ಠನಾದ ಹುಂಡನು, ಇವಳು ಹೇಗೆ ನನಗೆ ಹೆಂಡತಿಯಾಗುವಳೋ ಹಾಗೆ ಮಾಡಬೇಕೆಂದು ಯೋಚಿಸಿದನು.

೪೪. ಹುಂಡನು ಹೀಗೆ ಯೋಚಿಸುತ್ತಾ ಅದೃಶ್ಯನಾದನು. ಅನಂತರ ಮಾಯೆಯಿಂದ ಕನ್ಯೆಯ ರೂಪವನ್ನು ಹೊಂದಿದನು.

೪೫. ಆ ಮಾಯಾಕನ್ಯೆಯು ಹಾಸ್ಯ, ಆಟ ಮೊದಲಾದುವನ್ನಾಡುತ್ತಾ ಈ ಶಿವನ ಮಗಳಿರುವಲ್ಲಿಗೆ ಬಂದಳು,

ಉವಾಚ ವಾಕ್ಯಂ ಸ್ನಿಗ್ಧೇವ ಅಶೋಕಸುಂದರೀಂ ಪ್ರತಿ ।
ಕಾಸಿ ಕಸ್ಯಾಸಿ ಸುಭಗೇ ತಿಷ್ಠಸಿ ತ್ವಂ ತಪೋವನೇ ॥ ೪೬ ॥

ಕಿಮರ್ಥಂ ಕ್ರಿಯತೇ ಬಾಲೇ ಕಾಯಶೋಷಣಕಂ ತಪಃ ।
ತನ್ಮಮಾಚಕ್ಷ್ವ ಸುಭಗೇ ಕಿನ್ನಿಮಿತ್ತಂ ಸುದುಷ್ಕರಂ ॥ ೪೭ ॥

ತನ್ನಿಶಮ್ಯ ಶುಭಂ ವಾಕ್ಯಂ ದಾನವೇನಾಪಿ ಭಾಷಿತಂ ।
ಮಾಯಾರೂಪೇಣ ಚ್ಛನ್ನೇನ ಸಾಭಿಲಾಷೇಣ ಸತ್ವರಂ ॥ ೪೮ ॥

ಆತ್ಮಸೃಷ್ಟಿಸುವೃತ್ತಾಂತಂ ಪ್ರವೃತ್ತಂ ತು ಯಥಾ ಪುರಾ ।
ತಪಸಃ ಕಾರಣಂ ಸರ್ವಂ ಸಮಾಚಷ್ಟೇ ಸುದುಃಖಿತಾ ॥ ೪೯ ॥

ಉಪಪ್ಲವಂ ತು ತಸ್ಯಾಪಿ ದಾನವಸ್ಯ ದುರಾತ್ಮನಃ ।
ಮಾಯಾರೂಪಂ ನ ಜಾನಾತಿ ಸೌಹೃದಾತ್ಕಥಿತಂ ತಯಾ ॥ ೫೦ ॥

---

೪೬. ಆ ಮಾಯಾಕನ್ಯೆಯು ಅಶೋಕಸುಂದರಿಯನ್ನು ಕುರಿತು ಸ್ನೇಹಿತೆಯಂತೆ, ಅಮ್ಮ ನೀರಾರು? ಯಾರ ಮಗಳು? ಏತಕ್ಕೆ ಕಾಡಿನಲ್ಲಿದ್ದೀಯೆ? ಎಂದು ಕೇಳಿದಳು.

೪೭. ದೇಹವನ್ನು ಶೋಷಿಸುವಂತಹ ತಪಸ್ಸನ್ನೇಕೆ ಮಾಡುತ್ತಿದ್ದೀಯೆ? ಈ ಕಷ್ಟಕೆಲಸವೇತಕ್ಕೆ ಎಂಬುದನ್ನು ನನಗೆ ಹೇಳಮ್ಮ ಎಂದಳು.

೪೮. ಆ ಮಾಯಾವಿಯಾದ ರಾಕ್ಷಸನು ವಿಶ್ವಾಸದಿಂದ ಆಡಿದ ಮಾತನ್ನು ಕೇಳಿ

೪೯. ಆಗ ಆಕೆಯು ತನ್ನ ಸೃಷ್ಟಿಯಕ್ರಮ, ಅದರ ಹಿಂದಿನ ಕಥೆ, ತಪಸ್ಸಿನ ಕಾರಣ, ಎಲ್ಲವನ್ನೂ ದುಃಖಪಡುತ್ತಾ ಹೇಳಿದಳು.

೫೦. ಆ ರಾಕ್ಷಸನ ಮಾಯಾರೂಪವನ್ನು ತಿಳಿಯದೆ, ಅಪಸು ಮಾಡಿದ ತೊಂದರೆಯನ್ನೂ ಕೂಡ ಸ್ವಲ್ಪವನ್ನೂ ಬಿಡದೆ ಸ್ನೇಹದಿಂದ ಹೇಳಿದಳು.

॥ ಹುಂಡ ಉವಾಚ ॥

ಸಾಧುವ್ರತಾಸಿ ಹೇ ದೇವಿ ಸಮ್ಯಗ್ವ್ರತಪರಾಯಣಾ ।
ಸಾಧುಶೀಲಸಮಾಚಾರಾ ಸೋಽವಾಚಾಶೋಕಸುಂದರೀಂ ।
ಅಹಂ ಪತಿವ್ರತಾ ಭದ್ರೇ ಪತಿವ್ರತಪರಾಯಣಾ ॥ ೫೧ ॥

ತಪಶ್ಚರಾಮಿ ಸುಭಗೇ ಭರ್ತುರರ್ಥೇ ಮಹಾಸತೀ ।
ಮಮ ಭರ್ತಾ ಹತಸ್ತೇನ ಹುಂಡೇನಾಪ್ರಿವರಾತ್ಮನಾ ।
ತಸ್ಯ ನಾಶಾಯ ವೈ ಘೋರಂ ತಪಸ್ಯಾಮಿ ಮಹತ್ತಪಃ ॥ ೫೨ ॥

ಏಹಿ ಮೇ ಸ್ವಾಶ್ರಮೇ ಪುಣ್ಯೇ ಗಂಗಾತೀರೇ ವಸಾಮ್ಯಹಂ ।
ಅನ್ಯೈರ್ಮನೋಹರೈರ್ವಾಕ್ಯೈರುಕ್ತ್ವಾ ಪ್ರತ್ಯಯಕಾರಕೈಃ ॥ ೫೩ ॥

ಹುಂಡೇನ ಸಖಿಭಾವೇನ ಮೋಹಿತಾ ಶಿವನಂದಿನೀ ।
ಸಮಾಕೃಷ್ಟಾ ಸುವೇಗೇನ ಮಹಾಮೋಹೇನ ಮೋಹಿತಾ ॥ ೫೪ ॥

---

೫೧. ಹುಂಡನು ಹೇಳಿದನು:—ನೀನು ಮಾಡುತ್ತಿರುವ ವ್ರತವು ಒಳ್ಳೆಯದು. ಒಳ್ಳೆಯ ನಿಯಮವನ್ನು ಹೊಂದಿದ್ದೀಯೆ. ಒಳ್ಳೆಯ ವ್ರತ ಆಚಾರ ಶೀಲಗಳನ್ನು ಹೊಂದಿದ್ದೀಯೆ. ನಾನೂ ಕೂಡ ಪತಿವ್ರತೆಯು. ಪತಿವ್ರತವೇ ನನ್ನ ಧ್ಯೇಯವು.

೫೨. ನಾನೂ ಕೂಡ ಗಂಡನಿಗೋಸ್ಕರ ತಪಸ್ಸು ಮಾಡುತ್ತೇನೆ. ನನ್ನ ಗಂಡನು ಆ ಅಯೋಗ್ಯನಾದ ಹುಂಡನಿಂದ ಕೊಲ್ಲಲ್ಪಟ್ಟನು. ಆದ್ದರಿಂದ ಅವನ ನಾಶಕ್ಕೋಸ್ಕರ ಘೋರವಾದ ತಪಸ್ಸನ್ನು ಮಾಡುತ್ತೇನೆ.

೫೩. ನನ್ನ ಆಶ್ರಮಕ್ಕೆ ಬಾ. ನಾನು ಗಂಗಾತೀರದಲ್ಲಿ ವಾಸಮಾಡುತ್ತಿದ್ದೇನೆ. ಇವೇ ಮುಂತಾದ ಮನೋಹರವಾದ ಮಾತುಗಳನ್ನೂ, ನಂಬಿಕೆಯ ಮಾತುಗಳನ್ನೂ ಆಡಿ

೫೪. ಸಖಿಯಭಾವದಿಂದ ಆ ಹುಂಡನು ಆಕೆಯನ್ನು ಮರಳುಮಾಡಿದನು. ಮಹಾಮೋಹದಿಂದ ತನ್ನ ಅಧೀನಳಾಗುವಂತೆ ಮಾಡಿಕೊಂಡನು.

ನೀತಾ ಚಾತ್ಮಗೃಹಂ ದಿವ್ಯಮನೌಪಮ್ಯಂ ಸುಶೋಭನಂ ।
ಮೇರೋಸ್ಸುಶಿಖರೇ ಪುತ್ರ ವೈಢೂರ್ಯಾಖ್ಯಂ ಪುರೋತ್ತಮಂ ॥ ೫೫ ॥

ಸ್ವಸ್ತ್ರೀವರ್ಗಗಣೋಪೇತಂ ಕಾಂಚನಾಖ್ಯಂ ಸದಾ ಶುಭಂ ।
ತುಂಗಪ್ರಾಸಾದಸಂಬಾಧೈಃ ಕಲಶೈರ್ದಂಡಚಾಮರೈಃ ॥ ೫೬ ॥

ನಾನಾವೃಕ್ಷಸಮೋಪೇತೈರ್ವನೈರ್ನೀಲೈರ್ಘನೋಪಮೈಃ ।
ವಾಪೀಕೂಪತಟಾಕೈಶ್ಚ ನದೀಭಿಸ್ತು ಜಲಾಶಯೈಃ ॥ ೫೭ ॥

ಶೋಭಮಾನಂ ಮಹಾರತ್ನೈಃ ಪ್ರಾಕಾರೈರ್ಹೇಮಸಂಯುತೈಃ ।
ಸರ್ವಕಾಮಸಮೃದ್ಧಾರ್ಥೈಃ ಪೂರ್ಣಂ ದೈತ್ಯಗೃಹೈಸ್ತಥಾ ॥ ೫೮ ॥

ದದೃಶೇ ಸಾ ಪುರಂ ರಮ್ಯಮಶೋಕಸುಂದರೀ ತದಾ ।
ಕಸ್ಯ ದೇವಸ್ಯ ಸಂಸ್ಥಾನಂ ಕಥಯಸ್ವ ಸಖೇ ಮಮ ॥ ೫೯ ॥

ಸೋವಾಚ ದಾನವೇಂದ್ರಸ್ಯ ಪೂರ್ವಂ ದೃಷ್ಟಸ್ಯ ವೈ ತ್ವಯಾ ।
ಹುಂಡಸ್ಯ ಸ್ಥಾನಮೇತದ್ಧಿ ಸೋಽಹಂ ದಾನವಪುಂಗವಃ ॥ ೬೦ ॥

---

೫೫. ಹೀಗೆ ವಶಮಾಡಿಕೊಂಡ ಆತನು ಮೇರುಪರ್ವತದಲ್ಲಿರುವ ವೈಡೂರ್ಯವೆಂಬ ಪಟ್ಟಣದಲ್ಲಿರುವ ತನ್ನ ಮನೆಗೆ ಕರೆದುಕೊಂಡು ಹೋದನು.

೫೬-೫೮. ಅಲ್ಲಿ ಕಾಂಚನವೆಂಬ ಹೆಸರುಳ್ಳ ಅವನ ಮನೆಯಿರುವುದು. ಅಲ್ಲಿ ಅವನ ಅಂತಃಪುರದವರೆಲ್ಲರೂ ಇರುವರು. ದೊಡ್ಡದಾದ ಉಪ್ಪರಿಗೆಯು ಇರುವುದು. ಮೇಲೆ ದಂಡವೂ ಚಾಮರವೂ ಇರುವುದು. ಅನೇಕವಾಗಿ ಸೊಂಪಾಗಿರುವ ಮರಗಳು ಬೆಳೆದಿವೆ. ಬಾವಿ, ಕೊಳಗಳು, ನದಿಗಳು, ಕೆರೆಗಳು, ಇವುಗಳು, ಅದರ ಸುತ್ತಲೂ ಬೇಕಾದಷ್ಟಿವೆ. ಸುತ್ತಲೂ ರತ್ನಖಚಿತವಾದ ಪೌಳಿಗೋಡೆಯಿರುವುದು. ಬೇಕಾದುದೆಲ್ಲವೂ ತುಂಬಿರುವ ಇತರ ರಾಕ್ಷಸರ ಮನೆಗಳೂ ಅದರ ಸುತ್ತಲೂ ಇವೆ. ಇಂತಹ ಪಟ್ಟಣವನ್ನು ಆ ಅಶೋಕಸುಂದರಿಯು ನೋಡಿದಳು.

೫೯-೬೦. ಎಲೈ ಸಖಿಯೇ, ಇದು ಯಾವ ದೇವರ ಜಾಗವು? ದಯವಿಟ್ಟು ಹೇಳು ಎನ್ನಲು, ಆಕೆಯು ನೀನು ಮೊದಲು ನೋಡಿದೆಯಲ್ಲಾ ಆ ದಾನವೇಂದ್ರನಾದ ಹುಂಡನ ಊರೇ ಇದು. ನಾನೇ ಆ ರಾಕ್ಷಸೋತ್ತಮನು ಎಂದಳು.

ಮಯಾ ತ್ವಂ ತು ಸಮಾನೀತಾ ಮಾಯಯಾ ಚಾತ್ರ ಭಾಮಿನಿ ।
ತಾಮಾಭಾಷ್ಯ ಗೃಹಂ ನೀತಾ ಶಾಂತಕೌಂಭಂ ಸುಶೋಭನಂ ॥ ೬೧ ॥

ನಾನಾವೇಶ್ಮೈಸ್ಸಮಾಜುಷ್ಟಂ ಕೈಲಾಸಶಿಖರೋಪಮಂ ।
ನಿವೇಶ್ಯ ಸುಂದರೀಂ ತತ್ರ ದೋಲಾಯಾಂ ಕಾಮಪೀಡಿತಃ ॥ ೬೨ ॥

ಪುನಃ ಸ್ವರೂಪೀ ದೈತ್ಯೇಂದ್ರಃ ಕಾಮಬಾಣಪ್ರಪೀಡಿತಃ ।
ಕರಸಂಪುಟಮಾಬದ್ಧ್ಯ ಉವಾಚ ವಚನಂ ತದಾ ॥ ೬೩ ॥

ಯಂ ಯಂ ತ್ವಂ ವಾಂಛಸೇ ಭದ್ರೇ ತಂ ತಂ ದದ್ಮಿ ನ ಸಂಶಯಃ ।
ಭಜ ಮಾಂ ತ್ವಂ ವಿಶಾಲಾಕ್ಷಿ ಭಜನ್ತಂ ಕಾಮಪೀಡಿತಂ ॥ ೬೪ ॥

॥ ಅಶೋಕಸುಂದರ್ಯುವಾಚ ॥

ನೈವ ಚಾಲಯಿತುಂ ಶಕ್ಯಾ ಭವತಾ ದಾನವೇಶ್ವರ ।
ಮನಸಾಪಿ ನ ವೈ ಧಾರ್ಯಾಂ ಮಮ ಮೋಹಂ ಸಮಾಗತಂ ॥ ೬೫ ॥

---

೬೧. ಎಲೈ ಸುಂದರಿಯೇ, ನಾನು ನಿನ್ನನ್ನು ಮಾಯೆಯಿಂದ ಕರೆತಂದಿದ್ದೇನೆ ಎಂದು ಹೇಳಿ, ಅವನು ಕಾಂಚನಗೃಹಕ್ಕೆ ಕರೆದುಕೊಂಡು ಹೋದನು.

೬೨-೬೩. ಅನೇಕ ಕೊಠಡಿಗಳಿಂದ ಕೂಡಿ ಕೈಲಾಸದ ಶಿಖರದಂತಿರುವ ಮಹಡಿಮನೆಯಲ್ಲಿ ಒಂದು ಉಯ್ಯಾಲೆಯಲ್ಲಿ ಆಕೆಯನ್ನು ಕೂರಿಸಿ, ಕಾಮಪೀಡಿತನಾದ ಆ ದೈತ್ಯನು ಮೊದಲಿನ ರಾಕ್ಷಸವೇಷವನ್ನು ತಾಳಿ ಕೈಮುಗಿದುಕೊಂಡು ಇಂತೆಂದನು.

೬೪. ಭದ್ರೆಯೇ, ನೀನು ಏನೇನನ್ನು ಕೇಳುತ್ತಿಯೋ ಅವೆಲ್ಲವನ್ನೂ ತಂದು ಕೊಡುತ್ತೇನೆ, ಸಂಶಯವಿಲ್ಲ. ನಿನ್ನನ್ನು ಸೇವಿಸುವ ಕಾಮಪೀಡಿತನಾದ ನನ್ನನ್ನು ನೀನು ಹೊಂದಿ ಸುಖಿಸು ಎನ್ನಲು, ಅಶೋಕಸುಂದರಿಯು ಅವನನ್ನು ಕುರಿತು

೬೫. ರಾಕ್ಷಸೇಂದ್ರನೇ, ನನ್ನನ್ನು ಮತ್ತೂ ನನ್ನ ಮನಸ್ಸನ್ನೂ ಸಹ ಬದಲಾಯಿಸುವುದಕ್ಕೆ ನಿನ್ನಿಂದ ಸಾಧ್ಯವೇ ಇಲ್ಲ. ನನ್ನನ್ನು ಇತರರಾರೂ, ಮನಸ್ಸಿನಿಂದಲೂ ಸಹ ಯೋಚಿಸುವುದಕ್ಕೆ ಅನರ್ಹರು. ಅಂತಹದರಲ್ಲಿ ನನ್ನ ವಿಷಯಕವಾದ ಮೋಹವು ನಿನಗೆ ಏಕೆ ಬಂದಿದೆ?

ಭವಾದೃಶ್ಶೈರ್ಮಹಾಪಾಪೈರ್ದೇವೈರ್ವಾ ದಾನವಾಧಮ ।
ದುಷ್ಪ್ರಾಪ್ಯಾಹಂ ನ ಸಂದೇಹ ಏವಂ ಪ್ರಾಹ ಪುನಃ ಪುನಃ ॥ ೬೬ ॥

ಸ್ಕನ್ದಾನುಜಾ ಸಾ ತಪಸಾಭಿಯುಕ್ತಾ
ಜಾಜ್ವಲ್ಯಮಾನಾ ಮಹತಾ ರುಷಾ ಚ ॥
ಸಂಹರ್ತುಕಾಮಾ ಪರಿದಾನವಂ ತಂ
ಕಾಲಸ್ಯ ಜಿಹ್ವೇವ ಯಥಾ ಸ್ಫುರಂತೀ ॥ ೬೭ ॥

ಸಾ ಪ್ರೋವಾಚ ಪುನರ್ದೇವೀ ತಮೇವಂ ದಾನವಾಧಮಂ ।
ಉಗ್ರಂ ಕರ್ಮ ಕೃತಂ ಪಾಪ ಆತ್ಮನಾಶನಹೇತವೇ ॥ ೬೮ ॥

ಆತ್ಮನಾಶಾಯ ನಾಶಾಯ ಸ್ವಜನಸ್ಯಾಸ್ಯ ವೈ ತ್ವಯಾ ।
ಸ್ವಗೃಹಂ ಪ್ರಾಪಿತಾ ದೀಪ್ತಾ ಸುಶಿಖಾ ಕೃಷ್ಣವರ್ತ್ಮನಃ ॥ ೬೯ ॥

ಯಥಾಽಶುಭಃ ಕೂಟಪಕ್ಷೀ ಸರ್ವಶೋಕೈಸ್ಸಮುದ್ಗತಃ ।
ಗೃಹಂ ಸ ಪ್ರವಿವೇಶೇದ್ಯಸ್ಯ ತಸ್ಯ ನಾಶೋ ಭವೇದ್ಧ್ರುವಂ ॥ ೭೦ ॥

---

೬೬. ನಿನ್ನಂತಹ ಪಾಪಿಗಳಿಂದಾಗಲೀ, ದೇವತೆಗಳಿಂದಲೇ ಆಗಲಿ ನನ್ನನ್ನು ವರಿಸಲು ಸಾಧ್ಯವಿಲ್ಲ. ಸಂದೇಹವಿಲ್ಲ ಎಂದು ಪದೇಪದೇ ಹೇಳಿದಳು.

೬೭. ಆ ಸ್ಕಂದನ ತಂಗಿಯಾದ ಅಶೋಕಸುಂದರಿಯು ಮಹಾಕೋಪದಿಂದ ಉರಿಯುತ್ತಾ ಅವನನ್ನು ನಾಶಮಾಡುವ ಅಭಿಪ್ರಾಯವುಳ್ಳವಳಾಗಿ, ಪ್ರಾಣಿಯನ್ನು ತಿನ್ನುವ ಆಸೆಯಿಂದ ಯಮನ ನಾಲಗೆಯು ಪ್ರಕಾಶಿಸುತ್ತಾ ಮುಂದೆ ಮುಂದೆ ಬರುವಂತೆ ಪ್ರಜ್ವಲಿಸಿದಳು.

೬೮. ಎಲೈ ದಾನವಾಧಮನೇ, ಅತ್ಮನಾಶಕವಾದ ಬಹು ಕೆಟ್ಟಕೆಲಸವನ್ನು ಮಾಡಿದೆ ಎಂದು ಪುನಃಪುನಃ ಹೇಳಿದಳು.

೬೯. ರಾಕ್ಷಸನೇ! ನೀನು ನನ್ನ ಮತ್ತು ನಿನ್ನ ಜನಗಳ ನಾಶಕ್ಕೋಸ್ಕರ ಬೆಂಕಿಯ ಜ್ವಾಲೆಯನ್ನು ತಂದಂತೆ ನನ್ನನ್ನು ನಿನ್ನ ಮನೆಗೆ ತಂದಿರುವೆ.

೭೦, ಅಮಂಗಳಕರವಾದ ಎಲ್ಲಾ ದುಃಖಕ್ಕೂ ತೌರುಮನೆಯಾದ ಗೂಬೆಯು ಯಾವನ ಮನೆಗೆ ನುಗ್ಗುತ್ತದೆಯೋ ಅವನ ನಾಶವು ಖಂಡಿತವಾಗಿ ಆಗುತ್ತದೆ.

**ಸ್ವಜನಸ್ಯ ಚ ಸರ್ವಸ್ಯ ಧನಸ್ಯ ಚ ಕುಲಸ್ಯ ಚ ।**
**ಸ ದ್ವಿಜೋ ನಾಶಮಿಚ್ಛೇತ ವಿಶತ್ಯೇವಂ ಯದಾ ಗೃಹಂ ॥ ೭೦ ॥**

**ತಥಾ ತೇಽಹಂ ಗೃಹಂ ಪ್ರಾಪ್ತಾ ತವ ನಾಶಂ ಸಮೀಹತೀ ।**
**ಜೀವಂ ಕುಲಂ ಧನಂ ಧಾನ್ಯಂ ಪುತ್ರಪೌತ್ರಾಧಿಕಂ ತಥಾ ॥ ೭೨ ॥**

**ಪುತ್ರಾಣಾಂ ಧನಧಾನ್ಯಸ್ಯ ತೇ ವಂಶಸ್ಯ ಚ ಸಾಂಪ್ರತಂ ।**
**ಸರ್ವಂ ತೇ ನಾಶಯಿತ್ವಾಹಂ ಯಾಸ್ಯಾಮಿ ಚ ನ ಸಂಶಯಃ ॥ ೭೩ ॥**

**ಯಥಾ ತ್ವಯಾಽಹಮಾನೀತಾ ಚರಂತೀ ಪರಮಂ ತಪಃ ।**
**ಪತಿಕಾಮಾ ಪ್ರವಾಂಛಂತೀ ನಹುಷಂ ಚಾಯುನಂದನಂ ॥ ೭೪ ॥**

**ತಥಾ ತ್ವಾಂ ಮಮ ಭರ್ತಾ ಹಿ ನಾಶಯಿಷ್ಯತಿ ದಾನವ ।**
**ಮನ್ನಿಮಿತ್ತಮುಪಾಯೋಽಯಂ ದೃಷ್ಟೋ ದೇವೇನ ವೈ ಪುರಾ ॥ ೭೫ ॥**

**ಸತ್ಯೇಯಂ ಲೌಕಿಕೀ ಗಾಥಾ ಯಾಂ ಗಾಯಂತಿ ವಿದೋ ಜನಾಃ ।**
**ಪ್ರತ್ಯಕ್ಷಂ ದೃಶ್ಯತೇ ಲೋಕೇ ನ ವಿಂದಂತಿ ಕುಬುದ್ಧಯಃ ॥ ೭೬ ॥**

---

೭೧. ಗೂಬೆಯು ನುಗ್ಗಿದ ಮನೆಯನ್ನು ಪ್ರವೇಶಿಸುವ ಮನುಷ್ಯನು ತನ್ನ ಸ್ವಜನರನ್ನೂ ನೆಂಟರಿಷ್ಟರನ್ನೂ ಧನವನ್ನೂ ಕಳೆದುಕೊಂಡು ನಾಶವನ್ನೈದುವನು.

೭೨. ಆ ಪಕ್ಷಿಯಂತೆ ನಿನ್ನ ಮತ್ತು ನಿನ್ನ ಜೀವದ, ಕುಲದ, ಧನದ, ಧಾನ್ಯದ, ಇನ್ನೂ ಮಕ್ಕಳು ಮೊಮ್ಮಕ್ಕಳ ನಾಶವನ್ನು ಅಪೇಕ್ಷಿಸಿ ನಿನ್ನ ಮನೆಗೆ ಹೊಕ್ಕಿದ್ದೇನೆ.

೭೩. ನಿನ್ನ ಮಕ್ಕಳು, ಮೊಮ್ಮಕ್ಕಳು, ವಂಶ, ಎಲ್ಲವನ್ನೂ ನಾಶಮಾಡಿ ನಾನು ಹೋಗುತ್ತೇನೆ, ಸಂಶಯವಿಲ್ಲ.

೭೪-೭೫. ಆಯುವಿನ ಮಗನಾದ ನಹುಷನನ್ನು ಪತಿಯನ್ನಾಗಿ ಅಪೇಕ್ಷಿಸುತ್ತಾ ದುಷ್ಕರವಾದ ತಪಸ್ಸು ಮಾಡುತ್ತಿದ್ದ ನನ್ನನ್ನು ನೀನು ಹೇಗೆ ತಂದೆಯೋ ಹಾಗೆಯೇ ನನ್ನ ಗಂಡನು ನಿನ್ನನ್ನು ಕೊಲ್ಲುತ್ತಾನೆ. ನನ್ನ ನಿಮಿತ್ತವಾಗಿಯೇ ದೇವರು ಈ ಉಪಾಯವನ್ನು ನಿರ್ಮಿಸಿರುವನು.

೭೬. ಜನಗಳು ಹೇಳುವ ಗಾದೆಯು ಸತ್ಯವಾದುದು. ಎದುರಿಗೆ ಕಾಣುತ್ತದೆ. ಅಯೋಗ್ಯರು ಅದನ್ನು ತಿಳಿಯುವುದಿಲ್ಲ.

**ಯತ್ರ ಯೇನ ಪ್ರಭೋಕ್ತವ್ಯಂ ಯಸ್ಮಾದ್ದುಃಖಸುಖಾದಿಕಂ ।**
**ಸತ್ಯಂ ಚ ಭುಜ್ಯತೇ ತತ್ರ ತಸ್ಮಾದೇವ ನ ಸಂಶಯಃ ॥ ೭೭ ॥**

**ಕರ್ಮಣೋಽಸ್ಯ ಫಲಂ ಭುಂಕ್ಷ್ವ ಸ್ವಕೀಯಸ್ಯ ಮಹೀತಲೇ ।**
**ಯಾಸ್ಯಸೇ ನಿರಯಂ ಸ್ಥಾನಂ ಪರದಾರಾಭಿಮರ್ಶನಾತ್ ॥ ೭೮ ॥**

**ಸುತೀಕ್ಷ್ಣಂ ಹಿ ಸುಧಾರಂ ತು ಸುಖಡ್ಗಂ ಚ ವಿಘಟ್ಟತಿ ।**
**ಅಂಗುಲ್ಯಗ್ರೇಣ ಕೋಪಾಯ ತಥಾ ಮಾಂ ವಿದ್ಧಿ ಸಾಂಪ್ರತಂ ॥ ೭೯ ॥**

**ಸಿಂಹಸ್ಯ ಸಂಮುಖಂ ಗತ್ವಾ ಕ್ರುದ್ಧಸ್ಯ ಗರ್ಜಿತಸ್ಯ ವಾ ।**
**ಕೋ ಲುನಾತಿ ಮುಖಾತ್ಕೇಶಾನ್ ಸಾಹಸಾಕಾರಸಂಯುತಃ ॥ ೮೦ ॥**

**ಸತ್ಯಾಚಾರಾಂ ದಮೋಪೇತಾಂ ನಿಯತಾಂ ತಪಸಿ ಸ್ಥಿತಾಂ ।**
**ನಿಧನಂ ಚೇಚ್ಛತೇ ಸದ್ಯೋ ಯೋ ವೈ ಮಾಂ ಭೋಕ್ತುಮಿಚ್ಛತಿ ॥ ೮೧ ॥**

**ಸ ಮಣಿಂ ಕೃಷ್ಣಸರ್ಪಸ್ಯ ಜೀವಮಾನಸ್ಯ ಸಾಂಪ್ರತಂ ।**
**ಗ್ರಹೀತುಮಿಚ್ಛತ್ಯೇವಾಪಿ ಯಥಾ ಕಾಲೇನ ಪ್ರೇಷಿತಃ ॥ ೮೨ ॥**

---

೭೭. ಯಾವನು ಕಷ್ಟಸುಖಗಳನ್ನು ಎಲ್ಲಿ ಯಾವನಿಂದ ಯಾವಾಗ ಅನುಭವಿಸಬೇಕೋ ಅಲ್ಲಿ ಅವನಿಂದ ಆಗಲೇ ಅನುಭವಿಸುತ್ತಾನೆ. ಸಂಶಯವಿಲ್ಲಾ.

೭೮. ಭೂಮಿಯಲ್ಲಿ ನೀನು ಮಾಡಿದ ಈ ಕೆಟ್ಟಕೆಲಸಕ್ಕೆ ತಕ್ಕ ಫಲವನ್ನು ಅನುಭವಿಸು. ಪರರ ಹೆಂಡಿರನ್ನು ಮುಟ್ಟಿದುದರಿಂದ ನರಕವನ್ನು ಹೊಂದುತ್ತೀಯೆ.

೭೯. ಒಳ್ಳೆಯ ಮೊನೆಯುಳ್ಳ ಹರಿತವಾದ ಕತ್ತಿಯನ್ನು ಬೆಟ್ಟಿನ ತುದಿಯಿಂದ ಅಮುಕುತ್ತಿದ್ದೀನೆ. ಹೀಗೆಂದು ನನ್ನನ್ನು ತಿಳಿ.

೮೦. ಕೋಪಗೊಂಡು ಘರ್ಜಿಸುತ್ತಿರುವ ಸಿಂಹದ ಎದುರಿಗೆ ಹೋಗಿ, ಧೈರ್ಯ ಮಾಡಿ ಅದರ ಮುಖದಲ್ಲಿರುವ ಮೀಶೆಯನ್ನು ಯಾರು ಕೀಳಬಲ್ಲರು ?

೮೧. ಸರಿಯಾದ ಆಚಾರ, ಇಂದ್ರಿಯನಿಗ್ರಹ, ನಿಯಮ, ತಪಸ್ಸುಗಳುಳ್ಳ ನನ್ನನ್ನು ಅನುಭವಿಸಲು ಅಪೇಕ್ಷಿಸುವವನು ಮೃತ್ಯುವನ್ನು ಅಪೇಕ್ಷಿಸುವಂತೆಯೇ.

೮೨. ಹಾಗೆ ನನ್ನನ್ನು ಅನುಭವಿಸಲಪೇಕ್ಷಿಸುವವನು, ಬದುಕಿರುವ ಕೃಷ್ಣ ಸರ್ಪದಲ್ಲಿರುವ ಮಣಿಯನ್ನು ಯಮನಿಂದ ಪ್ರೇರಿತನಾಗಿ ತೆಗೆಯಲು ಅಪೇಕ್ಷಿಸುತ್ತಾನೆ.

ಭವಾಂಸ್ತು ಪ್ರೇಷಿತೋ ಮೂಢ ಕಾಲೇನ ಕಾಮಮೋಹಿತಃ ।
ತದಾ ತ ಈದೃಶೀ ಜಾತಾ ಕುಮತಿಃ ಕಿಂ ನ ಪಶ್ಯಸಿ ॥ ೮೩ ॥

ಋತೇ ತು ಆಯುಪುತ್ರೇಣ ಸಮಾಲೋಕಯತೇ ಹಿ ಕಃ ।
ಅನ್ಯೋ ಹಿ ನಿಧನಂ ಯಾತಿ ಮಮ ಗಾತ್ರಾವಲೋಕನಾತ್ ॥ ೮೪ ॥

ಏವಮಾಭಾಷ್ಯ ತಂ ದುಷ್ಟಂ ಗಂಗಾತೀರಂ ಗತಾ ಸತೀ ।
ಸಶೋಕಾ ದುಃಖಸಂವಿಗ್ನಾ ನಿಯತಾ ನಿಯಮಾನ್ವಿತಾ ॥ ೮೫ ॥

ಪೂರ್ವಮಾಚರಿತಂ ಘೋರಂ ಪತಿಕಾಮನಯಾ ತಪಃ ।
ತವ ನಾಶಾರ್ಥಮದ್ಯಾಹಂ ಚರಿಷ್ಯೇ ದಾರುಣಂ ತಪಃ ॥ ೮೬ ॥

ಯದಾ ತ್ವಂ ನಿಹತಂ ದುಷ್ಟ ನಹುಷೇಣ ಮಹಾತ್ಮನಾ ।
ನಿಶಿತೈರ್ವಜ್ರಸಂಕಾಶೈರ್ಬಾಣೈರಾಶೀವಿಷೋಪಮೈಃ ॥ ೮೭ ॥

ರಣೇ ನಿಪತಿತಂ ಪಾಪ ಮುಕ್ತಕೇಶಂ ಸಲೋಹಿತಂ ।
ಗತೋತ್ಸಾಹಂ ಪ್ರದ್ರಕ್ಷ್ಯಾಮಿ ತದಾ ಯಾಸ್ಯಾಮ್ಯಹಂ ಪತಿಂ ॥ ೮೮ ॥

---

೮೩. ಯಮನಿಂದ ಪ್ರೇರಿತನಾಗಿ ಈ ಕಾಮಿಯರೂಪದಲ್ಲಿ ಬಂದಿದ್ದೀಯೆ. ಅದಕ್ಕೆ ನಿನಗೆ ಈರೀತಿ ಬುದ್ಧಿ ಹುಟ್ಟಿರುವುದು. ನಿನಗೆ ಗೊತ್ತಾಗುವುದಿಲ್ಲವೇ?

೮೪. ಆಯುಪುತ್ರನಾದ ನಹುಷನೊಬ್ಬನನ್ನು ಬಿಟ್ಟು ಮತ್ತಾವನು ನನ್ನ ಮೈಯನ್ನು ನೋಡಿದರೂ ಮೃತ್ಯುವನ್ನು ಪಡೆಯುತ್ತಾನೆ.

೮೫-೮೬. ಗಂಗಾತೀರಕ್ಕೆ ಹೋಗಿ ದುಃಖಗೊಂಡು ವ್ರತವನ್ನು ಹೊಂದಿ, ಮೊದಲು ಪತಿಯ ಅಪೇಕ್ಷೆಯಿಂದ ಹೇಗೆ ಕಷ್ಟದಿಂದ ತಪಸ್ಸುಮಾಡಿದೆನೋ ಹಾಗೆ ಈಗ ನಿನ್ನ ನಾಶಕ್ಕೋಸ್ಕರ ಕ್ರೂರವಾದ ತಪಸ್ಸನ್ನು ಮಾಡುತ್ತೇನೆ.

೮೭-೮೮. ನಹುಷನು ವಜ್ರದಂತಿರುವ ಬಾಣಗಳಿಂದ ನಿನ್ನನ್ನು ಹೊಡೆದಾಗ ರಣಭೂಮಿಯಲ್ಲಿ ಬಿದ್ದು ತಲೆಗೆದರಿಕೊಂಡು ರಕ್ತದಿಂದ ಬಳಿಯಲ್ಪಟ್ಟು ದುಃಖ ಪಡುತ್ತಿರುವ ನಿನ್ನನ್ನು ನಾನು ನೋಡಿದ ಮೇಲೆಯೇ ಆ ನಹುಷನನ್ನು ಹೊಂದುವುದು ಎಂದಳು.

ಏವಂ ಸುನಿಯಮಂ ಕೃತ್ವಾ ಗಂಗಾತೀರೇ ಅನುತ್ತಮೇ ।
ಸಂಸ್ಥಿತಾ ಹುಂಡನಾಶಾಯ ನಿಶ್ಚಿತಾ ಶಿವನಂದಿನೀ ॥ ೮೯ ॥

ವಹ್ನೇರ್ಯಥಾ ದೀಪ್ತಿಮತೀ ಶಿಖೋಜ್ಜ್ವಲಾ
ತೇಜೋಭಿಯುಕ್ತಾ ಪ್ರದಹೇತ್ಸುಲೋಕಾನ್ ॥
ಕ್ರೋಧೇನ ದೀಪ್ತಾ ವಿಬುಧೇಶಪುತ್ರಿಕಾ
ಗಂಗಾತಟೇ ದುಶ್ಚರಮಾಚರತ್ತಪಃ ॥ ೯೦ ॥

॥ ಕುಂಜಲ ಉವಾಚ ॥

ಏವಮುಕ್ತ್ವಾ ಮಹಾಭಾಗಾ ಶಿವಸ್ಯ ತನಯಾ ಗತಾ ।
ಗಂಗಾಂಭಸಿ ತತಸ್ಸ್ನಾತ್ವಾ ಸುಪುರೇ ಕಾಂಚನಾಹ್ವಯೇ ॥ ೯೧ ॥

ತಪಶ್ಚಚಾರ ತನ್ವಂಗೀ ಹುಂಡಸ್ಯ ವಧಹೇತವೇ ।
ಅಶೋಕಸುಂದರೀ ಬಾಲಾ ಸತ್ಯೇನ ಚ ಸಮನ್ವಿತಾ ॥ ೯೨ ॥

ಹುಂಡೋಪಿ ದುಃಖಿತೋ ಜಾತ ಆತ್ಮನಾ ಪಾಪಚೇತಸಾ ।
ಚಿಂತಯಾಮಾಸ ಸಂತಪ್ತೋ ಹ್ಯತೀವ ವಚನಾನಲೈಃ ॥ ೯೩ ॥

---

೮೯. ಈರೀತಿ ಪ್ರತಿಜ್ಞೆಯನ್ನು ಮಾಡಿಕೊಂಡು ಗಂಗಾತೀರದಲ್ಲಿ ಆ ಶಿವನ ಮಗಳು ಹುಂಡನಾಶಕ್ಕೋಸ್ಕರ ನಿಶ್ಚಯಿಸಿಕೊಂಡಿದ್ದಾಳೆ.

೯೦. ಬೆಂಕಿಯ ಶಿಖೆಯು ಜ್ವಾಲೆಯಿಂದ ಕೂಡಿಕೊಂಡು ಲೋಕಗಳನ್ನೆಲ್ಲಾ ಸುಡುವಂತೆ ಈ ಶಿವಪುತ್ರಿಯು ಕೋಪದಿಂದ ಕೂಡಿಕ್ಕೊಂಡು ಗಂಗೆಯ ದಡದಲ್ಲಿ ತಪಸ್ಸು ಮಾಡಿದಳು.

೯೧-೯೨. ಕುಂಜಲನು ಹೇಳಿದನು:—ಶಿವಪುತ್ರಿಯು ಹೀಗೆಂದು ಹೇಳಿ ಆ ಕಾಂಚನಪುರದಲ್ಲಿ ಗಂಗೆಯ ನೀರಿನಲ್ಲಿ ಸ್ನಾನಮಾಡಿ ಹುಂಡನ ವಧೆಗೋಸ್ಕರ ಸತ್ಯದಿಂದಲೂ, ನಿಯಮದಿಂದಲೂ, ಕೂಡಿ ತಪಸ್ಸನ್ನು ಮಾಡಿದಳು.

೯೩. ಹುಂಡನೂ ಕೂಡ ತನ್ನ ಪಾಪಬುದ್ಧಿಯಿಂದ ದುಃಖಗೊಂಡು ಅವಳ ಮಾತೆಂಬ ಬೆಂಕಿಯಿಂದ ಸುಡಲ್ಪಟ್ಟು ಚಿಂತಿಸಿದನು.

ಸಮಾಹೂಯ ಅಮಾತ್ಯಂ ತಂ ಕಂಪನಾಖ್ಯಮಥಾಬ್ರವೀತ್ ।
ಸಮಾಚಷ್ಟೇ ಪ್ರವೃತ್ತಾಂತಂ ತಸ್ಯಾಶ್ಯಾಪೋದ್ಭವಂ ಮಹತ್ ॥ ೯೪ ॥

ಶಪ್ತೋ ಹ್ಯಶೋಕಸುಂದರ್ಯಾ ಶಿವಸ್ಯಾಪಿ ಸುಕನ್ಯಯಾ ।
ನಹುಷಸ್ಯಾಪಿ ಮೇ ಭರ್ತುಸ್ತ್ವಂ ತು ಹಸ್ತಾನ್ಮರಿಷ್ಯಸಿ ॥ ೯೫ ॥

ನೈವ ಸ್ಯಾತ್ತು ಹ್ಯಸೌ ಗರ್ಭ ಆಯೋರ್ಭಾರ್ಯಾ ನ ಗುರ್ವಿಣೀ ।
ಯಥಾ ತು ಸ್ಯಾದಲೀಕಸ್ತು ತಸ್ಯಾಶ್ಯಾಪಸ್ತಥಾ ಕುರು ॥ ೯೬ ॥

॥ ಕಂಪನ ಉವಾಚ ॥

ಅಪಹೃತ್ಯ ಪ್ರಿಯಾಂ ತಸ್ಯ ಆಯೋಶ್ಚಾಪಿ ಸಮಾನಯ ।
ಅನೇನಾಪಿ ಪ್ರಕಾರೇಣ ತವ ಶತ್ರುರ್ನ ಜಾಯತೇ ॥ ೯೭ ॥

ನೋ ವಾ ಪ್ರಪಾತಯಸ್ವ ತ್ವಂ ಗರ್ಭಂ ತಸ್ಯಾಃ ಪ್ರಭೀಷಣೈಃ ।
ಅನೇನಾಪಿ ಪ್ರಭಾವೇಣ ತವ ಶತ್ರುರ್ನ ಜಾಯತೇ ॥ ೯೮ ॥

---

೯೪. ಹುಂಡನು ಕಂಪನನೆಂಬ ತನ್ನ ಮಂತ್ರಿಯನ್ನು ಕರೆದು ಅವಳ ಶಾಪದಿಂದ ಕೂಡಿದ ತನ್ನ ವೃತ್ತಾಂತವನ್ನು ಹೇಳಿದನು.

೯೫. ಶಿವನ ಮಗಳಾದ ಅಶೋಕಸುಂದರಿಯು, ನನ್ನ ಗಂಡನಾದ ನಹುಷನ ಕೈಯಿಂದ ಸಾಯಬೇಕು ಎಂದು ನನ್ನನ್ನು ಶಪಿಸಿದಳು.

೯೬. ಆಯುವಿನ ಹೆಂಡತಿಯು ಗರ್ಭಿಣಿಯಾಗಲೇಬಾರದು. ಆ ಅಶೋಕಸುಂದರಿಯ ಮಾತು ಸುಳ್ಳಾಗಬೇಕು ಹಾಗೆ ಮಾಡು ಎಂದನು.

೯೭, ಕಂಪನನು ಹೇಳಿದನು:—ಆ ಆಯುವಿನ ಹೆಂಡತಿಯನ್ನು ಕದ್ದು ತೆಗೆದುಕೊಂಡು ಬಾ. ಹಾಗಾದರೆ ನಿನಗೆ ಶತ್ರು ಹುಟ್ಟುವುದಿಲ್ಲ.

೯೮. ಅಲ್ಲದಿದ್ದರೆ ಅನೇಕ ಬಗೆಯಾದ ಹೆದರಿಕೆಗಳಿಂದ ಅವಳ ಗರ್ಭವು ಪತನವಾಗುವಂತೆ ಮಾಡು. ಹೀಗೆ ಮಾಡಿದರೂ ನಿನ್ನ ಶತ್ರುವು ಹುಟ್ಟುವುದಿಲ್ಲ.

ಜನ್ಮಕಾಲಂ ಪ್ರತೀಕ್ಷಸ್ವ ನಹುಷಸ್ಯ ದುರಾತ್ಮನಃ ।
ಅಪಹೃತ್ಯ ಸಮಾನೀಯ ಜಹಿ ತ್ವಂ ಪಾಪಚೇತನಂ ॥ ೯೯ ॥

ಏವಂ ಸಂಮಂತ್ರ್ಯ ತೇನಾಪಿ ಕಂಪನೇನ ಸ ದಾನವಃ ।
ಅಭೂತ್ಸ ಚೋದ್ಯಮೀ ಹ್ಯೇವಂ ನಹುಷಸ್ಯ ಪ್ರಣಾಶನೇ ॥ ೧೦೦ ॥

॥ ವಿಷ್ಣುರುವಾಚ ॥

ಐಲಪುತ್ರೋ ಮಹಾಭಾಗ ಆಯುರ್ನಾಮ ಕ್ಷಿತೀಶ್ವರಃ ।
ಸಾರ್ವಭೌಮಃ ಸ ಧರ್ಮಾತ್ಮಾ ಸತ್ಯಧರ್ಮಪರಾಯಣಃ ॥ ೧೦೧ ॥

ಇಂದ್ರೋಪೇಂದ್ರಸಮೋ ರಾಜಾ ತಪಸಾ ಯಶಸಾ ಬಲೈಃ ।
ದಾನಯಜ್ಞೈಸ್ಸುಪುಣ್ಯೈಶ್ಚ ಸತ್ಯೇನ ನಿಯಮೇನ ಚ ॥ ೧೦೨ ॥

ಏಕಚ್ಛತ್ರೇಣ ವೈ ರಾಜ್ಯಂ ಚಕ್ರೇ ಭೂಪತಿಸತ್ತಮಃ ।
ಪೃಥಿವ್ಯಾಂ ಸರ್ವಧರ್ಮಜ್ಞಃ ಸೋಮವಂಶಸ್ಯ ಭೂಷಣಂ ॥ ೧೦೩ ॥

---

೯೯. ಅವನ ಜನನವನ್ನು ಕಾದುಕೊಂಡಿದ್ದು ಕದ್ದು ತಂದು ಆ ನಹುಷನನ್ನು ಕೊಂದುಹಾಕು.

೧೦೦. ಆ ರಾಕ್ಷಸನು ಕಂಪನನೊಡನೆ ಹೀಗೆ ಯೋಚಿಸಿ ನಹುಷನ ನಾಶದಲ್ಲಿ ಕಾರ್ಯವನ್ನಾರಂಭಿಸಿದನು.

೧೦೧-೧೦೨. ವಿಷ್ಣು ಹೇಳಿದನು :—ಆಯುವೆಂಬ ರಾಜನು ಐಲಚಕ್ರವರ್ತಿಯ ಮಗನು. ಚಕ್ರವರ್ತಿಯು ಧರ್ಮಿಷ್ಠನು. ಧರ್ಮದಲ್ಲೇ ಆಸಕ್ತನು. ಬಲದಲ್ಲಿ ಇಂದ್ರನಿಗೂ, ವಿಷ್ಣುವಿಗೂ, ಸಮಾನನು. ತಪೋನಿಷ್ಠ, ಯಸಸ್ವೀ, ದಾನ, ಯಜ್ಞ, ಪುಣ್ಯ, ಸತ್ಯ, ನಿಯಮ ಇವುಗಳಲ್ಲಿಯೂ, ಇಂದ್ರವಿಷ್ಣುಗಳಿಗೆ ಸಮಾನನು. ಪ್ರಪಂಚವನ್ನೆಲ್ಲಾ ಒಂದೇ ಕೊಡೆಯ ನೆರಳಿನಲ್ಲಿ ಆಳುತ್ತಿದ್ದನು.

೧೦೩. ಭೂಮಿಯಲ್ಲೆಲ್ಲಾ ಅವನೊಬ್ಬನೇ ಧರ್ಮವನ್ನು ಬಲ್ಲವನು. ಚಂದ್ರವಂಶಕ್ಕೆ ಅಲಂಕಾರಪ್ರಾಯನೂ ಆಗಿದ್ದನು:

ಪುತ್ರಂ ನ ವಿಂದತೇ ರಾಜಾ ತೇನ ದುಃಖೀ ವ್ಯಜಾಯತ ।
ಚಿಂತಯಾಮಾಸ ಧರ್ಮಾತ್ಮಾ ಕಥಂ ಮೇ ಜಾಯತೇ ಸುತಃ ॥ ೧೦೪ ॥

ಇತಿ ಚಿಂತಾಂ ಸಮಾಪೇದ ಆಯುಶ್ಚ ಪೃಥಿವೀಪತಿಃ ।
ಪುತ್ರಾರ್ಥಂ ಪರಮಂ ಯತ್ನಮಕರೋತ್ಸುಸಮಾಹಿತಃ ॥ ೧೦೫ ॥

ಅತ್ರಿಪುತ್ರೋ ಮಹಾತ್ಮಾ ವೈ ದತ್ತಾತ್ರೇಯೋ ದ್ವಿಜೋತ್ತಮಃ ।
ಕ್ರೀಡಮಾನಃ ಸ್ತ್ರಿಯಾ ಸಾರ್ಧಂ ಮದಾರುಣಲೋಚನಃ ॥ ೧೦೬ ॥

ವಾರುಣ್ಯಾ ಮತ್ತಧರ್ಮಾತ್ಮಾ ಸ್ತ್ರೀವೃಂದೇನ ಸಮಾವೃತಃ ।
ಅಂಕೇ ಯುವತಿಮಾಧಾಯ ಸರ್ವಯೋಷಿದ್ವರಾಂ ಶುಭಾಂ ॥ ೧೦೭ ॥

ಗಾಯತೇ ನೃತ್ಯತೇ ವಿಪ್ರಃ ಸುರಾಂ ಚ ಪಿಬತೇ ಭೃಶಂ ।
ವಿನಾ ಯಜ್ಞೋಪವೀತೇನ ಮಹಾಯೋಗೀಶ್ವರೋತ್ತಮಃ ॥ ೧೦೮ ॥

ಪುಷ್ಪಮಾಲಾಭಿರ್ದಿವ್ಯಾಭಿರ್ಮುಕ್ತಾಹಾರಪರಿಚ್ಛದೈಃ ।
ಚಂದನಾಗರುದಿಗ್ಧಾಂಗೋ ರಾಜಮಾನೋ ಮುನೀಶ್ವರಃ ॥ ೧೦೯ ॥

---

೧೦೪-೧೦೫. ಅವನಿಗೆ ಮಕ್ಕಳಾಗಿರಲಿಲ್ಲ. ಅದೇ ಅವನಿಗೆ ದೊಡ್ಡ ದುಃಖವಾಯಿತು. ನನಗೆ ಮಕ್ಕಳು ಆಗುವ ಬಗೆ ಹೇಗೆಂದು ಆತನು ಯೋಚಿಸಿದನು. ಇದೇ ಚಿಂತೆಯು ಆತನನ್ನು ಬಾಧಿಸತೊಡಗಿತು. ಆದುದರಿಂದ ಅವನು ಪುತ್ರೋತ್ಪತ್ತಿಗೋಸ್ಕರ ಬಹಳ ಪ್ರಯತ್ನಗಳನ್ನು ಮಾಡಿದನು. ಹೀಗಿರಲು,

೧೦೬-೧೦೭. ಅತ್ರಿಯ ಮಗನಾದ ದತ್ತಾತ್ರೇಯನು ಸುರಾಪಾನಮಾಡಿ ಕಣ್ಣನ್ನು ಕೆಂಪಗೆ ಮಾಡಿಕೊಂಡು ಹೆಂಗಸರೊಡನೆ ಆಟವಾಡುತ್ತಾ ಹೆಂಡದಿಂದ ಮದಿಸಿ ಹೆಂಗಸರ ಗುಂಪಿನಿಂದ ಆವರಿಸಲ್ಪಟ್ಟು ತೊಡೆಯ ಮೇಲೆ ಹೆಂಗಸನ್ನು ಕೂರಿಸಿಕೊಂಡು ಗಾನಮಾಡುತ್ತಾನೆ. ಅವಳೊಡನೆ ಕುಣಿಯುತ್ತಾನೆ. ಅವಳ ಸಂಗಡ ಸುರಾಪಾನ ಮಾಡುತ್ತಾನೆ.

೧೦೮-೧೦೯. ಆ ಯೋಗೀಶ್ವರನು ಯಜ್ಞೋಪವೀತವನ್ನು ತೆಗೆದುಹಾಕಿ ಒಳ್ಳೆಯ ಹೂಮಾಲೆಗಳಿಂದಲೂ, ಮುತ್ತಿನಹಾರಗಳಿಂದಲೂ, ಚಂದನ, ಅಗರುಗಳಿಂದಲೂ ಅಲಂಕರಿಸಿಕೊಂಡಿದ್ದಾನೆ.

**ತಸ್ಯಾಶ್ರಮಂ ನೃಪೋ ಗತ್ವಾ ತಂ ದೃಷ್ಟ್ವಾ ದ್ವಿಜಸತ್ತಮಂ ।**
**ಪ್ರಣಾಮಮಕರೋನ್ಮೂರ್ಧ್ನಾ ದಂಡವತ್ಸುಸಮಾಹಿತಃ ॥ ೧೧೦ ॥**

**ಅತ್ರಿಪುತ್ರಸ್ಸ ಧರ್ಮಾತ್ಮಾ ಸಮಾಲೋಕ್ಯ ನೃಪೋತ್ತಮಂ ।**
**ಆಗತಂ ಪುರತೋ ಭಕ್ತ್ಯಾ ಅಥ ಧ್ಯಾನಂ ಸಮಾಸ್ಥಿತಃ ॥ ೧೧೧ ॥**

**ಏವಂ ವರ್ಷಶತಂ ಪ್ರಾಪ್ತಂ ತಸ್ಯ ಭೂಪಸ್ಯ ಸತ್ತಮ ।**
**ನಿಶ್ಚಲತ್ವಂ ಪರಿಜ್ಞಾಯ ಮಾನಸಂ ಭಕ್ತಿತತ್ಪರಂ ॥ ೧೧೨ ॥**

**ಸಮಾಹೂಯ ಸಮಾಚಷ್ಟೇ ಕಿಮರ್ಥಂ ಕ್ಲಿಶ್ಯಸೇ ನೃಪ ।**
**ಬ್ರಹ್ಮಾಚಾರೇಣ ಹೀನೋಽಸ್ಮಿ ಬ್ರಹ್ಮತ್ವಂ ನಾಸ್ತಿ ಮೇ ಕದಾ ॥ ೧೧೩ ॥**

**ಸುರಾಮಾಂಸಪ್ರಲುಬ್ಧೋಽಸ್ಮಿ ಸ್ತ್ರಿಯಾಸಕ್ತಃ ಸದೈವ ಹಿ ।**
**ವರದಾನೇ ನ ಮೇ ಶಕ್ತಿರನ್ಯಂ ಶುಶ್ರೂಷ ಬ್ರಾಹ್ಮಣಂ ॥ ೧೧೪ ॥**

**॥ ಆಯುರುವಾಚ ॥**

**ಭವಾದೃಶೋ ಮಹಾಭಾಗ ನಾಸ್ತಿ ಬ್ರಾಹ್ಮಣಸತ್ತಮಃ ।**
**ಸರ್ವಕಾಮಪ್ರದಾತಾ ವೈ ತ್ರೈಲೋಕ್ಯೇ ಪರಮೇಶ್ವರಃ ॥ ೧೧೫ ॥**

---

೧೧೦. ಆ ದತ್ತಾತ್ರೇಯನ ಆಶ್ರಮಕ್ಕೆ ದೊರೆಯಾದ ಆಯುವು ಹೋಗಿ ಆ ಋಷಿಯನ್ನು ಕಂಡು ದಂಡಪ್ರಮಾಣವನ್ನು ಮಾಡಿದನು.

೧೧೧. ಆ ಅತ್ರಿಪುತ್ರನು ಬಂದ ರಾಜನನ್ನು ನೋಡಿ ಭಕ್ತಿಯಿಂದ ನಿಂತಿರುವುದನ್ನು ತಿಳಿದು, ಪಂಚೇಂದ್ರಿಯಗಳನ್ನು ಹಿಡಿದು ಧ್ಯಾನಕ್ಕೆ ಮೊದಲಿಟ್ಟನು.

೧೧೨-೧೧೪. ಹೀಗೆ ಯೋಗದಲ್ಲಿಯೇ ಒಂದುನೂರು ವರ್ಷಗಳು ಕಳೆದುವು. ರಾಜನು ಭಕ್ತಿಯಿಂದ ಮನಸ್ಸನ್ನು ಚಲಿಸದಂತೆ ಮಾಡಿಕೊಂಡು ಮುಂದಿದ್ದಾನೆ. ಆ ರಾಜನನ್ನು ಕುರಿತು ಎಲೈ ರಾಜನೇ, ಏತಕ್ಕೋಸ್ಕರ ಕಷ್ಟಪಡುತ್ತೀಯೆ? ನಾನು ಬ್ರಾಹ್ಮಣ ಆಚಾರವನ್ನು ಬಿಟ್ಟಿದ್ದೇನೆ. ನನಗೆ ಬ್ರಾಹ್ಮಣ್ಯವೇ ಇಲ್ಲ. ಸುರೆ, ಮಾಂಸ ಇವುಗಳಲ್ಲಿ ಆಸಕ್ತನಾಗಿ ಯಾವಾಗಲೂ ಹೆಂಗಸರಲ್ಲಿ ಮೋಹಿತನಾಗಿಯೇ ಇದ್ದೇನೆ. ವರ ಕೊಡಲು ನನಗೆ ಶಕ್ತಿಯಿಲ್ಲ. ಮತ್ತೊಬ್ಬ ಬ್ರಾಹ್ಮಣನನ್ನು ಅನುಸರಣೆಮಾಡು. ಎನ್ನಲು

೧೧೫. ಪೂಜ್ಯರೇ! ತಮ್ಮಂತಹ ಬ್ರಾಹ್ಮಣೋತ್ತಮರೇ ಇಲ್ಲ. ನೀನು ಸರ್ವಕಾಮಗಳನ್ನೂ ಕೊಡುತ್ತೀಯೆ. ಮೂರು ಲೋಕಕ್ಕೂ ಪರಮೇಶ್ವರನಾಗಿದ್ದೀಯೆ.

ಅತ್ರಿವಂಶೇ ಮಹಾಭಾಗ ಗೋವಿಂದಸ್ತ್ವಂ ಸುರೋತ್ತಮ ।
ಬ್ರಾಹ್ಮಣಸ್ಯೈವ ರೂಪೇಣ ಭವಾನ್ಸ್ವೈ ಗರುಡಧ್ವಜಃ ॥ ೧೧೬ ॥

ನಮೋಽಸ್ತು ದೇವದೇವೇಶ ನಮೋಽಸ್ತು ಪರಮೇಶ್ವರ ।
ತ್ವಾಮಹಂ ಶರಣಂ ಪ್ರಾಪ್ತಃ ಶರಣಾಗತವತ್ಸಲ ॥ ೧೧೭ ॥

ಉದ್ಧರಸ್ವ ಹೃಷೀಕೇಶ ಮಾಯಾಂ ಕೃತ್ವಾ ಪ್ರತಿಷ್ಠಸಿ ।
ವಿಶ್ವಸ್ಥಾನಾಂ ಪ್ರಜಾನಾಂ ಚ ವಿದ್ವಾಂಸಂ ವಿಶ್ವನಾಯಕಂ ॥ ೧೧೮ ॥

ಜಾನಾಮ್ಯಹಂ ಜಗನ್ನಾಥಂ ಭವಂತಂ ಮಧುಸೂದನಂ ।
ಮಾಂ ರಕ್ಷ ಶರಣಂ ಪ್ರಾಪ್ತಂ ವಿಶ್ವರೂಪ ನಮೋಽಸ್ತು ತೇ ॥ ೧೧೯ ॥

॥ ಕುಂಜಲ ಉವಾಚ ॥

ಗತೇ ಬಹುತಿಥೇ ಕಾಲೇ ದತ್ತಾತ್ರೇಯೋ ನೃಪೋತ್ತಮಂ ।
ಉವಾಚ ಮತ್ತರೂಪೇಣ ಕುರು ತ್ವಂ ವಚನಂ ಮಮ ॥ ೧೨೦ ॥

---

೧೧೬. ಅತ್ರಿವಂಶದಲ್ಲಿ ದೇವದೇವನಾದ ಗರುಡಧ್ವಜನು ಆದ ಗೋವಿಂದನು ಈ ಬ್ರಾಹ್ಮಣ ರೂಪದಿಂದ ಹುಟ್ಟಿದ್ದಾನೆ.

೧೧೭. ದೇವದೇವೇಶನೇ, ನಿನಗೆ ನಮಸ್ಕಾರವು. ಪರಮೇಶ್ವರನೇ, ನಿನಗೆ ನಮಸ್ಕಾರ. ಎಲೈ ಶರಣಾಗತವತ್ಸಲನೇ, ನಿನ್ನನ್ನು ಮರೆಹೊಕ್ಕಿದ್ದೇನೆ. ನೀನು ಮಾಯೆಯನ್ನು ಹೊಂದಿಕೊಂಡು ಇದ್ದೀಯೆ. ಎಲೈ ಹೃಷೀಕೇಶನೇ, ನನ್ನನ್ನು ಉದ್ಧರಿಸು.

೧೧೮-೧೧೯. ನೀನು ಪ್ರಪಂಚದಲ್ಲಿರುವ ಪ್ರಜೆಗಳೆಲ್ಲೆಲ್ಲಾ ಬುದ್ಧಿವಂತನೆಂದೂ, ಪ್ರಪಂಚಕ್ಕೆ ಒಡೆಯನೆಂದೂ. ಜಗನ್ನಾಥನಾದ ಮಧುಸೂದನನೆಂದೂ, ತಿಳಿದಿದ್ದೇನೆ. ಮರೆಹೊಕ್ಕಿರುವ ನನ್ನನ್ನು ರಕ್ಷಿಸು. ಎಲೈ ವಿಶ್ವರೂಪನೇ, ನಿನಗೆ ನಮಸ್ಕಾರವು, ಎಂದು ಸ್ತೋತ್ರ ಮಾಡಿದನು.

೧೨೦. ಕುಂಜಲನು ಹೇಳಿದನು:—ಬಹಳ ದಿನಗಳಾದ ಮೇಲೆ ಆ ದತ್ತಾತ್ರೇಯನು ನಾನು ಹೇಳಿದಂತೆ, ಮಾಡು ಎಂದು ಮತ್ತರೂಪದಿಂದಲೇ ಹೇಳಿದನು.

ಕಪಾಲೇನ ಸುರಾಂ ದೇಹಿ ಬಹುಲಂ ಮಾಂಸಭೋಜನಂ ।
ಏವಮಾಕರ್ಣ್ಯ ತದ್ವಾಕ್ಯಂ ಸ ಚಾಯುಃ ಪೃಥಿವೀಪತಿಃ ॥ ೧೨೧ ॥

ಉತ್ಸುಕಸ್ತು ಕಪಾಲೇನ ಸುರಾಮಾಹೃತ್ಯ ವೇಗವಾನ್ ।
ಪಲಂ ಸುವಿಪುಲಂ ಚೈವ ಛಿತ್ವಾ ಹಸ್ತೇನ ಸತ್ವರಂ ॥ ೧೨೨ ॥

ನೃಪೇಂದ್ರಃ ಪ್ರದದೌ ತಸ್ಮೈ ದತ್ತಾತ್ರೇಯಾಯ ಪುತ್ರಕ ।
ಅಥಪ್ರಸನ್ನಚೇತಾಶ್ಚ ಸಂಜಾತೋ ಮುನಿಪುಂಗವಃ ॥ ೧೨೩ ॥

ದೃಷ್ಟ್ವಾ ಭಕ್ತಿಂ ಪ್ರಭಾವಂ ಚ ಗುರುಶುಶ್ರೂಷಣಂ ತಥಾ ।
ಸಮುವಾಚ ನೃಪೇಂದ್ರಂ ತಮಾಯುಂ ಪ್ರಣತಮಾನಸಂ ॥ ೧೨೪ ॥

ವರಂ ವರಯ ಭದ್ರಂ ತೇ ದುರ್ಲಭಂ ಭುವಿ ಭೂಪತೇ ।
ಸರ್ವಮೇವ ಪ್ರದಾಸ್ಯಾಮಿ ಯಂ ಯಮಿಚ್ಛಸಿ ಸಾಂಪ್ರತಂ ॥ ೧೨೫ ॥

॥ ರಾಜೋವಾಚ ॥

ಭವಾನ್ದಾತಾ ವರಂ ಸತ್ಯಮಿಚ್ಛಯಾ ಮುನಿಸತ್ತಮ ।
ಪುತ್ರಂ ದೇಹಿ ಗುಣೋಪೇತಂ ಸರ್ವಜ್ಞಂ ಗುಣಸಂಯುತಂ ॥ ೧೨೬ ॥

---

೧೨೧-೧೨೩. ಕಪಾಲದಲ್ಲಿ ಮದ್ಯವನ್ನು ತುಂಬಿಕೊಂಡು ಹೆಚ್ಚಾಗಿ ಮಾಂಸವನ್ನು ಕೊಡು ಎಂದನು. ರಾಜನಾದ ಆಯುವು ಆ ಮಾತನ್ನು ಕೇಳಿ ಜಾಗ್ರತೆಯಾಗಿ ಕಪಾಲದಲ್ಲಿ ಹೆಂಡವನ್ನು ಕೊಟ್ಟು, ತನ್ನ ಕೈಯಿಂದಲೇ ಬೇಕಾದಷ್ಟು ಮಾಂಸವನ್ನು ಕತ್ತರಿಸಿ ಆ ದತ್ತಾತ್ರೇಯನಿಗೆ ಕೊಟ್ಟನು. ಆಮೇಲೆ ಆ ಋಷಿಯು ಅವನಿಗೆ ಪ್ರಸನ್ನನಾದನು.

೧೨೪. ಆಗ ಋಷಿಯು ಅವನ ಶಕ್ತಿಯನ್ನೂ, ಗುರು ಶುಶ್ರೂಷೆಯನ್ನೂ ನೋಡಿ ನಮ್ರನಾಗಿರುವ ಆ ಆಯುವನ್ನು ಕುರಿತು ಇಂತೆಂದನು.

೧೨೫. ಎಲ್ಲೈ ದೊರೆಯೇ, ಪ್ರಪಂಚದಲ್ಲಿ ದುರ್ಲಭವಾದ ವರಗಳನ್ನಾದರೂ ಕೇಳು. ನೀನು ಈಗ ಯಾವ ಯಾವ ವರವನ್ನು ಕೇಳುತ್ತೀಯೋ ಅವನ್ನೆಲ್ಲಾ ಕೊಡುತ್ತೇನೆ.

೧೨೬. ರಾಜನು ಹೇಳಿದನು :—ನೀನು ನಿನ್ನ ಇಚ್ಛೆಯಿಂದ ನಿಶ್ಚಯವಾಗಿಯೂ ವರವನ್ನು ಕೊಡಬೇಕೆಂದು ಮನಸ್ಸು ಮಾಡಿದ್ದರೆ ಗುಣಿಯೂ, ಸರ್ವಜ್ಞನೂ ಆದ ಮಗನನ್ನು ಕೊಡು.

ದೇವತೀರ್ಥಾರ್ಚನಕರಮಜೇಯಂ ದೇವದಾನವೈಃ ।
ರಾಕ್ಷಸೈರ್ದಾನವೈರ್ಘೋರೈಃ ಕ್ಷತ್ರಿಯೈಃ ಕಿನ್ನರೈಸ್ತಥಾ ॥ ೧೨೭ ॥

ದೇವಬ್ರಾಹ್ಮಣಸಂಭಕ್ತಃ ಪ್ರಜಾಪಾಲೋ ವಿಶೇಷತಃ ।
ಯಜ್ವಾ ದೀನಗತಿಶ್ಶೂರಃ ಶರಣಾಗತವತ್ಸಲಃ ॥ ೧೨೮ ॥

ದಾತಾ ಭೋಕ್ತಾ ಮಹಾತ್ಮಾ ಚ ವೇದಶಾಸ್ತ್ರೇಷು ಪಾರಗಃ ।
ಧನುರ್ವೇದೇಷು ನಿಷ್ಣಾತಃ ಶಾಸ್ತ್ರೇಷು ಚ ಪರಾಯಣಃ ॥ ೧೨೯ ॥

ಅನಾಹತಮತಿರ್ಧೀರಃ ಸಂಗ್ರಾಮೇಷ್ವಪರಾಜಿತಃ ।
ಏವಂಗುಣಃ ಸ್ವರೂಪಶ್ಚ ಯಸ್ಮಾದ್ವಂಶಃ ಪ್ರಜಾಯತೇ ॥ ೧೩೦ ॥

ದೇಹಿ ಪುತ್ರಂ ಮಹಾಭಾಗ ಮಮ ವಂಶಪ್ರಭಾಕರಂ ।
ಯದಿ ವಾಪಿ ವರೋ ದೇಯಸ್ತ್ವಯಾ ಮೇ ಸ್ವೇಚ್ಛಯಾ ವಿಭೋ
॥ ೧೩೧ ॥

---

೧೨೭. ದೇವತೆಗಳನ್ನು ಪೂಜಿಸಬೇಕು. ತೀರ್ಥಗಳನ್ನು ಸೇವಿಸಬೇಕು. ದೇವದಾನವರಿಂದ ಅಜೇಯನಾಗಿರಬೇಕು. ರಾಕ್ಷಸರು, ದಾನವರು, ಕ್ಷತ್ರಿಯರು, ಕಿನ್ನರರು, ಎಲ್ಲರಿಗೂ ಅಜೇಯನಾಗಿರಬೇಕು.

೧೨೮-೧೩೦. ದೇವಬ್ರಾಹ್ಮಣರಲ್ಲಿ ಭಕ್ತನಾಗಿರಬೇಕು. ಪ್ರಜೆಗಳನ್ನು ಸರಿಯಾಗಿ ಪಾಲಿಸಬೇಕು. ಯಾಗಮಾಡುವವನಾಗಿರಬೇಕು. ಬಡವರನ್ನು ರಕ್ಷಿಸಬೇಕು. ಶೂರನೂ, ಶರಣಾಗತವತ್ಸಲನೂ ಆಗಿರಬೇಕು. ದಾನಮಾಡಬೇಕು. ಭೋಗಿಸಬೇಕು. ಮಹಾತ್ಮನೂ ವೇದಪಾರಗನೂ ಆಗಿರಬೇಕು. ಧನುರ್ವೇದದಲ್ಲಿ ದಕ್ಷನಾಗಿರಬೇಕು. ಶಾಸ್ತ್ರಗಳಲ್ಲಿ ಆಸಕ್ತನಾಗಿರಬೇಕು. ಬುದ್ಧಿ ಚೆನ್ನಾಗಿರಬೇಕು. ಯುದ್ಧದಲ್ಲಿ ಸೋಲಬಾರದು. ರೂಪವಂತನಾಗಿರಬೇಕು. ಅವನಿಂದ ವಂಶೋದ್ಧಾರವಾಗಬೇಕು. ಈ ರೀತಿಯಾದ ಮಗನನ್ನು ಕೊಡು.

೧೩೧. ನೀನು ನಿನ್ನ ಇಚ್ಛೆಯಿಂದ ವರವನ್ನು ಕೊಡಬೇಕೆಂದಿದ್ದರೆ ನನ್ನ ವಂಶಕ್ಕೆ ಸೂರ್ಯನಂತಿರುವ ಈ ರೀತಿ ಮಗನನ್ನು ಕೊಡು ಎಂದನು.

॥ ದತ್ತಾತ್ರೇಯ ಉವಾಚ ॥

ಏವಮಸ್ತು ಮಹಾರಾಜ ತವ ಪುತ್ರೋ ಭವಿಷ್ಯತಿ ।
ತವ ವಂಶಕರಃ ಪುಣ್ಯಃ ಸರ್ವಜೀವದಯಾಪರಃ ॥ ೧೩೨ ॥

ಏಭಿರ್ಗುಣೈಸ್ತು ಸಂಯುಕ್ತೋ ವೈಷ್ಣವಾಂಶೇನ ಸಂಯುತಃ ।
ರಾಜಾ ಚ ಸಾರ್ವಭೌಮಶ್ಚ ಇಂದ್ರತುಲ್ಯೋ ನರೇಶ್ವರಃ ॥ ೧೩೩ ॥

ಏವಂ ಖಲು ವರಂ ದತ್ವಾ ದದೌ ಫಲಮನುತ್ತಮಂ ।
ನೃಪಮಾಹ ಮಹಾಯೋಗೀ ಸ್ವಭಾರ್ಯಾಯೈ ಪ್ರದೀಯತಾಂ ॥ ೧೩೪ ॥

ಏವಮುಕ್ತ್ವಾ ವಿಸೃಜ್ಯೈವ ತಮಾಯುಂ ಪೃಥಿವೀಪತಿಂ ।
ಆಶೀರ್ಭಿರಭಿನಂದ್ಯೈವ ಹ್ಯಂತರ್ಧಾನಂ ಚಕಾರ ಹ ॥ ೧೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ತ್ರ್ಯಧಿಕಶತತಮೋಽಧ್ಯಾಯಃ

---

೧೩೨-೧೩೩. ದತ್ತಾತ್ರೇಯನು ಹೇಳಿದನು :—ಎಲೈ ದೊರೆಯೇ! ಈ ರೀತಿಯಾಗಿಯೇ ನಿನ್ನ ವಂಶೋದ್ಧಾರಕನಾದ, ದಯಾವಂತನಾದ, ನೀನು ಹೇಳಿದ ಗುಣಗಳುಳ್ಳ, ವಿಷ್ಣುವಿನ ಅಂಶದಿಂದ ಕೂಡಿದ, ರಾಜನೂ ಚಕ್ರವರ್ತಿಯೂ ಆಗುವ, ಇಂದ್ರನಿಗೆ ಸಮನಾದ ಮಗನು ಹುಟ್ಟುತ್ತಾನೆ.

೧೩೪. ಈ ರೀತಿ ವರವನ್ನು ಕೊಟ್ಟು ಒಂದು ಹಣ್ಣನ್ನು ನಿನ್ನ ಹೆಂಡತಿಗೆ ಕೊಡೆಂದು ಕೊಟ್ಟನು.

೧೩೫. ಹೀಗೆಂದು ಹೇಳಿ ಅವನನ್ನು ಅನೇಕ ಆಶೀರ್ವಾದಗಳಿಂದ ಗೌರವಿಸಿ ಋಷಿಯು ಅಂತರ್ಧಾನನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುರಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಗತೇ ತಸ್ಮಿನ್ಮಹಾಭಾಗೇ ದತ್ತಾತ್ರೇಯೇ ಮಹಾಮುನೌ ।
ಆಜಗಾಮ ಮಹಾರಾಜಃ ಶಕ್ರಪ್ರಸ್ಥಪುರಂ ಪ್ರತಿ ॥ ೧ ॥

ಇಂದುಮತ್ಯಾ ಗೃಹಂ ಹೃಷ್ಟಃ ಪ್ರವಿವೇಶ ಶ್ರಿಯಾನ್ವಿತಂ ।
ಸರ್ವಕಾಮಸಮೃದ್ಧಾರ್ಥಂ ಕುಬೇರಭವನೋಪಮಂ ॥ ೨ ॥

ಚಕ್ರೇ ರಾಜ್ಯಂ ಸ ಮೇಧಾವೀ ಯಥಾ ಸ್ವರ್ಗಂ ಪುರಂದರಃ ।
ಸ್ವರ್ಭಾನುಸುತಯಾ ಸಾರ್ಧಂ ಇಂದುಮತ್ಯಾ ದ್ವಿಜೋತ್ತಮ ॥ ೩ ॥

---

## ನೂರ ನಾಲ್ಕನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ದತ್ತಾತ್ರೇಯ ಋಷಿಯು ಹೊರಟು ಹೋಗಲು, ಆಯುವು ಇಂದ್ರಪ್ರಸ್ಥಪುರಕ್ಕೆ ಬಂದನು.

೨. ಸಂತೋಷಗೊಂಡು ಇಂದುಮತಿಯೆಂಬ ತನ್ನ ಹೆಂಡತಿಯೊಡನೆ ಕುಬೇರನ ಮನೆಯಂತಿರುವ, ಎಲ್ಲಾ ಭೋಗ್ಯಪದಾರ್ಥಗಳಿಂದಲೂ ಕೂಡಿರುವ ಮನೆಯನ್ನು ಹೊಕ್ಕನು.

೩. ಬುದ್ಧಿವಂತನಾದ ಆತನು ಸ್ವರ್ಗವನ್ನು ಆಳುವ ಇಂದ್ರನಂತೆ ರಾಹುವಿನ ಮಗಳಾದ ಇಂದುಮತಿಯೊಡನೆ ರಾಜ್ಯವಾಳುತ್ತಿದ್ದನು.

ಸಾ ಚ ಇಂದುಮತೀ ರಾಜ್ಞೀ ಗರ್ಭಮಾಪ ಫಲಾಶನಾತ್ ।
ದತ್ತಾತ್ರೇಯಸ್ಯ ವಚನಾದ್ದಿವ್ಯತೇಜಸ್ಸಮನ್ವಿತಂ ॥ ೪ ॥

ಇಂದುಮತ್ಯಾ ಮಹಾಭಾಗ ಸ್ವಪ್ನಂ ದೃಷ್ಟಮನುತ್ತಮಂ ।
ರಾತ್ರೌ ದೇವಾನ್ವಿತಂ ತಾವದ್ಬಹುಮಂಗಳದಾಯಕಂ ॥ ೫ ॥

ಗೃಹಾಂತರೇ ವಿಶಂತಂ ಚ ಪುರುಷಂ ಸೂರ್ಯಸನ್ನಿಭಂ ।
ಮುಕ್ತಾಫಲಾನ್ವಿತಂ ವಿಪ್ರಂ ಶ್ವೇತವಸ್ತ್ರೇಣ ಶೋಭಿತಂ ॥ ೬ ॥

ಶ್ವೇತಪುಷ್ಪಕೃತಾಮಾಲಾ ತಸ್ಯ ಕಂಠೇ ವಿರಾಜತೇ ।
ಸರ್ವಾಭರಣಶೋಭಾಂಗೋ ದಿವ್ಯಗಂಧಾನುಲೇಪನಃ ॥ ೭ ॥

ಚತುರ್ಭುಜಃ ಶಂಖಪಾಣಿರ್ಗದಾಚಕ್ರಾಸಿಧಾರಕಃ ।
ಛತ್ರೇಣ ಧ್ರಿಯಮಾಣೇನ ಚಂದ್ರಬಿಂಬಾನುಕಾರಿಣಾ ॥ ೮ ॥

ಶೋಭಮಾನೋ ಮಹಾತೇಜಾ ದಿವ್ಯಾಭರಣಭೂಷಿತಃ ।
ಹಾರಕಂಕಣಕೇಯೂರೈರ್ನೂಪುರಾಭ್ಯಾಂ ವಿರಾಜಿತಃ ॥ ೯ ॥

---

೪. ದತ್ತಾತ್ರೇಯನ ಮಾತಿನಂತೆ ದಿವ್ಯತೇಜಸ್ಸಿನಿಂದ ಕೂಡಿದ ಗರ್ಭವನ್ನು ಆ ಹಣ್ಣು ತಿಂದುದರಿಂದ ಹೊಂದಿದಳು.

೫-೬. ಇಂದುಮತಿಯು ರಾತ್ರಿಯಲ್ಲಿ ಒಂದು ಸ್ವಪ್ನವನ್ನು ನೋಡಿದಳು. ಅದರಲ್ಲಿ ದೇವತೆಗಳಿಂದ ಕೂಡಿದ, ಮಂಗಳಪ್ರದನಾದ, ಸೂರ್ಯನಂತಿರುವ, ಮುತ್ತಿನ ಹಾರದಿಂದ ಕೂಡಿದ, ಬಿಳಿಯ ಬಟ್ಟೆಯನ್ನು ಹೊದ್ದಿರುವ, ಒಬ್ಬ ಮನುಷ್ಯನು ಮನೆಯೊಳಕ್ಕೆ ಬರುತ್ತಿರುವುದನ್ನು ಕಂಡಳು.

೭-೯. ಬಿಳಿಯ ಹೂವಿನ ಮಾಲೆಯು ಅವನ ಕತ್ತಿನಲ್ಲಿ ಪ್ರಕಾಶಿಸುತ್ತಿದೆ. ಎಲ್ಲಾ ಆಭರಣಗಳಿಂದ ಭೂಷಿತನಾದ, ಗಂಧವನ್ನು ಪೂಸಿಕೊಂಡಿರುವ, ಚತುರ್ಭುಜನಾದ, ಶಂಖವನ್ನು ಹಿಡಿದಿರುವ, ಗದೆ ಚಕ್ರಗಳನ್ನು ಧರಿಸಿರುವ, ಚಂದ್ರಬಿಂಬದಂತಿರುವ, ಛತ್ರಿಯನ್ನು ಹಿಡಿದಿರುವ, ದಿವ್ಯಾಭರಣಗಳನ್ನು ತೊಟ್ಟಿರುವ, ಹಾರ ಕೇಯೂರಗಳಿಂದಲೂ, ನೂಪುರಗಳಿಂದಲೂ, ಪ್ರಕಾಶಮಾನನಾದ ಸ್ವಾಮಿಯನ್ನು ನೋಡಿದಳು.

ಚಂದ್ರಬಿಂಬಾನುಕಾರಾಭ್ಯಾಂ ಕುಂಡಲಾಭ್ಯಾಂ ವಿರಾಜಿತಃ ।
ಏವಂವಿಧೋ ಮಹಾಪ್ರಾಜ್ಞಃ ಕಶ್ಚಿತ್ಪುಮಾನ್ಸಮಾಗತಃ ॥ ೧೦ ॥

ಇಂದುಮತೀಂ ಸಮಾಹೂಯ ಸ್ನಾಪಿತಾ ಪಯಸಾ ತದಾ ।
ಶಂಖೇನ ಕ್ಷೀರಪೂರ್ಣೇನ ಹಂಸವರ್ಣೇನ ಭಾಮಿನೀಂ ॥ ೧೧ ॥

ರತ್ನಕಾಂಚನಬದ್ಧೇನ ಸಂಪೂರ್ಣೇನ ಪುನಃಪುನಃ ।
ಶ್ವೇತಂ ನಾಗಂ ಸುರೂಪಂ ಚ ಸಹಸ್ರಶಿರಸಂ ವರಂ ॥ ೧೨ ॥

ಮಹಾಮಣಿಸುಸಂದೀಪ್ತಂ ಜ್ವಾಲಾಮಾಲಾಸಮಾಕುಲಂ ।
ಕ್ಷಿಪ್ತಂ ತೇನ ಮುಖಪ್ರಾಸ್ತೇ ದತ್ತಂ ಮುಕ್ತಾಫಲಂ ಪುನಃ ॥ ೧೩ ॥

ಕಂಠೇ ತಸ್ಯಾಸ್ಸುದೇವೇಶ ಇಂದುಮತ್ಯಾ ಮಹಾಯಶಾಃ ।
ಹಸ್ತೇ ಪದ್ಮಂ ತತೋ ದತ್ವಾ ಸ್ವಸ್ಥಾನಂ ಪ್ರತಿ ಜಗ್ಮಿವಾನ್ ॥ ೧೪ ॥

ಏವಂವಿಧಂ ಮಹಾಸ್ವಪ್ನಂ ಸಾ ತು ದೃಷ್ಟ್ವಾ ಸುರೋತ್ತಮ ।
ಸಮಾಚಷ್ಟೇ ಮಹಾಭಾಗಾ ತಮಾಯುಂ ಭೂಪತಿಂ ಪತಿಂ ॥ ೧೫ ॥

---

೧೦. ಚಂದ್ರಬಿಂಬದಂತಿರುವ ಕುಂಡಲಗಳನ್ನು ತೊಟ್ಟಿರುವ ಒಬ್ಬ ಮನುಷ್ಯನು ಬಂದುದನ್ನು ನೋಡಿದಳು.

೧೧. ಅವನು ಇಂದುಮತಿಯನ್ನು ಕರೆದು, ರತ್ನ ಸ್ವರ್ಣಗಳಿಂದ ಕೂಡಿರುವ, ಹಾಲಿನಿಂದ ತುಂಬಿರುವ ಶಂಖದಿಂದ ಬೀಳುವ ಹಾಲಿನಿಂದ ಅವಳಿಗೆ ಸ್ನಾನ ಮಾಡಿಸಿದನು.

೧೨-೧೩. ಸಾವಿರ ಹೆಡೆಗಳಿಂದ ಕೂಡಿದ ಆದಿಶೇಷನನ್ನು ಆತನು ಬಾಯೊಳಕ್ಕೆ ಹಾಕಿದನು.

೧೪. ಆಕೆಯ ಕತ್ತಿಗೆ ಮುತ್ತಿನಹಾರವನ್ನು ಹಾಕಿದನು. ಕೈಗೆ ಕಮಲವನ್ನು ಕೊಟ್ಟು ತನ್ನ ಜಾಗಕ್ಕೆ ಹೊರಟುಹೋದನು.

೧೫. ಈ ರೀತಿಯಾದ ಉತ್ತಮವಾದ ಸ್ವಪ್ನವನ್ನು ಆಕೆಯು ಕಂಡು ತನ್ನ ಪತಿಯಾದ ಆಯುವಿಗೆ ಅದೆಲ್ಲವನ್ನೂ ತಿಳಿಸಿದಳು.

ಸಮಾಕರ್ಣ್ಯ ಮಹಾರಾಜಶ್ಚಿಂತಯಾಮಾಸ ವೈ ಪುನಃ ।
ಸಮಾಹೂಯ ಗುರುಂ ಪಶ್ಚಾತ್ಕಥಿತಂ ಸ್ವಪ್ನಮುತ್ತಮಂ ।
ಶೌನಕಂ ಸುಮಹಾಭಾಗಂ ಸರ್ವಜ್ಞಂ ಜ್ಞಾನಿನಾಂ ವರಂ ॥ ೧೬ ॥

॥ ರಾಜೋವಾಚ ॥

ಅದ್ಯ ರಾತ್ರೌ ಮಹಾಭಾಗ ಮಮ ಪತ್ನ್ಯಾ ದ್ವಿಜೋತ್ತಮ ।
ವಿಪ್ರೋ ಗೇಹಂ ವಿಶನ್ ದೃಷ್ಟಃ ಕಿಮಿದಂ ಸ್ವಪ್ನಕಾರಣಂ ॥ ೧೭ ॥

॥ ಶೌನಕ ಉವಾಚ ॥

ವರೋ ದತ್ತಸ್ತು ತೇ ಪೂರ್ವಂ ದತ್ತಾತ್ರೇಯೇಣ ಧೀಮತಾ ।
ಆದಿಷ್ಟಂ ಚ ಫಲಂ ರಾಜ್ಞ್ಯಾಂ ಸುಗುಣಂ ಸುತಹೇತವೇ ॥ ೧೮ ॥

ತತ್ಫಲಂ ಕಿಂ ಕೃತಂ ರಾಜನ್ ಕಸ್ಯೈ ತ್ವಯಾ ನಿಯೋಜಿತಂ ।
ಸ್ವಭಾರ್ಯಾಯೈ ಮಯಾ ದತ್ತಮಿತಿ ರಾಜ್ಞೋದಿತಂ ವಚಃ ॥ ೧೯ ॥

ಶ್ರುತ್ವೋವಾಚ ಮಹಾಪ್ರಾಜ್ಞಃ ಶೌನಕೋ ದ್ವಿಜಸತ್ತಮಃ ।
ವೃತ್ತಾಂತಂ ಸ್ವಪ್ನಭಾವೇನ ತವ ಗೇಹೇ ಸುತೋತ್ತಮಃ ॥ ೨೦ ॥

---

೧೬. ರಾಜನು ಅದನ್ನು ಕೇಳಿ ಯೋಚಿಸಿದನು. ಮತ್ತು ಸರ್ವಜ್ಞನೂ, ಜ್ಞಾನಿಯೂ ಆದ ಶೌನಕನೆಂಬ ತನ್ನ ಗುರುವನ್ನು ಕರೆದು ಆತನಿಗೆ ಎಲ್ಲವನ್ನೂ ಹೇಳಿದನು.

೧೭. ರಾಜನು ಹೇಳಿದನು:—ಎಲೈ ಮಹಾತ್ಮನೇ! ಈ ದಿನ ರಾತ್ರಿ ಒಬ್ಬ ಬ್ರಾಹ್ಮಣನು ನನ್ನ ಮನೆಗೆ ಬಂದುದನ್ನು ನನ್ನ ಹೆಂಡತಿಯು ಕನಸಿನಲ್ಲಿ ಕಂಡಳು.

೧೮. ಶೌನಕನು ಹೇಳಿದನು:—ದತ್ತಾತ್ರೇಯನು ನಿನಗೆ ಪೂರ್ವದಲ್ಲಿ ವರವನ್ನು ಕೊಟ್ಟಿದ್ದನು. ಮಗುವಾಗುವುದಕ್ಕೋಸ್ಕರ ಆ ದತ್ತಾತ್ರೇಯನು ನಿನ್ನ ಹೆಂಡತಿಗೆ ಕೊಡೆಂದು ಒಂದು ಹಣ್ಣನ್ನು ಕೊಟ್ಟಿದ್ದನು.

೧೯. ಆ ಹಣ್ಣನ್ನು ಯಾರಿಗೆ ಕೊಟ್ಟೆ? ಎಂದು ಕೇಳಲು ರಾಜನು ತನ್ನ ಹೆಂಡತಿಗೆ ಕೊಟ್ಟೆನೆಂದನು.

೨೦. ಅದನ್ನು ಕೇಳಿ ಸ್ವಪ್ನದ ವಿಷಯವನ್ನು ತಿಳಿದು ಆ ಶೌನಕನು ರಾಜನೇ, ನಿನ್ನ ಮನೆಯಲ್ಲಿ ವೈಷ್ಣವಾಂಶದಿಂದ ಕೂಡಿದ ಮಗನು ಹುಟ್ಟುತ್ತಾನೆ ಎಂದನು.

ವೈಷ್ಣವಾಂಶೇನ ಸಂಯುಕ್ತೋ ಭವಿಷ್ಯತಿ ನ ಸಂಶಯಃ ।
ಸ್ವಪ್ನಸ್ಯ ಕಾರಣಂ ರಾಜನ್ನೇತತ್ತೇ ಕಥಿತಂ ಮಯಾ ॥ ೨೧ ॥

ಇಂದ್ರೋಪೇಂದ್ರಸಮೋ ರಾಜಂಸ್ತವ ಪುತ್ರೋ ಭವಿಷ್ಯತಿ ।
ಪುತ್ರಸ್ತೇ ಸರ್ವಧರ್ಮಾತ್ಮಾ ಸೋಮವಂಶಸ್ಯ ಭೂಷಣಃ ॥ ೨೨ ॥

ಧನುರ್ವೇದೇ ಸ ವೇದೇಚ ಸಗುಣೋಽಸೌ ಭವಿಷ್ಯತಿ ।
ಏವಮುಕ್ತ್ವಾ ಸ ರಾಜಾನಂ ಶೌನಕೋ ಗತವಾನ್ ಗೃಹಂ ॥ ೨೩ ॥

ಹರ್ಷೇಣ ಮಹತಾವಿಷ್ಟೋ ರಾಜಾಭೂತ್ಸಹ ಭಾರ್ಯಯಾ ॥ ೨೪ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಚತುರಧಿಕಶತತಮೋಽಧ್ಯಾಯಃ**



---

೨೧-೨೨. ಸ್ವಪ್ನದ ಕಾರಣವೇನೆಂದರೆ ಇಂದ್ರ, ವಿಷ್ಣುಗಳಿಗೆ ಸಮನಾದ ಮಗನು ನಿನಗೆ ಹುಟ್ಟುವನು. ಆತನು ಧರ್ಮಾತ್ಮನಾಗುವನು. ಚಂದ್ರವಂಶಕ್ಕೆ ಭೂಷಣನೂ ಆಗುವನು. ಧನುರ್ವೇದದೊಡನೆ ಕೂಡಿದ ವೇದಗಳಲ್ಲಿ ನಿಷ್ಣಾತನಾಗುವನು.-

೨೩-೨೪. ಹೀಗೆಂದು ಹೇಳಿ ಶೌನಕನು ಮನೆಗೆ ಹೋದನು. ರಾಜನೂ, ರಾಣಿಯೂ ಬಹು ಸಂತೋಷಗೊಂಡರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ನೂರ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚೋತ್ತರಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಗತಾ ಸಾ ನಂದನವನಂ ಸಖೀಭಿಃ ಸಹ ಕ್ರೀಡಿತುಂ ।
ತತ್ರೋಕ್ತಂ ಕೇನಚಿದ್ವಾಕ್ಯಮಸ್ಯಾ ಗರ್ಭೇ ಮಹಾಬಲಃ ॥ ೧ ॥

ಭವಿಷ್ಯತಿ ಸುತಶ್ರೇಷ್ಠೋ ಹುಂಡಸ್ಯಾನ್ತಂ ಕರಿಷ್ಯತಿ ।
ಏವಂವಿಧಂ ಮಹದ್ವಾಕ್ಯಮಪ್ರಿಯಂ ದುಃಖದಾಯಕಂ ॥ ೨ ॥

ಸಮಾಕರ್ಣ್ಯ ಸಮಾಯಾತಾ ಪಿತುರಗ್ರೇ ನಿವೇದಿತುಂ ।
ಸಮಾಸೇನ ತಯಾ ತಸ್ಯ ಪುರತೋ ದುಃಖದಾಯಕಂ ॥ ೩ ॥

---

## ನೂರ ಐದನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಹೀಗಿರುತ್ತಿರಲು ಆಯುವಿನ ಪತ್ನಿಯಾದ ಇಂದುಮತಿಯು ಸಖಿಯರೊಡನೆ ನಂದನವನಕ್ಕೆ ಕ್ರೀಡೆಗೋಸ್ಕರ ಹೋದಳು. ಅಲ್ಲಿ ಒಬ್ಬ ಮಹಾತ್ಮನು ಈ ಇಂದುಮತಿಯನ್ನು ನೋಡಿ ಈಕೆಯ ಹೊಟ್ಟೆಯಲ್ಲಿ ಒಬ್ಬ ಬಲಿಷ್ಠನು ಹುಟ್ಟುತ್ತಾನೆ. ಆ ಹುಡುಗನೇ ಹುಂಡನನ್ನು ಕೊಲ್ಲುತ್ತಾನೆಂದನು.

೨-೩. ಆ ಕಾಲದಲ್ಲಿ ಅವರಿದ್ದಲ್ಲಿಗೆ ಹುಂಡನ ಮಗಳೂ ಬಂದಿದ್ದಳು. ಆಕೆಯು ಈ ದುಃಖಕರವಾದ ಮಾತನ್ನು ತಂದೆಗೆ ಹೇಳಲು ಬಂದು ಸಂಕ್ಷೇಪವಾಗಿ ಅಲ್ಲಿ ನಡೆದ ವಿಷಯವೆಲ್ಲವನ್ನೂ ತಿಳಿಸಿದಳು. ಆ ಹುಂಡನೂ ಅದನ್ನು ಕೇಳಿ ಆಶ್ಚರ್ಯಗೊಂಡನು.

ಪಿತುರಗ್ರೇ ಜಗಾದಾಥ ಪಿತಾ ಶ್ರುತ್ವಾ ಚ ವಿಸ್ಮಿತಃ ।
ಶಾಪಮಶೋಕಸುಂದರ್ಯಾಃ ಸಸ್ಮಾರ ಚ ಪುರಾ ಕೃತಂ ॥ ೪ ॥

ಗರ್ಭಸ್ಯ ನಾಶನಾಯೈವ ಇಂದುಮತ್ಯಾಸ್ಸ ದಾನವಃ ।
ವಿವಿಕ್ತಮುದ್ಯಮಂ ಚಕ್ರೇ ಕಾಲಕೃಷ್ಟೋ ದುರಾತ್ಮವಾನ್ ॥ ೫ ॥

ಛಿದ್ರಾನ್ವೇಷೀ ತತೋ ಭೂತ್ವಾ ಚೇಂದುಮತ್ಯಾಶ್ಚ ನಿತ್ಯಶಃ ।
ಯದಾ ಪಶ್ಯತಿ ತಾಂ ರಾಜ್ಞೀಂ ರೂಪೌದಾರ್ಯಗುಣಾನ್ವಿತಾಂ ॥ ೬ ॥

ದಿವ್ಯೇನ ತೇಜಸಾ ಯುಕ್ತಾಂ ರಕ್ಷಿತಾಂ ವಿಷ್ಣುತೇಜಸಾ ।
ದಿವ್ಯತೇಜಸ್ಸಮಾಯುಕ್ತಾಂ ಸೂರ್ಯಬಿಂಬೋಪಮಾಂ ತು ತಾಂ ॥ ೭ ॥

ತಸ್ಯಾಃ ಪಾರ್ಶ್ವೇ ಮಹಾಭಾಗ ರಕ್ಷಣಾರ್ಥಂ ಸ್ಥಿತಃ ಸದಾ ।
ದುರಾತ್ಮಾ ದಾನವೋ ಹುಂಡಸ್ತಸ್ಯಾಶ್ಚ ಬಹು ದರ್ಶಯೇತ್ ॥ ೮ ॥

---

೪. ಪೂರ್ವದಲ್ಲಿ ತಾನು ಮಾಡಿದ ಕೆಟ್ಟ ಕೆಲಸವನ್ನೂ, ಅದಕ್ಕೆ ಅಶೋಕ ಸುಂದರಿಯು ಕೊಟ್ಟ ಶಾಪವನ್ನೂ ಸ್ಮರಿಸಿಕೊಂಡನು.

೫-೬. ಆ ಇಂದುಮುಖಿಯ ಗರ್ಭನಾಶಕ್ಕೋಸ್ಕರ ಆ ಹುಂಡನು ಯಮನಿಂದ ಎಳೆಯಲ್ಪಟ್ಟವನಾಗಿ ಗುಟ್ಟಾಗಿ ಉದ್ಯೋಗಮಾಡುತ್ತಿದ್ದನು. ಯಾವಾಗಲೂ ಇಂದುಮತಿಯಲ್ಲಿ ಹುಳುಕನ್ನು ಹುಡುಕುತ್ತಾ ಛಿದ್ರವನ್ನೇ ನೋಡುತ್ತಿದ್ದನು. ರೂಪ, ಉದಾರತೆ, ಮೊದಲಾದ ಗುಣಗಳಿಂದ ಕೂಡಿದ ಆಕೆಯನ್ನು ಇವನು ನೋಡಿದಾಗಲೆಲ್ಲಾ ಒಂದು ದಿವ್ಯವಾದ ವಿಷ್ಣುತೇಜಸ್ಸು ಆಕೆಯನ್ನು ಕಾಪಾಡುತ್ತಿತ್ತು.

೭. ದಿವ್ಯತೇಜಸ್ಸಿನಿಂದ ಕೂಡಿ ಸೂರ್ಯಬಿಂಬದಂತೆ ಆಕೆಯು ಪ್ರಕಾಶಿಸುತ್ತಿರುವಳು.

೮. ಹುಂಡನು ಇಂದುಮತಿಯ ಪಾರ್ಶ್ವದಲ್ಲಿ ಅಂಗರಕ್ಷಕನ ವೇಷದಲ್ಲಿ ನಿಂತನು. ಹಾಗೆ ನಿಂತ ಹುಂಡನು ಆ ಗರ್ಭಪಾತಕ್ಕೋಸ್ಕರ ಮಾಯೆಯಿಂದ ಅನೇಕವಾದ ಹೆದರಿಕೆಯ ರೂಪವನ್ನು ತಾಳಿ ಬಹಳವಾಗಿ ಹೆದರಿಸುತ್ತಿದ್ದನು.

**ನಾನಾವಿಧಾ ಭೀಷಿಕಾಶ್ಚ ಮಾಯಾವೀ ಮಾಯಯಾ ಸದಾ ।**
**ಗರ್ಭಸ್ಯ ತೇಜಸಾ ಚೈವ ರಕ್ಷಿತಾ ವಿಷ್ಣುತೇಜಸಾ ॥ ೯ ॥**

**ಭಯಂ ನ ಜಾಯತೇ ತಸ್ಯಾ ಮನಸ್ಯೇವ ಕದಾ ಪುನಃ ।**
**ನಿಷ್ಫಲೋ ದಾನವೋ ಜಾತ ಉದ್ಯಮಶ್ಚ ನಿರರ್ಥಕಃ ॥ ೧೦ ॥**

**ಮನಃ ಖಿನ್ನಂ ಬಭೂವಾಸ್ಯ ಹುಂಡಸ್ಯಾಪಿ ದುರಾತ್ಮನಃ ।**
**ಏವಂ ವರ್ಷಶತಂ ತಸ್ಯ ಪಶ್ಯಮಾನಸ್ಯ ವೈ ಗತಂ ॥ ೧೧ ॥**

**ಪ್ರಸೂತಾ ಸಾ ಹಿ ಪುತ್ರಂ ಚ ಧರ್ಮಾತ್ಮಾನಂ ಮಹಾಮತಿಂ ।**
**ರಾತ್ರೌ ಚೈವ ಸುತಶ್ರೇಷ್ಠ ತಸ್ಯಾಃ ಪುತ್ರೋ ವ್ಯಜಾಯತ ॥ ೧೨ ॥**

**ತೇಜಸ್ವೀ ವೀರಶೋಭಾಭಿರ್ಯಥಾ ಸೂರ್ಯೋ ನಭಸ್ತಲೇ ।**

**॥ ಸೂತ ಉವಾಚ ॥**

**ಅಥ ದಾಸೀ ಮಹಾದುಷ್ಟಾ ಕಾಚಿತ್ ಸೂತಿಗೃಹಾಗತಾ ।**
**ಅಶೌಚಾಚಾರಸಂಯುಕ್ತಾ ಮಹಾಮಂಗಳವಾದಿನೀ ॥ ೧೩ ॥**

---

೯. ಆಕೆಯ ಗರ್ಭದ ತೇಜಸ್ಸಿನಿಂದಲೂ, ವಿಷ್ಣುವಿನ ತೇಜಸ್ಸಿನಿಂದಲೂ, ಆಕೆಯು ರಕ್ಷಿಸಲ್ಪಡುತ್ತಿದ್ದಳು.

೧೦. ಈ ರಕ್ಷಣೆಯಿಂದ ಅವಳ ಮನಸ್ಸಿನಲ್ಲಿ ಒಂದುಸಾರಿಯೂ ಕೂಡ ಭಯವಾಗಲೇ ಇಲ್ಲ. ಆ ಹುಂಡನು ಫಲಹೀನನಾದನು. ಅವನ ಉದ್ಯೋಗವೆಲ್ಲವೂ ಪ್ರಯೋಜನವಿಲ್ಲದೇ ಹೋದುವು.

೧೧. ಈ ಹುಂಡನ ಮನಸ್ಸು ಖೇದಗೊಂಡಿತು. ಹೀಗೆಯೇ ದುಷ್ಕೃತ್ಯಗಳನ್ನು ಮಾಡುತ್ತಾ ಆ ಗರ್ಭಪತನವಾಗುವುದೆಂದು ನೋಡುತ್ತಿದ್ದಂತೆಯೇ ನೂರು ವರ್ಷಗಳು ಕಳೆದವು.

೧೨. ಹೀಗಿರಲು ಆ ಇಂದುಮತಿಯು ಧರ್ಮಾತ್ಮನೂ, ಜ್ಞಾನಿಯೂ, ಆದ ಗಂಡುಮಗುವನ್ನು ರಾತ್ರಿವೇಳೆಯಲ್ಲಿ ಹೆತ್ತಳು. ಆ ಮಗುವು-ಅಂತರಿಕ್ಷದಲ್ಲಿ ಸೂರ್ಯನು ಪ್ರಕಾಶಿಸುವಂತೆ ಪ್ರಕಾಶಿಸುತ್ತಿತ್ತು.

೧೩. ಸೂತನು ಹೇಳಿದನು:—ಅನಂತರ ದುಷ್ಟಳೂ, ಆಚಾರಹೀನಳೂ, ಆದ ಒಬ್ಬ ದಾಸಿಯು ಮಂಗಳಕರವಾದ ವಿಷಯವನ್ನು ಹೇಳುತ್ತ ಆ ಹೆರಿಗೆ ಮನೆಗೆ ಹೋದಳು.

ತಸ್ಯಾಃ ಸರ್ವಂ ಪರಿಜ್ಞಾಯ ಸ ಹುಂಡೋ ದಾನವಾಧಮಃ
ಅಸ್ಯಾ ಅಂಗಂ ಪ್ರವಿಶ್ಯೈವ ಪ್ರವಿಷ್ಟಶ್ಚಾಯುಮಂದಿರೇ ॥ ೧೪ ॥

ಮಹಾಜನೇ ಪ್ರಸುಪ್ತೇ ಚ ನಿದ್ರಯಾತೀವ ಮೋಹಿತೇ ।
ತಂ ಪುತ್ರಂ ದೇವ ಗರ್ಭಾಭಮುಪಹೃತ್ಯ ಬಹಿರ್ಗತಃ ॥ ೧೫ ॥

ಕಾಂಚನಾಖ್ಯಂ ಪುರಂ ಪ್ರಾಪ್ತಃ ಸ್ವಕೀಯಂ ದಾನವಾಧಮಃ ।
ಸಮಾಹೂಯ ಪ್ರಿಯಾಂ ಭಾರ್ಯಾಂ ವಿಪುಲಾಂ ತಾಮಥಾಬ್ರವೀತ್ ॥ ೧೬ ॥

ವಧಸ್ವೈನಂ ಮಹಾಪಾಪಂ ಬಾಲರೂಪಂ ರಿಪುಂ ಮಮ ।
ಪಶ್ಚಾತ್ಸೂದಸ್ಯ ವೈ ಹಸ್ತೇ ಭೋಜನಾರ್ಥಂ ಪ್ರದೀಯತಾಂ ॥ ೧೭ ॥

ನಾನಾದ್ರವ್ಯೈಸ್ಸಮಾಯುಕ್ತಂ ಪಾಚಯಸ್ವ ಹಿ ನಿರ್ಘೃಣಂ ।
ಸೂದಹಸ್ತಾನ್ಮಹಾಭಾಗೇ ಅಹಂ ಭೋಕ್ಷ್ಯೇ ನ ಸಂಶಯಃ ॥ ೧೮ ॥

ವಾಕ್ಯಮಾಕರ್ಣ್ಯ ತದ್ಭರ್ತುರ್ವಿಪುಲಾ ವಿಸ್ಮಿತಾಭವತ್ ।
ಕಸ್ಮಾನ್ನಿರ್ಘೃಣತಾಂ ಯಾತಿ ಮಮ ಭರ್ತಾತಿನಿಷ್ಠುರಃ ॥ ೧೯ ॥

---

೧೪. ಆ ದಾಸಿಯ ಬಗೆಯನ್ನು ತಿಳಿದು ಹುಂಡನು ಅವಳ ಅವಯವವನ್ನು ಹೊಕ್ಕು ಆಯುವಿನ ಮನೆಗೆ ಹೊಕ್ಕನು.

೧೫. ಜನಗಳೆಲ್ಲರೂ ಮಲಗಲು ಮತ್ತು ನಿದ್ರೆಯಿಂದ ಆವರಿಸಲ್ಪಡಲು, ಈ ಹುಂಡನು ಮಗುವನ್ನು ತೆಗೆದುಕೊಂಡು ಹೊರಕ್ಕೆ ಹೊರಟುಹೋದನು.

೧೬. ಕಾಂಚನವೆಂಬ ತನ್ನ ಪಟ್ಟಣಕ್ಕೆ ತೆಗೆದುಕ್ಕೊಂಡುಹೋಗಿ ಹೆಂಡತಿ ಯಾದ ವಿಪುಲೆಯನ್ನು ಕರೆದು ಅವಳಿಗೆ ಹೇಳಿದನು.

೧೭. ನನಗೆ ಶತ್ರುವಾದ ಈ ಮಗುವನ್ನು ಕೊಂದು ಆ ಮೇಲೆ ಅಡಿಗೆಯವನ ಕೈಲಿ ಕೊಟ್ಟು ಊಟಕ್ಕೆ ಸಿದ್ಧಪಡಿಸು.

೧೮. ಅದಕ್ಕೆ ನಾನಾ ವಿಧವಾದ ಸಂಭಾರಗಳನ್ನು ಹಾಕಿಸಿ ಬೇಯಿಸಲಿ ನಾನು ಖಂಡಿತವಾಗಿಯೂ ಊಟಮಾಡುತ್ತೇನೆ. ಸಂಶಯವಿಲ್ಲ.

೧೯-೨೧. ಗಂಡನಾದ ಹುಂಡನ ಮಾತನ್ನು ಕೇಳಿ ವಿಪುಲೆಯು ಆಶ್ಚರ್ಯ ಗೊಂಡಳು. ಮತ್ತು ನನ್ನ ಗಂಡನಿಗೇಕೆ ದಯೆಯಿಲ್ಲ? ಅವನು ಅತ್ಯಂತ ಕ್ರೂರಿ

ಸರ್ವಲಕ್ಷಣಸಂಪನ್ನಂ ದೇವಗರ್ಭೋಪಮಂ ಸುತಂ ।
ಕಸ್ಯ ಕಸ್ಮಾತ್ಪ್ರಭಕ್ಷೇತ ಕೃಪಾಹೀನಃ ಸುನಿರ್ಘೃಣಃ ॥ ೨೦ ॥

ಇತ್ಯೇವಂ ಚಿಂತಯಾಮಾಸ ಕಾರುಣ್ಯೇನ ಸಮನ್ವಿತಾ ।
ಪುನಃ ಪಪ್ರಚ್ಛ ಭರ್ತಾರಂ ಕಸ್ಮಾದ್ಭಕ್ಷ್ಯಸಿ ಬಾಲಕಂ ॥ ೨೧ ॥

ಯಸ್ಮಾದ್ಭವಸಿ ಸಂಕ್ರುದ್ಧೋ ಹ್ಯತೀವ ನಿರಪತ್ರಪಃ ।
ಸರ್ವಂ ಮೇ ಕಾರಣಂ ಬ್ರೂಹಿ ತತ್ತ್ವೇನ ದನುಜೇಶ್ವರ ॥ ೨೨ ॥

ಆತ್ಮದೋಷಸ್ಯ ವೃತ್ತಾಂತಂ ಸಮಾಸೇನ ನಿವೇದಿತಂ ।
ಶಾಪಂ ಹ್ಯಶೋಕಸುಂದರ್ಯಾ ಹುಂಡೇನಾಪಿ ದುರಾತ್ಮನಾ ॥ ೨೩ ॥

ತಯಾ ಜ್ಞಾತಂ ತು ತತ್ಸರ್ವಂ ಕಾರಣಂ ದಾನವಸ್ಯ ವೈ ।
ವಧ್ಯೋಽಯಂ ಬಾಲಕಸ್ಸತ್ಯಂ ನೋ ವಾ ಭರ್ತಾ ಮರಿಷ್ಯತಿ ॥ ೨೪ ॥

ಇತ್ಯೇವಂ ಸಂವಿಚಾರ್ಯೈವ ವಿಪುಲಾ ಕ್ರೋಧಮೂರ್ಛಿತಾ ।
ಮೇಕಲಾಂ ತು ಸಮಾಹೂಯ ಸೈರಂಧ್ರೀಂ ವಾಕ್ಯಮಬ್ರವೀತ್ ॥ ೨೫ ॥

---

ಯಾಗಿರುವನಲ್ಲಾ. ಸರ್ವಲಕ್ಷಣಗಳಿಂದ ಕೂಡಿದ, ದೇವತೆಗಳ ಮಗುವಂತಿರುವ ಯಾವನ ಮಗನನ್ನೋ ಏತಕ್ಕೋಸ್ಕರ ಕೃಪೆಯಿಲ್ಲದೇ ಈತನು ಕೊಲ್ಲುತ್ತಾನೆ? ಕೃಪೆಯಿಂದ ಕೂಡಿದವಳಾಗಿ ಈ ರೀತಿ ಯೋಚಿಸಿ ಪುನಃ ಗಂಡನನ್ನು ಕುರಿತು ಈ ಮಗುವನ್ನು ಏತಕ್ಕೆ ತಿನ್ನಬೇಕು?

೨೨. ಲಜ್ಜೆಯನ್ನು ಬಿಟ್ಟು ಏತಕ್ಕೋಸ್ಕರ ಕೋಪಗೊಂಡಿರುವೆ? ಎಲ್ಲದಕ್ಕೂ ನಿಜವಾದ ಕಾರಣವನ್ನು ಹೇಳು ಎಂದು ಕೇಳಿದಳು.

೨೩. ಆಗ ಹುಂಡನು ತನ್ನ ದುರ್ನಡತೆಯನ್ನೂ ಅದಕ್ಕೆ ಅಶೋಕಸುಂದರಿಯು ಕೊಟ್ಟ ಶಾಪವನ್ನೂ ಸಂಗ್ರಹವಾಗಿ ತಿಳಿಸಿದನು.

೨೪. ಗಂಡನು ಹೇಳಿದುದಕ್ಕೆ ಕಾರಣವೆಲ್ಲವನ್ನೂ ತಿಳಿದುಕೊಂಡಳು. ಈ ಮಗುವನ್ನು ಖಂಡಿತವಾಗಿಯೂ, ಕೊಲ್ಲಬೇಕು. ಇಲ್ಲದಿದ್ದರೆ ಗಂಡನು ಸಾಯುವನೆಂದುಕೊಂಡಳು.

೨೫-೨೬. ಈ ರೀತಿ ಯೋಚಿಸಿ ವಿಪುಲೆಯು ಕೋಪಗೊಂಡು, ಮೇಕಲೆಯೆಂಬ ಅಲಂಕಾರಮಾಡುವ ದಾಸಿಯನ್ನು ಕರೆದು ಎಲೈ ಸೈರಂಧ್ರಿಯೇ! ಈ ದುಷ್ಟ ಬಾಲಕ

ಜಹ್ಯೇನಂ ಬಾಲಕಂ ದುಷ್ಟಂ ಮೇಕಲೇಽದ್ಯ ಮಹಾನಸೇ ।
ಸೂದಹಸ್ತೇಪ್ರದೇಹಿ ತ್ವಂ ಹುಂಡಭೋಜನಹೇತವೇ ॥ ೨೬ ॥

ಮೇಕಲಾ ಬಾಲಕಂ ಗೃಹ್ಯ ಸೂದಮಾಹೂಯ ಚಾಬ್ರವೀತ್ ।
ರಾಜಾದೇಶಂ ಕುರುಷ್ವಾದ್ಯ ಪಚಸ್ವೈನಂ ಹಿ ಬಾಲಕಂ ॥ ೨೭ ॥

ಏವಮಾಕರ್ಣಿತಂ ತೇನ ಸೂದೇನಾಪಿ ಮಹಾತ್ಮನಾ ।
ಆದಾಯ ಬಾಲಕಂ ಹಸ್ತಾಚ್ಛಸ್ತ್ರಮುದ್ಯಮ್ಯ ಚೋದ್ಯತಃ ॥ ೨೮ ॥

ಏಷ ವೈ ದೇವದೇವಸ್ಯ ದತ್ತಾತ್ರೇಯಸ್ಯ ತೇಜಸಾ ।
ರಕ್ಷಿತಸ್ತ್ವಾಯುಪುತ್ರಶ್ಚ ಸ ಜಹಾಸ ಪುನಃ ಪುನಃ ॥ ೨೯ ॥

ತಂ ಹಸನ್ತಂ ಸಮಾಲೋಕ್ಯ ಸ ಸೂದಃ ಕೃಪಯಾನ್ವಿತಃ ।
ಸೈರಂಧ್ರೀ ಕೃಪಯಾ ಯುಕ್ತಾ ಸೂದಂ ತಂ ಪ್ರತ್ಯುವಾಚ ಹ ॥ ೩೦ ॥

---

ನನ್ನು ಕೊಂದು ಅಡಿಗೆಮಾಡಲು ಅಡಿಗೆಯ ಮನೆಯ ಪರಿಚಾರಕನಿಗೆ ಕೊಟ್ಟು ಹುಂಡನ ಭೋಜನಕ್ಕೆ ಸಿದ್ಧಪಡಿಸಬೇಕೆಂದು ಹೇಳಿದಳು.

೨೭. ಮೇಕಲೆಯು ಮಗುವನ್ನು ತಂದು ಸೂದನಿಗೆ ಕೊಟ್ಟು, ಈ ಮಗುವನ್ನು ಕೊಂದು ಅಡಿಗೆ ಮಾಡಿ ರಾಜನಿಗೆ ಬಡಿಸಬೇಕಂತೆ ಎಂದು ರಾಜನು ಅಪ್ಪಣೆ ಮಾಡಿರುವನು ಎಂದಳು.

೨೮. ಸೂದನು ಇದೆಲ್ಲವನ್ನೂ ಕೇಳಿ ಮಗುವನ್ನ ಕೈಗೆ ತೆಗೆದುಕೊಂಡು ಕತ್ತರಿಸಲು ಕೈಗೆ ಕತ್ತಿಯನ್ನು ತೆಗೆದುಕೊಂಡು ಸಿದ್ಧನಾದನು.

೨೯. ಈ ಆಯುಪುತ್ರನು ದೇವದೇವನಾದ ದತ್ತಾತ್ರೇಯನ ತೇಜಸ್ಸಿನಿಂದ ರಕ್ಷಿಸಲ್ಪಟ್ಟವನಾಗಿ ಪದೇ ಪದೇ ನಗುತ್ತಿದ್ದನು.

೩೦. ಆಗ ನಗುತ್ತಿರುವ ಮಗುವನ್ನು ನೋಡಿ ಪರಿಚಾರಕನೂ, ಆ ಸೈರಂಧ್ರಿಯೂ, ಮರುಕಗೊಂಡರು. ಆಗ ಸೈರಂಧ್ರಿಯು ಅಡಿಗೆಯವನನ್ನು ಕುರಿತು ಇಂತೆಂದಳು.

ನೈವ ವಧ್ಯಸ್ತ್ವಯಾ ಸೂದ ಶಿಶುರೇಷ ಮಹಾಮತೇ ।
ದಿವ್ಯಲಕ್ಷಣಸಂಪನ್ನಃ ಕಸ್ಯ ಜಾತಃ ಸುಸತ್ಕುಲೇ ॥ ೩೧ ॥

॥ ಸೂದ ಉವಾಚ ॥

ಸತ್ಯಮುಕ್ತಂ ತ್ವಯಾ ಭದ್ರೇ ವಾಕ್ಯಂ ವೈ ಕೃಪಯಾನ್ವಿತಂ ।
ರಾಜಲಕ್ಷಣಸಂಪನ್ನೋ ರೂಪವಾನ್ಕಸ್ಯ ಬಾಲಕಃ ॥ ೩೨ ॥

ಕಸ್ಮಾದ್ಭೋಕ್ಷ್ಯತಿ ಪಾಪಾತ್ಮಾ ಹುಂಡೋಽಯಂ ದಾನವಾಧಮಃ ।
ಯೇನ ವೈ ರಕ್ಷಿತೋ ವಂಶಃ ಪೂರ್ವಮೇವ ಸ್ವಕರ್ಮಣಾ ॥ ೩೩ ॥

ಆಪತ್ಸ್ವಪಿ ಸ ಜೀವೇತ ದುರ್ಗೇಷು ನಾನ್ಯಥಾ ಭವೇತ್ ।
ನದ್ಯಾ ವೇಗಹೃತಶ್ಚಾಪಿ ವಹ್ನಿಮಧ್ಯಗತೋಽಪಿ ವಾ ॥ ೩೪ ॥

ಜೀವೇತ ನಾತ್ರ ಸಂದೇಹೋ ಯಸ್ಯ ಕರ್ಮ ಸಹಾಯಕಂ ।
ತಸ್ಮಾದ್ಧಿ ಕ್ರಿಯತೇ ಕರ್ಮ ಧರ್ಮಪುಣ್ಯಸಮನ್ವಿತಂ ॥ ೩೫ ॥

---

೩೧. ಎಲೈ ಪರಿಚಾರಕನೇ, ಈ ಮಗುವನ್ನು ಕೊಲ್ಲಕೂಡದು. ಉತ್ತಮವಾದ ಲಕ್ಷಣಗಳಿಂದ ಕೂಡಿದ್ದಾನೆ. ಯಾವನ ಒಳ್ಳೆಯ ವಂಶದಲ್ಲಿ ಹುಟ್ಟಿದ್ದಾನೆಯೋ ಯಾರಿಗೆ ಗೊತ್ತು.

೩೨-೩೩. ಅಡಿಗೆಯವನು ಹೇಳಿದನು:—ಅಮ್ಮಾ! ನೀನು ಹೇಳಿದುದು ನಿಜ. ನೀನು ದಯಾವಂತೆ. ಯಾವನ ಮಗನೋ ರೂಪವಂತನಾಗಿ ರಾಜಲಕ್ಷಣದಿಂದ ಕೂಡಿದ್ದಾನೆ. ಏತಕ್ಕೋಸ್ಕರ ಈ ಹುಂಡನು ಈ ಮಗುವನ್ನು ಕೊಂದು ತಿನ್ನಬೇಕು? ಯಾವನು ಪೂರ್ವದ ತನ್ನ ಕರ್ಮದಿಂದ ವಂಶವನ್ನು ರಕ್ಷಿಸಿಕೊಂಡಿದ್ದಾನೆಯೋ ಆ ಮಗುವು ಆಪತ್ತಿನಲ್ಲೂ ಕೂಡ ಉಳಿದುಕೊಳ್ಳುತ್ತದೆ. ಎಂತಹ ಕಷ್ಟಗಳಲ್ಲಿಯೂ, ಬೇರೆಯಾಗುವುದೇ ಇಲ್ಲ.

೩೪-೩೫. ನದಿಯ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದರೂ, ಬೆಂಕಿಯ ಮಧ್ಯದಲ್ಲಿ ಬಿದ್ದಿದ್ದರೂ, ಕರ್ಮವು ಸಹಾಯಕವಾಗಿರುವವರಿಗೆ ಪ್ರಾಣಾಪಾಯವಾಗುವುದೇ ಇಲ್ಲ. ಅದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದಲೇ ಪುಣ್ಯದಿಂದ ಕೂಡಿರುವ ಧರ್ಮಕರ್ಮಗಳನ್ನು ಮಾಡಬೇಕು.

ಆಯುಷ್ಮಂತೋ ನರಾಸ್ತೇನ ಪ್ರವಿಂದಂತಿ ಸುಖಂ ತತಃ ।
ತಾರಕಂ ಪಾಲಕಂ ಕರ್ಮ ರಕ್ಷತೇ ಜಾಗ್ರತೇ ಹಿ ತತ್ ॥ ೩೬ ॥

ಭುಕ್ತಿದಂ ಜಾಯತೇ ನಿತ್ಯಂ ಮೈತ್ರಸ್ಥಾನಪ್ರದಾಯಕಂ ।
ದಾನಪುಣ್ಯಾನ್ವಿತಂ ಕರ್ಮ ಪ್ರಿಯವಾಕ್ಯಸಮನ್ವಿತಂ ॥ ೩೭ ॥

ಉಪಕಾರಯುತಂ ಯಚ್ಚ ಕರೋತಿ ಶುಭಕೃತ್ತದಾ ।
ತಮೇವ ರಕ್ಷತೇ ಕರ್ಮ ಸರ್ವದೈವ ನ ಸಂಶಯಃ ॥ ೩೮ ॥

ಅನ್ಯಯೋನಿಂ ಪ್ರಯಾತಿ ಸ್ಮ ಪ್ರತಿಷಿದ್ಧೇನ ಕರ್ಮಣಾ ।
ಕಿಂ ಕರೋತಿ ಪಿತಾ ಮಾತಾ ಅನ್ಯೇ ಸ್ವಜನಬಾಂಧವಾಃ ॥ ೩೯ ॥

ಕರ್ಮಣಾ ನಿಹತೋ ಯಸ್ತು ನಸ್ತುಸ್ಯಸ್ಯ ಹಿ ರಕ್ಷಣೇ ।
ಯೇನೈವ ಕರ್ಮಣಾ ಚೈವ ರಕ್ಷಿತಶ್ಚಾಯುನಂದನಃ ॥ ೪೦ ॥

---

೩೬. ಅವರು ಎಲ್ಲಾ ವಿಧದಲ್ಲೂ ಆಯುಷ್ಮಂತರಾಗಿ ಅನಂತರ ಸುಖವನ್ನು ಹೊಂದುತ್ತಾರೆ. ಆ ಕರ್ಮವೇ ಕಷ್ಟದಿಂದ ಕಾಪಾಡುತ್ತದೆ. ಪಾಲಿಸುತ್ತದೆ. ಕಾಯುತ್ತದೆ.

೩೭. ಆ ಪೂರ್ವಜನ್ಮದ ಕರ್ಮವು ಅನ್ನವನ್ನು ಕೊಡುತ್ತದೆ. ಸ್ನೇಹವನ್ನುಂಟುಮಾಡುತ್ತದೆ. ಪ್ರಿಯವಾದ ಮಾತಿನಿಂದಲೂ ಕೂಡಿರುತ್ತದೆ.

೩೮. ಉಪಕಾರದಿಂದ ಕೂಡಿದ ಕರ್ಮವು ಒಳ್ಳೆಯದನ್ನು ಮಾಡುತ್ತದೆ. ಯಾವಾಗಲೂ ಅವನನ್ನು ಕಾಪಾಡುತ್ತದೆ. ಸಂಶಯವಿಲ್ಲ.

೩೯. ಕೆಟ್ಟಕೆಲಸದಿಂದ ಕೆಟ್ಟಜನ್ಮದಲ್ಲಿ ಹುಟ್ಟುತ್ತಾನೆ. ತಾಯಿಯಾಗಲಿ, ತಂದೆಯಾಗಲಿ ಮಿಕ್ಕ ಬಂಧುಗಳೇ ಆಗಲಿ ಅವನಿಗೇನು ಮಾಡಬಲ್ಲರು ?

೪೦-೪೧. ಕರ್ಮವು ಕೊಂದಪಕ್ಷದಲ್ಲಿ ಅವನ ರಕ್ಷಣ ಯಾವ ರೀತಿಯಲ್ಲೂ ಆಗುವುದೇ ಇಲ್ಲ. ಯಾವ ತನ್ನ ಪೂರ್ವದ ಕರ್ಮದಿಂದ ಆಯುವಿನ ಮಗನು

ತಸ್ಮಾತ್ಕೃಪಾನ್ವಿತೋ ಜಾತಃ ಸೂದಃ ಕರ್ಮವಶಾನುಗಃ ।
ಸೈರಂಧ್ರೀ ಚ ತಥಾ ಜಾತಾ ಪ್ರೇರಿತಾ ತಸ್ಯ ಕರ್ಮಣಾ ॥ ೪೧ ॥

ದ್ವಾಭ್ಯಾಮೇವ ಸುತಸ್ತಸ್ಯ ರಕ್ಷಿತಶ್ಚಾರುಲಕ್ಷಣಃ ।
ರಾತ್ರಾವೇವ ಪ್ರಣೀತೋಽಸೌ ತಸ್ಮಾದ್ಭೀತ್ಯಾ ಮಹಾಶ್ರಮೇ ॥ ೪೨ ॥

ವಸಿಷ್ಠಸ್ಯಾಶ್ರಮೇ ಪುಣ್ಯೇ ಸೈರಂಧ್ರ್ಯಾ ಪುಣ್ಯಕರ್ಮಣಾ ।
ಶುಭೇ ಪರ್ಣಕುಟೀದ್ವಾರೇ ತಸ್ಮಿನ್ನೇವ ಮಹಾಶ್ರಮೇ ॥ ೪೩ ॥

ಗತಾ ಸಾ ಸ್ವಗೃಹಂ ಪಶ್ಚಾನ್ನಿಕ್ಷಿಪ್ಯ ಬಾಲಕಂ ಚ ತಂ ।
ಏಣಂ ನಿಪಾತ್ಯ ಸೂದೇನ ಪಾಚಿತಂ ಮಾಂಸಮೇವ ಹಿ ॥ ೪೪ ॥

ಭೋಜಯಿತ್ವಾ ಸ ದೈತ್ಯೇಂದ್ರೋ ಹುಂಡಸ್ತುಷ್ಟೋಽಭವತ್ತದಾ ।
ಶಾಪಂ ಹ್ಯಶೋಕಸುಂದರ್ಯಾ ಮೋಘಂ ಮೇನೇ ತದಾಽಸುರಃ ।
ಹರ್ಷೇಣ ಮಹತಾವಿಷ್ಟಃ ಸ ಹುಂಡೋ ದಾನವೇಶ್ವರಃ ॥ ೪೫ ॥

---

ರಕ್ಷಿಸಲ್ಪಟ್ಟನೋ ಆ ಕರ್ಮದಿಂದಲೇ ಆ ಅಡಿಗೆಯವನೂ ಕೃಪೆಯನ್ನು ಹೊಂದಿದನು. ಆ ಹುಡುಗನ ಕರ್ಮದಿಂದ ಪ್ರೇರಿತಳಾಗಿ ಸೈರಂಧ್ರಿಯೂ ಕೃಪೆಯನ್ನು ಹೊಂದಿದಳು.

೪೨. ಈ ರೀತಿ ಇಬ್ಬರೂ ಆ ಬಾಲಕನನ್ನು ಕಾಪಾಡಿ ಆ ಹುಂಡನ ಹೆದರಿಕೆಯಿಂದ ಆ ಮಗುವನ್ನು ಸೈರಂಧ್ರಿಯು ಆ ದಿನ ರಾತ್ರಿಯೇ ವಸಿಷ್ಠ ಮಹರ್ಷಿಗಳ ಆಶ್ರಮಕ್ಕೆ ತೆಗೆದುಕೊಂಡು ಹೋದಳು.

೪೩-೪೪. ಆ ಆಶ್ರಮದ ಪರ್ಣಶಾಲೆಯ ಬಾಗಿಲಿನಲ್ಲಿ ಆ ಮಗುವನ್ನಿಟ್ಟು ಸೈರಂಧ್ರಿಯು ಮನೆಗೆ ಹೊರಟುಹೋದಳು. ಅಡಿಗೆಯವನು ಒಂದು ಜಿಂಕೆಯನ್ನು ಕೊಂದು ಅದರ ಮಾಂಸವನ್ನು ಬೇಯಿಸಿ ಅಡಿಗೆಮಾಡಿದನು.

೪೫. ಅಡಿಗೆಯವನು ಬಡಿಸಲು ಹುಂಡನು ಊಟಮಾಡಿ ಸಂತುಷ್ಟನಾದನು. ಅಶೋಕಸುಂದರಿಯ ಶಾಪವು ವ್ಯರ್ಥವಾಯಿತೆಂದು ತಿಳಿದು ಬಹಳ ಸಂತೋಷಪಟ್ಟುಕೊಂಡನು.

॥ ಕುಂಜಲ ಉವಾಚ ॥

ಪ್ರಭಾತೇ ವಿಮಲೇ ಜಾತೇ ವಸಿಷ್ಠೋ ಮುನಿಸತ್ತಮಃ ।
ಬಹಿರ್ಗತೋ ಹಿ ಧರ್ಮಾತ್ಮಾ ಕುಟೀದ್ವಾರಾತ್ಪ್ರಪಶ್ಯತಿ ॥ ೪೬ ॥

ಸಂಪೂರ್ಣಂ ಬಾಲಕಂ ದೃಷ್ಟ್ವಾ ದಿವ್ಯಲಕ್ಷಣಸಂಯುತಂ ।
ಸಂಪೂರ್ಣೇಂದುಪ್ರತೀಕಾಶಂ ಸುಂದರಂ ಚಾರುಲೋಚನಂ ॥ ೪೭ ॥

ಪಶ್ಯನ್ತು ಮುನಯಸ್ಸರ್ವೇ ಯೂಯಮಾಗತ್ಯ ಬಾಲಕಂ ।
ಕಸ್ಯ ಕೇನ ಸಮಾನೀತಂ ರಾತ್ರೌ ಚೈವಾಂಗಣೇ ಮಮ ॥ ೪೮ ॥

ದೇವಗಂಧರ್ವಗರ್ಭಾಭಂ ರಾಜಲಕ್ಷಣಸಂಯುತಂ ।
ಕಂದರ್ಪಕೋಟಿಸಂಕಾಶಂ ಪಶ್ಯನ್ತು ಮುನಯೋಽಮಲಂ ॥ ೪೯ ॥

ಮಹಾಕೌತುಕಸಂಯುಕ್ತಾ ಹೃಷ್ಟಾ ದ್ವಿಜವರಾಸ್ತತಃ ।
ಸಮುಪಶ್ಯಂಸ್ತಂ ತು ಪುತ್ರಮಾಯೋಶ್ಚೈವ ಮಹಾತ್ಮನಃ ॥ ೫೦ ॥

---

೪೬. ಕುಂಜಲನು ಹೇಳಿದನು :—ಬೆಳಗಾದ ಕೂಡಲೇ ವಸಿಷ್ಠ ಮಹರ್ಷಿಯು ತನ್ನ ಪರ್ಣಶಾಲೆಯಿಂದ ಹೊರಗೆ ಹೋದನು.

೪೭. ದಿವ್ಯವಾದ ಲಕ್ಷಗಳಿಂದ ಕೂಡಿ ಸುಂದರನಾಗಿ ಮನೋಹರವಾದ ಕಣ್ಣುಗಳಿಂದಲೂ, ಪೂರ್ಣಚಂದ್ರನಂತಿರುವ ಮುಖದಿಂದಲೂ ಕೂಡಿರುವ ಈ ಮಗುವನ್ನು ನೋಡಿದನು. ಎಲೈ ಮುನಿಗಳಿರಾ, ಬನ್ನಿರಿ ನೀವೆಲ್ಲರೂ ಇಲ್ಲಿರುವ ಮಗುವನ್ನು ನೋಡಿರಿ.

೪೮. ಇದು ಯಾರ ಮಗು? ರಾತ್ರಿಯಲ್ಲಿ ಯಾರು ಇದನ್ನು ತಂದು ನನ್ನ ಅಂಗಳದಲ್ಲಿಟ್ಟರು?

೪೯. ದೇವತೆಗಳ, ಗಂಧರ್ವರ ಮಕ್ಕಳಂತಿದ್ದಾನೆ. ರಾಜಲಕ್ಷಣಗಳಿಂದ ಕೂಡಿ ಕೋಟಿ ಮನ್ಮಥರ ಲಕ್ಷಣವುಳ್ಳವನಾಗಿದ್ದಾನೆ. ಈ ಪವಿತ್ರವಾದ ಮಗುವನ್ನು ನೀವುಗಳೆಲ್ಲರೂ ಸಹ ನೋಡಿರಿ.

೫೦. ಆ ಋಷಿಗಳೆಲ್ಲರೂ ಆಯುವಿನ ಮಗನನ್ನು ಆಶ್ಚರ್ಯಪಟ್ಟು ನೋಡಿದರು.

ವಸಿಷ್ಠಸ್ಸ ತು ಧರ್ಮಾತ್ಮಾ ಜ್ಞಾನೇನಾಲೋಕ್ಯ ಬಾಲಕಂ ।
ಆಯುಪುತ್ರಂ ಸಮಾಜ್ಞಾತಂ ಚರಿತ್ರೇಣ ಸಮನ್ವಿತಂ ॥ ೫೧ ॥

ವೃತ್ತಾಂತಂ ತಸ್ಯ ದುಷ್ಟಸ್ಯ ಹುಂಡಸ್ಯಾಪಿ ದುರಾತ್ಮನಃ ।
ಕೃಪಯಾ ಬ್ರಹ್ಮಪುತ್ರಸ್ತು ಸಮುತ್ಥಾಯ ಸುಬಾಲಕಂ ॥ ೫೨ ॥

ಕರಾಭ್ಯಾಮಥ ಗೃಹ್ಣಾತಿ ಯಾವದ್ದ್ವಿಜವರೋತ್ತಮಃ ।
ತಾವದ್ವೃಷ್ಟಿಂ ಸೌಮನಸ್ಯಾಂ ಚಕ್ರುರ್ದೇವಾ ದ್ವಿಜೋಪರಿ ॥ ೫೩ ॥

ಲಲಿತಂ ಸುಸ್ವರಂ ಗೀತಂ ಜಗುರ್ಗಂಧರ್ವಕಿನ್ನರಾಃ ।
ಋಷಯೋ ವೇದಮಂತ್ರೈಶ್ಚ ಸ್ತುವಂತಿ ನೃಪನಂದನಂ ॥ ೫೪ ॥

ವಸಿಷ್ಠಸ್ತಂ ಸಮಾಲೋಕ್ಯ ವರಂ ವೈ ದತ್ತವಾಂಸ್ತದಾ ।
ನಹುಷೇತ್ಯೇವ ತೇ ನಾಮ ಖ್ಯಾತಿಂ ಲೋಕೇ ಗಮಿಷ್ಯತಿ ॥ ೫೫ ॥

ಹುಷಿತೋ ನೈವ ತೇನಾಪಿ ಬಾಲಭಾವೈರ್ನರಾಧಿಪ ।
ತಸ್ಮಾನ್ನಹುಷ ತೇ ನಾಮ ದೇವಪೂಜ್ಯೋ ಭವಿಷ್ಯತಿ ॥ ೫೬ ॥

---

೫೧. ವಸಿಷ್ಠನು ಆಗ ಜ್ಞಾನದೃಷ್ಟಿಯಿಂದ ಆ ಬಾಲಕನ ಸ್ವರೂಪವನ್ನೂ, ಅವನು ಆಯುವಿನ ಮಗನೆಂಬುದನ್ನೂ, ಅವನ ಚರಿತ್ರೆಯನ್ನೂ, ದುಷ್ಟನಾದ ಹುಂಡನ ಚರಿತ್ರೆಯನ್ನೂ ತಿಳಿದುಕೊಂಡನು.

೫೨-೫೩. ಆಗ ವಸಿಷ್ಠ ಮಹರ್ಷಿಯು ಕೃಪೆಯಿಂದ ಆ ಮಗುವನ್ನು ಹಿಡಿದು ಕೈಯಲ್ಲಿ ಎತ್ತಿಕೊಳ್ಳಲು, ದೇವತೆಗಳು ಆ ಋಷಿಯ ಮೇಲೆ ಪುಷ್ಪವೃಷ್ಟಿಯನ್ನು ಕರೆದರು.

೫೪. ಗಂಧರ್ವರೂ, ಕಿನ್ನರರೂ, ಸುಸ್ವರವಾಗಿ ಗಾನಮಾಡಿದರು. ಋಷಿಗಳು ವೇದಮಂತ್ರಗಳಿಂದ ಆ ಕುಮಾರನನ್ನು ಸ್ತೋತ್ರಮಾಡಿದರು.

೫೫ ವಸಿಷ್ಠನು ಆ ಮಗುವನ್ನು ನೋಡಿ ವರವನ್ನು ಕೊಟ್ಟನು. ನಿನಗೆ ನಹುಷನೆಂಬುದಾಗಿ ಲೋಕದಲ್ಲಿ ಪ್ರಸಿದ್ಧವಾದ ಹೆಸರಾಗಲಿ.

೫೬. ಮಗು ಎಂಬ ಭಾವನೆಯಿಂದ ನೀನು ವಧಿಸಲ್ಪಡದ ಕಾರಣ ನಿನ್ನ ಹೆಸರು ನಹುಷನೆಂದಾಗಲಿ. ಆ ಹೆಸರು ದೇವತೆಗಳಿಗೂ ಪೂಜ್ಯವಾಗಲಿ.

ಜಾತಕರ್ಮಾದಿಕಂ ಕರ್ಮ ತಸ್ಯ ಚಕ್ರೇ ದ್ವಿಜೋತ್ತಮಃ ।
ವ್ರತದಾನಂ ವಿಸರ್ಗಂ ಚ ಗುರುಶಿಷ್ಯಾದಿಲಕ್ಷಣಂ ॥ ೫೭ ॥

ವೇದ ಚಾಧೀತ್ಯ ಸಂಪೂರ್ಣಂ ಷಡಂಗಂ ಸಪದಕ್ರಮಂ ।
ಸರ್ವಾಣ್ಯೇವ ಚ ಶಾಸ್ತ್ರಾಣಿ ಹ್ಯಧೀತ್ಯ ದ್ವಿಜಸತ್ತಮಾತ್ ॥ ೫೮ ॥

ಸವಿಸರ್ಗಂ ಧನುರ್ವೇದಂ ಸರಹಸ್ಯೋಪಸಂಯಮಂ ।
ಶಸ್ತ್ರಾಸ್ತ್ರಾಣಿ ಚ ದಿವ್ಯಾನಿ ಜಗ್ರಾಹ ಮುನಿಸತ್ತಮಾತ್ ॥ ೫೯ ॥

ಜ್ಞಾನಶಾಸ್ತ್ರಾಣಿ ಚಾನ್ಯಾನಿ ರಾಜನೀತ್ಯಾದಿಕಾನಿ ಚ ।
ವಸಿಷ್ಠಾದಾಯುಪುತ್ರಸ್ತು ಶಿಷ್ಯರೂಪೇಣ ಭಕ್ತಿಮಾನ್ ॥ ೬೦ ॥

ಸರ್ವವಿದ್ಯಾಸುನಿಷ್ಪನ್ನೋ ನಹುಷಶ್ಚಾತಿಸುಂದರಃ ।
ಪ್ರಸಾದಾಚ್ಚ ವಸಿಷ್ಠಸ್ಯ ಚಾಪಬಾಣಧರೋಽಭವತ್ ॥ ೬೧ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಪಂಚೋತ್ತರಶತತಮೋಽಧ್ಯಾಯಃ**

---

೫೭. ಆ ಮಗುವಿಗೆ ಜಾತಕರ್ಮಾದಿಗಳನ್ನು ಆ ವಸಿಷ್ಠನೇ ಮಾಡಿದನು. ಅಲ್ಲದೇ ಗುರುಶಿಷ್ಯಲಕ್ಷಣವಾದ ಉಪನಯನವನ್ನೂ ಕೂಡ ಮಾಡಿದನು.

೫೮-೫೯. ಆ ನಹುಷನು ವಸಿಷ್ಠ ಋಷಿಯಿಂದ ಷಡಂಗಸಹಿತವಾದ ವೇದಾಧ್ಯಯನವನ್ನು ಮಾಡಿದನು. ಮತ್ತು ಎಲ್ಲಾ ಶಾಸ್ತ್ರಗಳನ್ನೂ ಓದಿ ಆ ಋಷಿಯಿಂದಲೇ ಆವಾಹನೆ ವಿಸರ್ಜನೆಗಳಿಂದ ಕೂಡಿದ ಧನುರ್ವೇದದ ರಹಸ್ಯಗಳನ್ನು ತಿಳಿದನು. ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಅವನಿಂದಲೇ ಕಲಿತನು.

೬೦-೬೧. ವೇದಾಂತ ರಾಜನೀತಿಗಳನ್ನು ಆ ವಸಿಷ್ಠನಿಂದ ಶಿಷ್ಯನಾಗಿ ಕಲಿತನು. ಅತಿಸುಂದರನಾದ ಆ ನಹುಷನು ಸರ್ವವಿದ್ಯೆಗಳನ್ನೂ ಕಲಿತು ಆ ವಸಿಷ್ಠನ ಅನುಗ್ರಹದಿಂದ ಧನುರ್ಬಾಣಗಳನ್ನು ಧರಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ನೂರ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಡಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಆಯುಭಾರ್ಯಾ ಮಹಾಭಾಗಾ ಸ್ವರ್ಭಾನೋಸ್ತನಯಾ ಸುತಂ ।
ಅಪಶ್ಯಂತೀ ಸ್ವಕಂ ಚಾಪಿ ದೇವೋಪಮಮನೌಪಮಂ ॥ ೧ ॥

ಹಾಹಾಕಾರಂ ಮಹತ್ಕೃತ್ವಾ ರುರೋದ ವರವರ್ಣಿನೀ ।
ಕೇನ ಮೇ ಲಕ್ಷಣೋಪೇತೋ ಹೃತೋ ಬಾಲಸ್ಸುಲಕ್ಷಣಃ ॥ ೨ ॥

ತಪಸಾ ದಾನಯಜ್ಞೈಶ್ಚ ನಿಯಮೈರ್ದುಷ್ಕರೈಸ್ಸುತಃ ।
ಸಂಪ್ರಾಪ್ತೋ ಹಿ ಮಯಾ ವತ್ಸಃ ಸಕಾಮೈರ್ದಾರುಣೈಃ ಪುನಃ ॥ ೩ ॥

---

## ನೂರ ಆರನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಸ್ವರ್ಭಾನುವಿನ ಮಗಳಾದ, ಆಯುವಿನ ಹೆಂಡತಿಯಾದ ಇಂದುಮತಿಯು ದೇವತೆಗಳಂತಿದ್ದ ಮಗನನ್ನು ಕಾಣದೆ ಹಾಹಾಕಾರ ಮಾಡುತ್ತ ಬಹುವಾಗಿ ಅತ್ತಳು.

೨-೩. ಲಕ್ಷಣಗಳಿಂದ ಕೂಡಿದ ಸುಂದರನಾದ ನನ್ನ ಮಗನನ್ನು ಯಾರು ಅಪಹರಿಸಿದರು? ತಪಸ್ಸು, ದಾನ, ಯಜ್ಞ, ನಿಯಮಗಳಿಂದ ಬಹು ಕಷ್ಟಪಟ್ಟು ಮಗನನ್ನು ಹೊಂದಿದೆನು.

**ದತ್ತಾತ್ರೇಯೇಣ ಪುಣ್ಯೇನ ತುಷ್ಟೇನ ಸುಮಹಾತ್ಮನಾ ।**
**ದತ್ತಃ ಪುತ್ರೋ ಹೃತಃ ಕೇನ ರುರೋದ ಕರುಣಾನ್ವಿತಾ ॥ ೪ ॥**

**ಹಾ ಪುತ್ರ ವತ್ಸ ಮೇ ತಾತ ಹಾ ಬಾಲ ಗುಣಮಂದಿರ ।**
**ಕ್ವಾಸಿ ಕೇನಾಭಿನೀತೋಽಸಿ ಮಮ ಶಬ್ದಃ ಪ್ರದೀಯತಾಂ ॥ ೫ ॥**

**ಸೋಮವಂಶಸ್ಯ ಸರ್ವಸ್ಯ ಭೂಷಣಸ್ತ್ವಂ ನ ಸಂಶಯಃ ।**
**ಕೇನ ತ್ವಮದ್ಯ ನೀತೋಽಸಿ ಮಮ ಪ್ರಾಣೈಸ್ಸಮನ್ವಿತಃ ॥ ೬ ॥**

**ಸುರಾಜಲಕ್ಷಣೈರ್ದಿವ್ಯೈಃ ಸಂಪೂರ್ಣಃ ಕಮಲೇಕ್ಷಣಃ ।**
**ಕೇನಾಪ್ಯದ್ಯ ಹೃತೋ ವತ್ಸ ಕಿಂ ಕರೋಮಿ ಕ್ವಯಾಮ್ಯಹಂ ॥ ೭ ॥**

**ಸ್ಫುಟಂ ಜಾನಾಮ್ಯಹಂ ಕರ್ಮ ಹ್ಯನ್ಯಜನ್ಮನಿ ಯತ್ಕೃತಂ ।**
**ನ್ಯಾಸಭಂಗಃ ಕೃತಃ ಕಸ್ಯ ತಸ್ಮಾತ್ಪುತ್ರೋ ಹೃತೋ ಮಮ ॥ ೮ ॥**

---

೪. ದತ್ತಾತ್ರೇಯನು ಮಹಾತ್ಮನು. ಅವನು ಸಂತೋಷಗೊಂಡು ಮಗನಾಗಲೆಂದು ವರವನ್ನು ಕೊಟ್ಟನು. ಅವನನ್ನು ಯಾರು ಅಪಹರಿಸಿದರು ಎಂದು ದುಃಖಿಸಿದಳು.

೫. ಹಾ ಮಗನೇ, ವತ್ಸನೇ, ತಾತ, ಬಾಲ, ಗಣಸ್ಥಾನನೇ, ಎಲ್ಲಿದ್ದೀಯಪ್ಪಾ? ಯಾರು ಕೊಂಡುಹೋದರಪ್ಪ ? ನನಗೆ ಶಬ್ದವನ್ನಾದರೂ ಕೊಡಪ್ಪ.

೬. ಚಂದ್ರವಂಶಕ್ಕೆಲ್ಲಾ ನೀನು ಭೂಷಣನಲ್ಲವೇ. ನನ್ನ ಪ್ರಾಣಗಳೊಂದಿಗೆ ಯಾರು ನಿನ್ನನ್ನು ಕೊಂಡುಹೋದರು.

೭. ಒಳ್ಳೆಯ ರಾಜಲಕ್ಷಣಗಳಿಂದ ಸಂಪೂರ್ಣನಾಗಿದ್ದೆಯಲ್ಲ. ನಿನ್ನ ಕಣ್ಣುಗಳು ಕಮಲದಂತಿದ್ದುವಲ್ಲ. ಯಾರು ಈಗ ನಿನ್ನನ್ನು ಕದ್ದುಕೊಂಡು ಹೋದರು. ಏನು ಮಾಡಲಿ. ಎಲ್ಲಿ ಹೋಗಲಿ.

೮. ಪೂರ್ವಜನ್ಮದಲ್ಲಿ ಪಾಪಕರ್ಮವನ್ನು ಮಾಡಿದ್ದೆ. ಖಂಡಿತ ಈಗ ತಿಳಿಯಿತು. ಯಾರದೋ ಕಾಪಾಡಲು ಕೊಟ್ಟಿದ್ದ ಪದಾರ್ಥವನ್ನು ಕದ್ದೆನು. ಆದ್ದರಿಂದಲೇ ನನ್ನ ಮಗನನ್ನು ಕದ್ದಿದ್ದಾರೆ.

ಕಿಂ ವಾ ಛಲಂ ಕೃತಂ ಕಸ್ಯ ಪೂರ್ವಜನ್ಮನಿ ಪಾಪಯಾ ।
ಕರ್ಮಣಃ ಕಸ್ಯ ವೈ ದುಃಖಮನುಭುಂಜಾಮಿ ನಾನ್ಯಥಾ ॥ ೯ ॥

ರತ್ನಾಪಹಾರಿಣೀ ಜಾತಾ ಪುತ್ರರತ್ನಂ ಹೃತಂ ಮಮ ।
ತಸ್ಮಾದ್ದೇವೇನ ವೈ ದಿವ್ಯ ಅನೌಪಮ್ಯಗುಣಾಕರಃ ॥ ೧೦ ॥

ಕಿಂ ವಾ ವಿತರ್ಕಿತೋ ವಿಪ್ರಃ ಕರ್ಮಣಸ್ತಸ್ಯ ವೈ ಫಲಂ ।
ಪ್ರಾಪ್ತಂ ಮಯಾ ನ ಸಂದೇಹಃ ಪುತ್ರಶೋಕಾನ್ವಿತಂ ಭೃಶಂ ॥ ೧೧ ॥

ಕಿಂ ವಾ ಶಿಶುವಿರೋಧಶ್ಚ ಕೃತೋ ಜನ್ಮಾಂತರೇ ಮಯಾ ।
ತಸ್ಯ ಪಾಪಸ್ಯ ಭುಂಜಾಮಿ ಕರ್ಮಣಃ ಫಲಮೀದೃಶಂ. ॥ ೧೨ ॥

ಯಾಚಮಾನಸ್ಯ ಚೈವಾಗ್ರೇ ವೈಶ್ವದೇವಸ್ಯ ಕರ್ಮಣಿ ।
ಕಿಂ ವಾಪಿ ನಾರ್ಪಿತಂ ಚಾನ್ನಂ ವ್ಯಾಹೃತೀಭಿರ್ಹುತಂ ದ್ವಿಜೈಃ ॥ ೧೩ ॥

---

೯. ಪೂರ್ವಜನ್ಮದಲ್ಲಿ ಪಾಪಿಯಾದ ನಾನು ಯಾರಿಗೆ ಏನು ವಂಚನೆಯನ್ನು ಮಾಡಿದ್ದೆನು? ಆ ಕರ್ಮಕ್ಕೆ ಈಗ ಫಲವನ್ನು ಅನುಭವಿಸುತ್ತೇನೆ. ಸಂಶಯವಿಲ್ಲ.

೧೦. ಪೂರ್ವಜನ್ಮದಲ್ಲಿ ರತ್ನಗಳನ್ನು ಕದ್ದಿದ್ದೇನೆ. ಆದ್ದರಿಂದಲೇ ನನ್ನ ದಿವ್ಯವಾದ ಅಸದೃಶವಾದ ಗುಣಗಳಿಂದ ಕೂಡಿದ ಪುತ್ರರತ್ನವನ್ನು ಕದ್ದಿದ್ದಾರೆ.

೧೧. ಬ್ರಾಹ್ಮಣನೊಡನೆ ಕುಹಕವಾದ ರೀತಿಯಲ್ಲಿ ವಾದಿಸಿದ್ದೇನೆ. ಆ ಕರ್ಮದ ಫಲವನ್ನು ಈಗ ಹೊಂದಿದ್ದೇನೆ. ಸಂದೇಹವಿಲ್ಲ. ಆದ್ದರಿಂದಲೇ ಪುತ್ರ ಶೋಕವು ನನಗೆ ಬಂದಿರುವುದು.

೧೨. ಜನ್ಮಾಂತರದಲ್ಲಿ ಮಕ್ಕಳಿಗೆ ಕೆಟ್ಟದ್ದನ್ನು ಮಾಡಿದ್ದೆನೋ ಏನೋ? ಅದರ ಪಾಪದ ಫಲವನ್ನು ಈಗ ಅನುಭವಿಸುತ್ತಿದ್ದೇನೆ.

೧೩. ವೈಶ್ವದೇವಕ್ಕೋಸ್ಕರ ಬಂದು ಯಾಚನೆಮಾಡುತ್ತಿರುವ ಬ್ರಾಹ್ಮಣನಿಗೆ ದಾನಮಾಡಲಿಲ್ಲವೋ ಏನೋ? ಅವನು ವ್ಯಾಹೃತಿಗಳಿಂದ ಅನ್ನವನ್ನು ಹೋಮ ಮಾಡಲಿಲ್ಲ. ಅಂತಹ ಪುಣ್ಯವನ್ನು ಮಾಡಲಿಲ್ಲ.

ಏವಂ ಸುವೇದನಾಯುಕ್ತಾ ಸ್ವರ್ಭಾನುತನಯಾ ತದಾ ।
ಇಂದುಮತೀ ಮಹಾಭಾಗಾ ಶೋಕವಿಹ್ವಲಿತಾऽಭವತ್ ॥ ೧೪ ॥

ಪತಿತಾ ಮೂರ್ಛಿತಾ ಶೋಕಾದ್ವಿಹ್ವಲತ್ವಂ ಗತಾ ಸತೀ ।
ನಿಶ್ವಾಸಂ ಮುಂಚಮಾನಾ ಸಾ ವತ್ಸಹೀನಾ ಯಥಾ ಹಿ ಗೌಃ ॥ ೧೫ ॥

ಆಯುೂ ರಾಜಾಥ ಶೋಕೇನ ದುಃಖೇನ ಮಹತಾನ್ವಿತಃ ।
ಹೃತಂ ಶ್ರುತ್ವಾ ಹಿ ಪುತ್ರಂ ತು ಧೈರ್ಯಂ ತತ್ಯಾಜ ಪಾರ್ಥಿವಃ ॥ ೧೬ ॥

ತಪಸಶ್ಚ ಫಲಂ ನಾಸ್ತಿ ನಾಸ್ತಿ ದಾನಸ್ಯ ವೈ ಫಲಂ ।
ಯಸ್ಮಾದೇವಂ ಹೃತಃ ಪುತ್ರಸ್ತಸ್ಮಾನ್ನಾಸ್ತ್ಯತ್ರ ಸಂಶಯಃ ॥ ೧೭ ॥

ದತ್ತಾತ್ರೇಯಃ ಪ್ರಸನ್ನಸ್ತು ವರಂ ಮೇ ದತ್ತವಾನ್ಪುರಾ ।
ಅಜೇಯಂ ಚ ಜಯೋಪೇತಂ ಪುತ್ರಂ ಸರ್ವಗುಣಾನ್ವಿತಂ ॥ ೧೮ ॥

---

೧೪. ಆ ಸ್ವರ್ಭಾನುವಿನ ಮಗಳಾದ ಇಂದುಮತಿಯು ಹೀಗೆ ದುಃಖಪಡುತ್ತಾ ಮೋಹ ಹೊಂದಿದಳು.

೧೫. ಮೋಹಗೊಂಡು ದುಃಖದಿಂದ ಬಿದ್ದು, ಕರುವನ್ನು ಕಳೆದುಕೊಂಡ ಹಸುವಿನಂತೆ ನಿಟ್ಟುಸಿರು ಬಿಡುತ್ತಾ ಮೂರ್ಛೆಯನ್ನು ಹೊಂದಿದಳು.

೧೬. ಆಯುರಾಜನೂ ಕೂಡ ಮಗನು ಅಪಹೃತನಾದುದನ್ನು ಕೇಳಿ ದುಃಖದಿಂದ ಧೈರ್ಯಹೀನನಾದನು.

೧೭. ನನ್ನ ಮಗನು ಹೀಗೆ ಕಳಲ್ಪಟ್ಟಿರುವುದರಿಂದ ತಪಸ್ಸಿನ ಫಲವೂ ಇಲ್ಲ. ದಾನಗಳ ಫಲವೂ ಇಲ್ಲ. ಇದರಲ್ಲಿ ಸಂದೇಹವೂ ಇಲ್ಲ.

೧೮. ದತ್ತಾತ್ರೇಯನು ನನಗೆ ಪ್ರಸನ್ನನಾಗಿ ಅಜೇಯನೂ, ಜಯದಿಂದ ಕೂಡಿದವನೂ, ಸರ್ವಗುಣದಿಂದ ಕೂಡಿದವನೂ ಆದ ಮಗನನ್ನು ಹೊಂದೆಂದು ವರವನ್ನು ಕೊಟ್ಟನು.

**ತದ್ವರಸ್ಯ ಪ್ರಸಾದಾತ್ತು ಕಥಂ ವಿಘ್ನೋ ಹ್ಯಜಾಯತ ।**
**ಇತಿ ಚಿಂತಾಪರೋ ರಾಜಾ ದುಃಖಿತಃ ಪ್ರಾರುದದ್ಭೃಶಂ ॥ ೧೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಷಡಧಿಕಶತತಮೋಽಧ್ಯಾಯಃ**



---

೧೯. ಆ ದತ್ತಾತ್ರೇಯನು ಹಾಗೆ ವರ ಕೊಟ್ಟಿದ್ದರೂ ಕೂಡ ಅದಕ್ಕೆ ವಿಘ್ನವು ಹೇಗೆ ಸಂಭವಿಸಿತು? ಎಂದು ಯೋಚನಾಪರನಾಗಿ ಬಹುವಾಗಿ ದುಃಖಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತೋತ್ತರಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಅಥಾಸೌ ನಾರದಸ್ಸಾಕ್ಷಾತ್ಸ್ವರ್ಗಾದ್ರಾಜಾನಮಾಗತಃ ।
ನೃಪಮಾಶ್ವಾಸಯಾಮಾಸ ಕಸ್ಮಾದ್ರಾಜನ್ ಪ್ರರುದ್ಯತೇ ॥ ೧ ॥

ಪುತ್ರಾಪಹರಣಾತ್ತೇಽದ್ಯ ಕ್ಷೇಮಂ ಜಾತಂ ಮಹಾಮತೇ ।
ದೇವಾದೀನಾಂ ಮಹಾರಾಜ ಏವಂ ಜ್ಞಾತ್ವಾ ತು ಮಾ ಶುಚಃ ॥ ೨ ॥

ಸರ್ವವಿದ್ಯಾ ಗುಣಾಂಶ್ಚಾಪಿ ವರಾನ್ಕಾಮಾಂಸ್ತಥೈವ ಚ ।
ಲಬ್ಧ್ವಾ ಕಾಮಾಭಿಸಂಪೂರ್ಣೋ ಹ್ಯಾಗಮಿಷ್ಯತಿ ತೇ ಸುತಃ ॥ ೩ ॥

---

## ನೂರ ಏಳನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ನಾರದನು ಸ್ವರ್ಗದಿಂದ ಆಯುರಾಜನ ಹತ್ತಿರಕ್ಕೆ ಬಂದು ಎಲೈ ದೊರೆಯೇ, ಏತಕ್ಕೆ ಅಳುತ್ತೀಯೆ? ಅಳಬಾರದು. ಎಂದು ಸಮಾಧಾನಪಡಿಸಿ, ಅಳಲು ಕಾರಣವನ್ನು ಕೇಳಿದನು.

೨. ನಿನ್ನ ಮಗನನ್ನು ಕದ್ದುಕೊಂಡು ಹೋಗಿರುವುದರಿಂದ ದೇವತೆಗಳೇ ಮೊದಲಾಗಿ ಎಲ್ಲರಿಗೂ ಕ್ಷೇಮವಾಗುತ್ತದೆ. ಇದನ್ನು ತಿಳಿದುಕೋ. ದುಃಖ ಪಡಬೇಡ.

೩. ಸರ್ವ ವಿದ್ಯೆಗಳು, ಅನೇಕ ಗುಣಗಳು, ಅನೇಕ ವರಗಳು ಇವುಗಳನ್ನು ಹೊಂದಿ ನಿನ್ನ ಮಗನು ಪುನಹ ಬರುತ್ತಾನೆ.

ಯೇನಾಪ್ಯಪಹೃತಸ್ತೇಽದ್ಯ ಬಾಲೋ ದೇವಗುಣೋಪಮಃ ।
ಆತ್ಮಗೇಹೇ ಮಹಾರಾಜ ಕಾಲೋ ನೀತೋ ನ ಸಂಶಯಃ ॥ ೪ ॥

ತಸ್ಯ ನಾಶಂ ಸ ವೈ ಕೃತ್ವಾ ಮಹಾವೀರ್ಯೋ ಮಹಾಬಲಃ ।
ಸ ತ್ವಾಮಭ್ಯೇಷ್ಯತೇ ಭೂಯಃ ಶಿವಸ್ಯ ಸುತಯಾ ಸಹ ॥ ೫ ॥

ಇಂದ್ರೋಽಪೇಂದ್ರಸಮಃ ಪುತ್ರೋ ಭವಿಷ್ಯತಿ ಸ್ವತೇಜಸಾ ।
ಇಂದ್ರತ್ವಂ ಭೋಕ್ಷ್ಯತೇ ಸೋಽಪಿ ನಿಜೈಶ್ಚ ಪುಣ್ಯಕರ್ಮಭಿಃ ॥ ೬ ॥

ಏವಮಾಭಾಷ್ಯ ರಾಜಾನಮಾಯುಂ ದೇವರ್ಷಿಸತ್ತಮಃ
ಜಗಾಮ ಸಹಸಾ ತಸ್ಯ ಪಶ್ಯತಸ್ಸಾನುಗಸ್ಯ ಹ ॥ ೭ ॥

ಗತೇ ತಸ್ಮಿನ್ಮಹಾಭಾಗೇ ನಾರದೇ ದೇವಸದ್ಮನಿ ।
ಆಯುರಾಗತ್ಯ ತಾಂ ರಾಜ್ಞೀಂ ತತ್ಸರ್ವಂ ವ್ಯನ್ಯವೇದಯತ್ ॥ ೮ ॥

ದತ್ತಾತ್ರೇಯೇಣ ದತ್ತಸ್ತು ಪುತ್ರೋ ದೇವವರೋಪಮಃ ।
ಸ ವೈ ರಾಜ್ಞಿ ಕುಶಲ್ಯಾಸ್ತೇ ವಿಷ್ಣೋಶ್ಚೈವ ಪ್ರಸಾದತಃ ॥ ೯ ॥

---

೪. ಯಾವನು ನಿನ್ನ ಮಗನನ್ನು ಕದ್ದನೋ ಅವನು ನಿನ್ನ ಮನೆಯಲ್ಲಿ ಬಹಳ ಕಾಲವಿದ್ದನು. ಖಂಡಿತ.

೫. ಮಹಾಪರಾಕ್ರಮಿಯಾದ ನಿನ್ನ ಮಗನು ಆ ರಾಕ್ಷಸನ ನಾಶವನ್ನುಮಾಡಿ ಶಿವನ ಮಗಳೊಂದಿಗೆ ನಿನ್ನನ್ನು ಹೊಂದುತ್ತಾನೆ.

೬. ಅವನು ತನ್ನ ಶಕ್ತಿಯಿಂದ ಇಂದ್ರವಿಷ್ಣುಗಳಿಗೆ ಸಮನಾಗುತ್ತಾನೆ. ಅಲ್ಲದೆ ತನ್ನ ಪುಣ್ಯದಿಂದ ಇಂದ್ರನಾಗಿ ಸುಖವನ್ನು ಅನುಭವಿಸುತ್ತಾನೆ.

೭. ಈ ರೀತಿ ನಾರದನು ರಾಜನಾದ ಆಯುವಿಗೆ ಇದೆಲ್ಲವನ್ನೂ ಹೇಳಿ, ಅವನೂ ಅವನ ಕಡೆಯವರೂ ನೋಡುತ್ತಿದ್ದಂತೆಯೇ ಹೊರಟುಹೋದನು.

೮. ನಾರದನು ದೇವಲೋಕಕ್ಕೆ ಹೋಗಲು, ಆಯುವು ತನ್ನ ಹೆಂಡತಿಗೆ ಎಲ್ಲಾ ವಿಷಯವನ್ನೂ ತಿಳಿಸಿದನು.

೯. ದತ್ತಾತ್ರೇಯನು ಮಗನಿಗೋಸ್ಕರ ಉತ್ತಮವಾದ ವರವನ್ನು ಕೊಟ್ಟಿರುವನು. ಆ ಮಗನು ವಿಷ್ಣುವಿನ ಅನುಗ್ರಹದಿಂದ ಕುಶಲಿಯಾಗಿರುವನು.

ಯೇನಾಪ್ಯಸೌ ಹೃತಃ ಪುತ್ರಃ ಸಗುಣೋ ಮೇ ವರಾನನೇ ।
ಶಿರಸ್ತಸ್ಯ ಗೃಹೀತ್ವಾ ತು ಪುನರೇವಾಗಮಿಷ್ಯತಿ ॥ ೧೦ ॥

ಇತ್ಯಾಹ ನಾರದೋ ಭದ್ರೇ ಮಾ ಕೃಥಾಃ ಶೋಕಮೇವ ಚ ।
ತ್ಯಜ ಮೋಹಂ ಮಹಾಮೋದಂ ಕುರು ಭದ್ರೇ ಸುಖಾಕರಂ ॥ ೧೧ ॥

ಭರ್ತುರ್ವಾಕ್ಯಂ ನಿಶಮ್ಯೈವಂ ರಾಜ್ಞೀ ಇಂದುಮತೀ ತತಃ ।
ಅತಿಹರ್ಷಾನ್ವಿತಾ ಜಾತಾ ಪುತ್ರಸ್ಯಾಗಮನಂ ಪ್ರತಿ ॥ ೧೨ ॥

ಯಥೋಕ್ತಂ ದೇವಋಷಿಣಾ ತತ್ತಥೈವ ಭವಿಷ್ಯತಿ ।
ದತ್ತಾತ್ರೇಯೇಣ ಮೇ ದತ್ತಸ್ತನಯೋ ಹ್ಯಜರಾಮರಃ ॥ ೧೩ ॥

ಭವಿಷ್ಯತಿ ನ ಸಂದೇಹಃ ಪ್ರತಿಭಾತ್ಯೇವಮೇವ ಹಿ ।
ಇತ್ಯೇವ ಚಿಂತಯಿತ್ವಾ ತು ನನಾಮ ದ್ವಿಜಪುಂಗವಂ ॥ ೧೪ ॥

---

೧೦. ಉತ್ತಮ ಗುಣಗಳುಳ್ಳ ನನ್ನ ಮಗನನ್ನು ಯಾವನು ಕದ್ದನೋ ಅವನ ತಲೆಯನ್ನು ಕತ್ತರಿಸಿ ಆ ಮಗನೇ ತೆಗೆದುಕೊಂಡು ಬರುವನು.

೧೧. ಹೀಗೆಂದು ನಾರದನು ಹೇಳಿದನು. ದುಃಖಪಡಬೇಡ. ಅಜ್ಞಾನವನ್ನು ಬಿಟ್ಟುಬಿಡು. ಸಂತೋಷದಿಂದಿರು.

೧೨. ಇಂದುಮತಿಯು ಗಂಡನ ಈ ಮಾತನ್ನು ಕೇಳಿ, ಮಗನು ಬರುತ್ತಾನೆಂದು ತಿಳಿದು ಬಹು ಸಂತೋಷಗೊಂಡಳು.

೧೩. ದೇವಋಷಿಯಾದ ನಾರದನು ಹೇಳಿದಂತೆಯೇ ನಡೆಯುತ್ತದೆ. ದತ್ತಾತ್ರೇಯನೂ ನನಗೆ ಮುಪ್ಪು ಸಾವುಗಳಿಲ್ಲದ ಮಗನಾಗುವ ವರವನ್ನು ದಯಪಾಲಿಸಿದ್ದಾನೆ.

೧೪. ಹಾಗೆಯೇ ಆಗುತ್ತದೆ. ಸಂದೇಹವೇ ಇಲ್ಲ. ಹಾಗೆಯೇ ನನಗೆ ತೋರುತ್ತದೆ. ಹೀಗೆಂದು ಯೋಚಿಸಿ ಆ ದತ್ತಾತ್ರೇಯನನ್ನು ವಂದಿಸಿದನು.

ನಮೋಽಸ್ತು ತಸ್ಮೈ ಪರಿಸಿದ್ಧಿದಾಯ
ಅತ್ರೇಃ ಸುಪುತ್ರಾಯ ಮಹಾತ್ಮನೇ ಚ ॥
ಯಸ್ಯ ಪ್ರಸಾದೇನ ಮಯಾ ಸುಪುತ್ರಃ
ಪ್ರಾಪ್ತಸ್ಸುಪುಣ್ಯಶ್ಚ ಯಶಃಪ್ರದಶ್ಚ ॥ ೧೫ ॥

ಏವಮುಕ್ತ್ವಾ ತು ಸಾ ದೇವೀ ವಿರರಾಮ ಸುಹರ್ಷಿತಾ ।
ಆಗಮಿಷ್ಯಂತಮಾಜ್ಞಾಯ ನಹುಷಂ ತನಯಂ ಪುನಃ ॥ ೧೬ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಸಪ್ತೋತ್ತರಶತತಮೋಧ್ಯಾಯಃ**



---

೧೫. ಯಾವನ ಅನುಗ್ರಹದಿಂದ ನಾನು ಸುಪುತ್ರನಾದ, ಯಶೋದಾಯಕನಾದ ಮಗನನ್ನು ಹೊಂದಿದೆನೋ ಅಂತಹ ಅತ್ರಿಯ ಸುಪುತ್ರನಾದ, ಸಿದ್ಧಿಗಳನ್ನೂ ಕೊಡತಕ್ಕ, ಮಹಾತ್ಮನಾದ, ಅಂತಹ ದತ್ತಾತ್ರೇಯನಿಗೆ ನಮಸ್ಕಾರವು.

೧೬. ಮಗನಾದ ನಹುಷನು ಪುನಃ ಬರುವನೆಂಬುದನ್ನು ತಿಳಿದು ಈ ರೀತಿ ಹೇಳಿ ಸಂತೋಷದಿಂದ ಸುಮ್ಮನಾದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟೋತ್ತರಶತತಮೋಽಧ್ಯಾಯಃ

|| ಕುಂಜಲ ಉವಾಚ ||

ಬ್ರಹ್ಮಪುತ್ರೋ ಮಹಾತೇಜಾ ವಸಿಷ್ಠಸ್ತಪತಾಂ ವರಃ ।
ನಹುಷಂ ತಂ ಸಮಾಹೂಯ ಇದಂ ವಚನಮಬ್ರವೀತ್ || ೧ ||

ವನಂ ಗಚ್ಛಸ್ವ ಶೀಘ್ರಂ ತ್ವಂ ವನ್ಯಮಾನಯ ಪುಷ್ಕಲಂ ।
ಸ ಮುನೇರ್ವಾಕ್ಯಮಾಕರ್ಣ್ಯ ನಹುಷಸ್ತು ವನಂ ಯಯೌ || ೨ ||

ಅಯಮೇಷ ಮಹಾಪ್ರಾಜ್ಞೋ ನಹುಷೋ ನಾಮ ವೀರ್ಯವಾನ್ ।
ಆಯುಪುತ್ರಸ್ಸುಧರ್ಮಾತ್ಮಾ ಬಾಲ್ಯಾನ್ಮಾತ್ರಾ ವಿಯೋಜಿತಃ || ೩ ||

---

## ನೂರ ಎಂಟನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಬ್ರಹ್ಮನ ಮಗನಾದ ವಸಿಷ್ಠನು ನಹುಷನನ್ನು ಕರೆದು ಹೀಗೆಂದು ಹೇಳಿದನು.

೨. ಎಲೈ ನಹುಷನೇ, ನೀನು ಕಾಡಿಗೆ ಬೇಗ ಹೋಗಿ ಹೆಚ್ಚಾಗಿ ದರ್ಭೆ, ಸಮಿತ್ತು ಮುಂತಾದುವನ್ನು ತೆಗೆದುಕೊಂಡು ಬಾ ಎನ್ನಲು, ಆ ಋಷಿಯ ಮಾತನ್ನು ಕೇಳಿ ಆಗಲೆಂದು ಕಾಡಿಗೆ ಹೋದನು.

೩. ಇವನೇ ಆಯುವಿನ ಮಗನಾದ ನಹುಷನು. ಬಲಿಷ್ಠನು. ಧರ್ಮಾತ್ಮನು. ಚಿಕ್ಕತನದಲ್ಲಿಯೇ ತಾಯಿಯಿಂದ ಬೇರೆಮಾಡಲ್ಪಟ್ಟನು.

**ಅಸ್ಯೈವಾತಿವಿಯೋಗೇನ ಆಯುಭಾರ್ಯಾ ಪ್ರರೋದಿತಿ ।**
**ಅಶೋಕಸುಂದರೀಚಾ ಪಿ ತಪಸ್ತೇಪೇ ಸುದುಶ್ಚರಂ ॥ ೪ ॥**

**ಕದಾ ಪಶ್ಯತಿ ಸಾ ದೇವೀ ಪುತ್ರಮಿಂದುಮತೀಂ ಶುಭಂ ।**
**ನಹುಷಂ ನಾಮ ಧರ್ಮಜ್ಞಂ ಹೃತಂ ಪೂರ್ವಂ ತು ದಾನವೈಃ ॥ ೫ ॥**

**ತನ್ನಾಶಾಯ ನಿರಾಲಂಬಾ ಶಿವಸ್ಯ ತನಯಾ ವರಾ ।**
**ಅಶೋಕಸುಂದರೀ ಬಾಲಾಪ್ಯಾಯುಪುತ್ರಸ್ಯ ಕಾರಣಾತ್ ॥ ೬ ॥**

**ಸಾ ಸಂಗತಾ ಹ್ಯನೇನಾಪಿ ಕದಾ ಚೈವ ಭವಿಷ್ಯತಿ ।**
**ಏವಂ ಸಾಂಸಾರಿಕಂ ವಾಕ್ಯಂ ದಿವಿ ಚಾರಣಭಾಷಿತಂ ॥ ೭ ॥**

**ಶುಶ್ರಾವ ಸ ಹಿ ಧರ್ಮಾತ್ಮಾ ನಹುಷೋ ವಿಕ್ರಮಾನ್ವಿತಃ ।**
**ಸ ಗತ್ವಾ ವನ್ಯಮಾದಾಯ ವಸಿಷ್ಠಸ್ಯಾಶ್ರಮಂ ಪ್ರತಿ ॥ ೮ ॥**

---

೪. ಇವನ ಅಗಲಿಕೆಯಿಂದಲೇ ಆಯುವಿನ ಹೆಂಡತಿಯು ಅಳುತ್ತಿದ್ದಾಳೆ. ಅಶೋಕಸುಂದರಿಯೂ ಕೂಡ ಘೋರವಾದ ತಪಸ್ಸನ್ನು ಮಾಡಿದಳು.

೫. ಇಂದುಮತಿಯು ಶುಭನಾದ, ಧರ್ಮಜ್ಞನಾದ ಹಿಂದೆ ರಾಕ್ಷಸನಿಂದ ಅಪಹೃತನಾದ ಈ ನಹುಷನನ್ನು ಯಾವಾಗ ನೋಡುವಳೋ?

೬. ಶಿವನ ಮಗಳಾದ ಅಶೋಕಸುಂದರಿಯು ಆಶ್ರಯರಹಿತಳಾಗಿ ಆ ದಾನವನ ನಾಶಕ್ಕೂ, ಈ ಆಯುಪುತ್ರನಾದ ನಹುಷನನ್ನು ಹೊಂದುವುದಕ್ಕೂ ತಪಸ್ಸು ಮಾಡುತ್ತಿದ್ದಾಳೆ.

೭. ಆ ಅಶೋಕಸುಂದರಿಯು ಯಾವಾಗ ಇವನೊಡನೆ ಸೇರುತ್ತಾಳೆಯೋ? ಈ ರೀತಿ ಸಂಸಾರದ ಸಂಬಂಧವಾದ ಮಾತನ್ನು ಅಂತರಿಕ್ಷದಲ್ಲಿ ಚಾರಣರು ಆಡುತ್ತಿದ್ದುದನ್ನು ಕೇಳಿದನು.

೮-೯. ಆ ನಹುಷನು ಕಾಡಿನ ಆ ದರ್ಭೆ ಮುಂತಾದುವನ್ನು ತೆಗೆದುಕೊಂಡು

ವನ್ಯಂ ನಿವೇದ್ಯ ಪುಣ್ಯಾತ್ಮಾ ವಸಿಷ್ಠಾಯ ಮಹಾತ್ಮನೇ ।
ಬದ್ಧಾಂಜಲಿಪುಟೋ ಭೂತ್ವಾ ಭಕ್ತ್ಯಾ ನಮಿತಕಂಧರಃ ॥ ೯ ॥

ತಮುವಾಚ ಮಹಾಪ್ರಾಜ್ಞಂ ವಸಿಷ್ಠಂ ತಪತಾಂ ವರಂ ।
ಭಗವನ್ಮೇ ಶ್ರುತಂ ವಾಕ್ಯಮಪೂರ್ವಂ ಚಾರಣೋದಿತಂ ॥ ೧೦ ॥

ಏಷ ವೈ ನಹುಷೋ ನಾಮ್ನಾ ಆಯುಪುತ್ರೋ ವಿಯೋಜಿತಃ ।
ಮಾತ್ರಾ ಸಹ ಸುದುಃಖೈಸ್ತು ಇಂದುಮತ್ಯಾ ಹಿ ದಾನವೈಃ ॥ ೧೧ ॥

ಶಿವಸ್ಯ ತನಯಾ ಬಾಲಾ ತಪಸ್ತೇಪೇ ಸುದುಶ್ಚರಂ ।
ನಿಮಿತ್ತಮಸ್ಯ ಧೀರಸ್ಯ ನಹುಷಸ್ಯೇತಿ ವೈ ಗುರೋ ॥ ೧೨ ॥

ಏವಮಾಭಾಷಿತಂ ತತ್ರ ತತ್ಸರ್ವಂ ಚ ಶ್ರುತಂ ಮಯಾ ।
ಕೋऽಸಾವಾಯುಃ ಸ ಧರ್ಮಾತ್ಮಾ ಕಾ ಸಾ ಚೇಂದುಮತೀ ಶುಭಾ ॥೧೩॥

ಅಶೋಕಸುಂದರೀ ಕಾ ಸಾ ನಹುಷಶ್ಚೇತಿ ಕಃ ಪ್ರಭೋ ।
ಏತನ್ಮೇ ಸಂಶಯಂ ಜಾತಂ ತದ್ಭವಾಂಶ್ಛೇತ್ತುಮರ್ಹತಿ ॥ ೧೪ ॥

---

ಆಶ್ರಮಕ್ಕೆ ಹೋಗಿ, ವಸಿಷ್ಠನಿಗೆ ಅವೆಲ್ಲವನ್ನೂ ಕೊಟ್ಟು, ಕೈಮುಗಿದುಕೊಂಡು, ಭಕ್ತಿಯಿಂದ ತಲೆ ಬಗ್ಗಿಸಿಕೊಂಡು, ತಪೋನಿಷ್ಠನಾದ ಆ ವಸಿಷ್ಠನನ್ನು ಕುರಿತು ಇಂತೆಂದನು.

೧೦-೧೧. ಸ್ವಾಮಿ, ಚಾರಣರು ಹೇಳುತ್ತಿದ್ದ ಈ ಅಪೂರ್ವವಾದ ವಾಕ್ಯಗಳನ್ನು ಕೇಳಿದೆನು. ಅದೇನೆಂದರೆ, ಇವನು ನಹುಷನು. ಆಯುಪುತ್ರನು. ತಂದೆಯಿಂದ ಬಿಡಲ್ಪಟ್ಟಿದ್ದಾನೆ. ತಾಯಿಯಾದ ಇಂದುಮತಿಯಿಂದಲೂ, ರಾಕ್ಷಸನಿಂದ ಬೇರೆಮಾಡಲ್ಪಟ್ಟನು.

೧೨. ಶಿವನ ಮಗಳು ಈ ನಹುಷನಿಗೋಸ್ಕರ ಉಗ್ರವಾದ ತಪಸ್ಸನ್ನು ಮಾಡಿದಳು. ಈ ರೀತಿ ಅಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಅದೆಲ್ಲವನ್ನೂ ನಾನು ಕೇಳಿದೆ.

೧೩-೧೪. ಆಯುವೆಂಬವನಾರು? ಇಂದುಮತಿ ಯಾರು? ಅಶೋಕಸುಂದರಿ ಎಂಬುವಳು ಯಾರು? ನಹುಷನೆಂಬುವನು ತಾನು ಯಾರು? ಎಂಬ ಸಂಶಯವು ನನಗೆ ಹುಟ್ಟಿದೆ. ಇದನ್ನು ತಾವು ಪರಿಹರಿಸಿ.

ಅನ್ಯಃ ಕೋऽಪಿ ಮಹಾಪ್ರಾಜ್ಞಃ ಕುತ್ರಾಸೌ ನಹುಷೇತಿ ಚ ।
ತಚ್ಚ ಸರ್ವಂ ಮಮ ಬ್ರೂಹಿ ಕಾರಣಾಂತರಮೇವ ಚ ॥ ೧೫ ॥

॥ ವಸಿಷ್ಠ ಉವಾಚ ॥

ಆಯೂ ರಾಜಾ ಸ ಧರ್ಮಾತ್ಮಾ ಸಪ್ತದ್ವೀಪಾಧಿಪೋ ಬಲೀ ।
ಭಾರ್ಯಾ ಚೇಂದುಮತೀ ತಸ್ಯ ಸತ್ಯರೂಪಾ ತಪಸ್ವಿನೀ ॥ ೧೬ ॥

ತಸ್ಯಾಮುತ್ಪಾದಿತಃ ಪುತ್ರೋ ಭವಾನ್ವೈ ಗುಣಮಂದಿರಂ ।
ಆಯುನಾ ರಾಜರಾಜೇನ ಸೋಮವಂಶಸ್ಯ ಭೂಷಣಂ ॥ ೧೭ ॥

ಹರಸ್ಯ ಕನ್ಯಾ ಸುಶ್ರೋಣೀ ಗುಣರೂಪೈರಲಂಕೃತಾ ।
ಅಶೋಕಸುಂದರೀ ನಾಮ್ನಾ ಸುಭಗಾ ಚಾರುಹಾಸಿನೀ ॥ ೧೮ ॥

ತವಾರ್ಥೇ ಸಾ ತಪಸ್ತೇಪೇ ನಿರಾಲಂಬಾ ತು ಯೌವನೇ ।
ತಸ್ಯಾ ಭರ್ತಾ ಭವಾನ್ ಸೃಷ್ಟೋ ಧಾತ್ರಾ ಯೋಗೇನ ನಿಶ್ಚಿತಃ ॥ ೧೯ ॥

ಗಂಗಾಯಾಸ್ತೀರಮಾಸಾದ್ಯ ಧ್ಯಾನಯೋಗಸಮನ್ವಿತಾಂ ।
ಹುಂಡಸ್ತು ದಾನವೇಂದ್ರೋ ಯೋ ದೃಷ್ಟ್ವಾ ಚೈಕಾಕಿನೀಂ ಸ ತಾಂ ॥೨೦॥

---

೧೫. ಮಹಾಪ್ರಾಜ್ಞನಾದ ನಹುಷನೆಂಬುವನು ಮತ್ತೊಬ್ಬನಾರು? ಅವನೆಲ್ಲಿದ್ದಾನೆ? ಅವೆಲ್ಲವನ್ನೂ ಕಾರಣದೊಡನೆ ನನಗೆ ತಿಳಿಸು.

೧೬-೧೭. ವಸಿಷ್ಠನು ಹೇಳಿದನು:—ಆಯುವೆಂಬುವನು ಧರ್ಮಾತ್ಮನು. ಏಳು ದ್ವೀಪಗಳಿಗೆ ಅಧಿಪತಿ. ಬಲಿಷ್ಠನು. ಇಂದುಮತಿಯೆಂಬುವಳು ಅವನ ಹೆಂಡತಿ. ತಪೋನಿಷ್ಠಳು. ಗುಣನಿಧಿಯಾದ ನೀನು ಅವರಿಬ್ಬರಿಗೂ ಮಗನು. ಚಂದ್ರವಂಶಕ್ಕೆ ಭೂಷಣನು.

೧೮-೧೯. ಹರನ ಮಗಳು ಅಶೋಕಸುಂದರಿಯು. ಅವಳು ಗುಣರೂಪಗಳುಳ್ಳವಳು. ನಿನ್ನನ್ನು ಮದುವೆಯಾಗಲು ಯೌವನದಲ್ಲಿಯೇ ತಪಸ್ಸುಮಾಡುವಳು. ಬ್ರಹ್ಮನು ಅವಳಿಗೋಸ್ಕರ ನಿನ್ನನ್ನು ಸೃಷ್ಟಿಮಾಡಿದ್ದಾನೆ.

೨೦-೨೧. ಹುಂಡನೆಂಬ ದಾನವನು ಗಂಗಾತೀರಕ್ಕೆ ಹೋಗಿ ಅಲ್ಲಿ ಒಬ್ಬಂಟಿ

ತಪಸಾ ಪ್ರಜ್ವಲಂತೀಂ ಚ ಸುಭಗಾಂ ಕಮಲೇಕ್ಷಣಾಂ ।
ರೂಪೌದಾರ್ಯಗುಣೋಪೇತಾಂ ಕಾಮಬಾಣೈಃ ಪ್ರಪೀಡಿತಃ ॥ ೨೧ ॥

ತಾಂ ಬಭಾಷೇಂತಿಕಂ ಗತ್ವಾ ಮಮ ಭಾರ್ಯಾ ಭವೇತಿ ಚ ।
ಏವಂ ಸಾ ತದ್ವಚಶ್ಶ್ರುತ್ವಾ ತಮುವಾಚ ಯಶಸ್ವಿನೀ ॥ ೨೨ ॥

ಮಾ ಹುಂಡ ಸಾಹಸಂ ಕಾರ್ಷೀರ್ಮಾ ಜಲ್ಪಸ್ವ ಪುನಃ ಪುನಃ ।
ಅಪ್ರಾಪ್ಯಾಹಂ ತ್ವಯಾ ದೈತ್ಯ ಪರಭಾರ್ಯಾ ವಿಶೇಷತಃ ॥ ೨೩ ॥

ದೈವೇನ ಮೇ ಪುರಾ ಸೃಷ್ಟ ಆಯುಪುತ್ರೋ ಮಹಾಬಲಃ ।
ನಹುಷೋ ನಾಮ ಮೇಧಾವೀ ಭವಿಷ್ಯತಿ ಪತಿರ್ಮಮ ॥ ೨೪ ॥

ದೇವದತ್ತೋ ಮಹಾತೇಜಾ ಮರಣಂ ತ್ವಂ ಪರೀಪ್ಸಸಿ ।
ತತಃ ಶಾಪಂ ಪ್ರದಾಸ್ಯಾಮಿ ಯೇನ ಭಸ್ಮೀ ಭವಿಷ್ಯಸಿ ॥ ೨೫ ॥

ಏವಮಾಕರ್ಣ್ಯ ತದ್ವಾಕ್ಯಂ ಕಾಮಬಾಣಪ್ರಪೀಡಿತಃ ।
ಮಾಯಯಾ ಚ ಹೃತಾ ತೇನ ಪ್ರಣೀತಾ ನಿಜಮಂದಿರಂ ॥ ೨೬ ॥

---

ಗಳಾಗಿ ಧ್ಯಾನಮಾಡುತ್ತಿದ್ದ ಆ ಸುಂದರಿಯನ್ನು ನೋಡಿ ಕಾಮಬಾಣಕ್ಕೆ ಗುರಿಯಾದನು.

೨೨. ಹತ್ತಿರಕ್ಕೆ ಹೋಗಿ ಹುಂಡನು ಆ ಅಶೋಕಸುಂದರಿಯನ್ನು ನನಗೆ ಹೆಂಡತಿಯಾಗೆಂದು ಕೇಳಿದನು. ಈ ಮಾತನ್ನು ಕೇಳಿ ಆಕೆಯು ಹೇಳಿದಳು.

೨೩-೨೪. ಎಲೈ ಹುಂಡನೇ, ವಿಚಾರಿಸದೆ ಮುಂದರಿಯಬೇಡ. ಬಾರಿಬಾರಿಗೂ ಹರಟುತ್ತಿರಬೇಡ. ನಾನು ನಿನಗೆ ಲಭ್ಯಳಲ್ಲ. ನಾನು ಮತ್ತೊಬ್ಬನನ್ನು ವರಿಸಿದ್ದೇನೆ. ದೇವರು ಆಯುಪುತ್ರನೂ, ಬಲಿಷ್ಠನೂ, ಜ್ಞಾನಿಯೂ ಆದ ನಹುಷನನ್ನು ನನಗೆ ಸೃಷ್ಟಿಮಾಡಿದ್ದಾನೆ.

೨೫. ಆ ನಹುಷನು ದೇವರಿಂದಲೇ ಕೊಡಲ್ಪಟ್ಟನು. ಮಹಾತೇಜಸ್ವಿಯು. ನೀನು ನನ್ನನ್ನು ಕಾಮಿಸಿದರೆ ಮರಣವನ್ನು ಹೊಂದುತ್ತೀಯೆ. ನೀನು ಬೂದಿಯಾಗುವಂತೆ ಶಾಪವನ್ನು ಕೊಡುತ್ತೇನೆ, ಎಂದಳು.

೨೬. ಕಾಮಿಯಾದ ಅವನು ಆಕೆಯ ಮಾತನ್ನು ಕೇಳಿ ಮಾಯೆಯಿಂದ ಅವನ ಮನೆಗೆ ಆಕೆಯನ್ನು ಕರೆದುಕೊಂಡುಹೋದನು.

ಜ್ಞಾತ್ವಾ ತಯಾ ಮಹಾಭಾಗ ಶಪ್ತೋsಸೌ ದಾನವಾಧಮಃ ।
ನಹುಷಸ್ಯೈವ ಹಸ್ತೇನ ತವ ಮೃತ್ಯುರ್ಭವಿಷ್ಯತಿ ॥ ೨೭ ॥

ಅಜಾತೇ ತ್ವಯಿ ಸಂಜಾತಾ ವದಸೇ ತ್ವಂ ಯಥೈವ ತತ್ ।
ಸ ತ್ವಾಮಾಯುಸುತೋ ವೀರ ಹೃತೋ ಹುಂಡೇನ ಪಾಪಿನಾ ॥ ೨೮ ॥

ಸೂದೇನ ರಕ್ಷಿತೋ ದಾಸ್ಯಾ ಪ್ರೇಷಿತೋ ಮಮ ಚಾಶ್ರಮಂ ।
ಏವಂ ತ್ವಂ ವನಮಧ್ಯೇ ಚ ದೃಷ್ಟಶ್ಚಾರಣಕಿಂನರೈಃ ॥ ೨೯ ॥

ಯತ್ತು ವೈ ಸ್ಮಾರಿತಂ ವತ್ಸ ಮಯಾ ತತ್ಕಥಿತಂ ಪುನಃ ।
ಜಹಿ ತಂ ಪಾಪಕರ್ತಾರಂ ಹುಂಡಾಖ್ಯಂ ದಾನವಾಧಮಂ ॥ ೩೦ ॥

ನೇತ್ರಾಭ್ಯಾಂ ಹಿ ಪ್ರಮುಂಚಂತೀಮಶ್ರೂಣಿ ಪರಿಮಾರ್ಜಯ ।
ಇತೋ ಗತ್ವಾ ಪ್ರಪಶ್ಯ ತ್ವಂ ಗಂಗಾತೀರಂ ಮಹಾಬಲಂ ॥ ೩೧ ॥

---

೨೭. ಇದನ್ನು ಆಕೆಯು ತಿಳಿದು ನಹುಷನ ಕೈಯಿಂದಲೇ ನಿನಗೆ ಮರಣ ಸಂಭವಿಸಲೆಂದು ಶಾಪಕೊಟ್ಟಳು.

೨೮. ನೀನು ಹುಟ್ಟುವುದಕ್ಕೆ ಮೊದಲು ಆಕೆಯು ಹುಟ್ಟಿದ್ದಳು. ನೀನು ಹೇಳಿದುದು ಎಲ್ಲವೂ ನಿಜವೆ. ಆ ಆಯುಪುತ್ರನಾದ ನಿನ್ನನ್ನು ಪಾಪಿಯಾದ ಹುಂಡನು ಭೀತಿಯಿಂದ ಕದ್ದೊಯ್ದನು.

೨೯. ಅಡಿಗೆಯವನಿಗೆ ನಿನ್ನನ್ನು ಕತ್ತರಿಸಿ ಅಡಿಗೆಮಾಡೆಂದು ಹೇಳಲು, ಆ ಅಡಿಗೆಯವನು ನಿನ್ನನ್ನು ಕತ್ತರಿಸದೆ ದಾಸಿಯ ಕೈಯಲ್ಲಿ ಕೊಟ್ಟನು. ಆ ದಾಸಿಯು ನನ್ನ ಆಶ್ರಮಕ್ಕೆ ನಿನ್ನನ್ನು ತಂದಳು. ಈ ರೀತಿಯಾದ ನಿನ್ನನ್ನು ಕಾಡಿನ ಮಧ್ಯದಲ್ಲಿ ಚಾರಣರು ನೋಡಿದರು.

೩೦. ನೀನು ಅದನ್ನು ಜ್ಞಾಪಿಸಿದೆಯಾದುದರಿಂದ ಎಲ್ಲವನ್ನೂ ಹೇಳಿದ್ದೇನೆ. ಆ ಹುಂಡನೆಂಬ ದಾನವನನ್ನು ಕೊಂದುಹಾಕು.

೩೧-೩೨. ಕಣ್ಣಿನಿಂದ ಹರಿಯುತ್ತಿರುವ ನೀರನ್ನು ಒರಸಿಕೋ. ಇಲ್ಲಿಂದ

**ನಿಪಾತ್ಯ ದಾನವೇಂದ್ರಂ ತ್ವಂ ಕಾರಾಗೃಹಾತ್ಸಮಾಸಯ ।**
**ಅಶೋಕಸುಂದರೀ ಯಾ ಹಿ ತಸ್ಯಾ ಭರ್ತಾ ಭವಸ್ವ ಹಿ　　॥ ೩೨ ॥**

**ಏತತ್ತೇ ಸರ್ವಮಾಖ್ಯಾತಂ ಪ್ರಶ್ನಸ್ಯಾಪಿ ಹಿ ಕಾರಣಂ ।**
**ಆಭಾಷ್ಯ ನಹುಷಂ ವಿಪ್ರೋ ವಿರರಾಮ ಮಹಾಮತಿಃ　　॥ ೩೩ ॥**

**ಆಕರ್ಣ್ಯ ಸರ್ವಂ ಮುನಿನಾ ನಿಯುಕ್ತ-**
**ಮಾಶ್ಚರ್ಯರೂಪಂ ಪ್ರವಿಚಿಂತ್ಯ ಭೂಯಃ ॥**
**ತಸ್ಯಾಂತಮೇಕಃ ಪರಿಕರ್ತುಕಾಮ**
**ಆಯೋಸ್ಸುತಃ ಕೋಪಮಥೋ ಚಕಾರ　　॥ ೩೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ಅಷ್ಟೋತ್ತರಶತತಮೋಽಧ್ಯಾಯಃ**



---

ಗಂಗಾತೀರಕ್ಕೆ ಹೋಗಿ, ಅಲ್ಲಿ ಆ ದಾನವನನ್ನು ಕೊಂದು, ಕಾರಾಗೃಹದಲ್ಲಿರುವ ಅಶೋಕಸುಂದರಿಯನ್ನು ಕರೆತಂದು ಅವಳನ್ನು ಮದುವೆಯಾಗು.

೩೩. ಇದೋ ನೀನು ಕೇಳಿದ ಪ್ರಶ್ನೆಗೆ ಕಾರಣವನ್ನೂ, ಉತ್ತರವನ್ನೂ ಹೇಳಿದ್ದೇನೆ. ಹೀಗೆಂದು ಆ ನಹುಷನಿಗೆ ಋಷಿಯು ಹೇಳಿ ಸುಮ್ಮನಾದನು.

೩೪. ಋಷಿಯು ಹೇಳಿದುದನ್ನು ಆ ನಹುಷನು ಪದೇಪದೇ ಯೋಚಿಸಿ ಆ ಹುಂಡನನ್ನು ತಾನೊಬ್ಬನೇ ವಧಿಸಲು ಕೋಪವನ್ನು ಹೊಂದಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ನೂರ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ನವಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಪ್ರಣಿಪತ್ಯ ಮಹಾತ್ಮಾನಂ ವಸಿಷ್ಠಂ ತಪತಾಂ ವರಂ ।
ಅರಣ್ಯಂ ನಿರ್ಜಗಾಮಾಥ ಬಾಣಪಾಣಿರ್ಧನುರ್ಧರಃ ॥ ೧ ॥

ಏಣಸ್ಯ ಮಾಂಸಂ ಸುವಿಪಾಚ್ಯ ಭೋಜಿತಂ
ಬಾಲಸ್ತಯಾ ರಕ್ಷಿತ ಏವ ಬುದ್ಧ್ಯಾ ॥
ಆಯೋಸ್ಸುಪುತ್ರಃ ಸಗುಣಸ್ಸರೂಪೋ
ದೇವೋಪಮೋ ದೇವಗುಣೈಶ್ಚ ಯುಕ್ತಃ ॥ ೨ ॥

ತೇನೈವ ಮಾಂಸೇನ ಸುಸಂಸ್ಕೃತೇನ
ಮೃಷ್ಟೇನ ಪಕ್ವೇನ ರಸಾನುಗೇನ ॥

---

## ನೂರ ಒಂಭತ್ತನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ಆ ಋಷಿಶ್ರೇಷ್ಠನಾದ ವಸಿಷ್ಠನಿಗೆ ನಹುಷನು ನಮಸ್ಕರಿಸಿ ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು ಅರಣ್ಯಕ್ಕೆ ಹೊರಟನು.

೨. ಇತ್ತ ಆ ದಾಸಿಯು ಜಿಂಕೆಯ ಮಾಂಸವನ್ನು ಬೇಯಿಸಿ ಆ ಹುಡುಗನಿಗೆ ಭೋಜನಮಾಡಿಸಿ ಬುದ್ಧಿಪೂರ್ವಕವಾಗಿ ಆ ಮಗುವನ್ನು ಕಾಪಾಡಿದಳು.

೩. ಚೆನ್ನಾಗಿ ಪಾಕಮಾಡಿದ ಆ ಮನುಷ್ಯಮಾಂಸದ ರುಚಿಯನ್ನೇ ಕೊಡುವ ಆ ಜಿಂಕೆಯ ಮಾಂಸವನ್ನು ತಿನ್ನುತ್ತಾ, ಆ ದಾನವನು ಆ ಮಗುವಿನ ಮಾಂಸವೆಂದೇ

ತಮೇಷ ದೈತ್ಯಂ ಪರಿಭಾಷ್ಯ ಸೂಪೋ
ದುಷ್ಟಂ ಸುಹರ್ಷೇಣ ವ್ಯಭೋಜಯತ್ತದಾ ॥ ೩ ॥

ಬುಭುಜೇ ದಾನವೋ ಮಾಂಸಂ ರಸೇನಾಕ್ತಂ ಸುಚಾಟುನಾ ।
ಹರ್ಷೇಣಾಪಿ ಸಮಾವಿಷ್ಟೋ ಜಗಾಮಾಶೋಕಸುಂದರೀಂ ॥ ೪ ॥

ತಾಮುವಾಚ ತತಸ್ತೂರ್ಣಂ ಕಾಮೋಪಹತಚೇತನಃ ।
ಆಯೋಃ ಪುತ್ರೋ ಮಯಾ ಭದ್ರೇ ಭಕ್ಷಿತಃ ಪತಿರೇವ ತೇ ॥ ೫ ॥

ಮಾಮೇವ ಭಜ ಚಾರ್ವಂಗಿ ಭುಂಕ್ಷ್ವ ಭೋಗಾನ್ಮನೋನುಗಾನ್ ।
ಕಿಂ ಕರಿಷ್ಯಸಿ ತೇನ ತ್ವಂ ಮಾನುಷೇಣ ಗತಾಯುಷಾ ॥ ೬ ॥

ಉವಾಚ ತದ್ವಚಶ್ಶ್ರುತ್ವಾ ಶಿವಕನ್ಯಾ ಯಶಸ್ವಿನೀ ।
ಭರ್ತಾ ಮೇ ದೈವತೈರ್ದತ್ತೋ ಅಮರೋ ದೋಷವರ್ಜಿತಃ ॥ ೭ ॥

---

ತಿಳಿದು ತಿಂದನು. ಅಡಿಗೆಯವನೂ ಕೂಡ ಸಂತೋಷದಿಂದ ಸ್ವಲ್ಪವೂ ವಿಷಯ ಗೊತ್ತಾಗದಂತೆ ಬಡಿಸಿದನು.

೪. ರಸವತ್ತಾಗಿ ಪಾಕಮಾಡಿದ ಆ ಮಾಂಸವನ್ನು ಸಂತೋಷದಿಂದ ಆ ದೈತ್ಯನು ಊಟಮಾಡಿ ಅಶೋಕಸುಂದರಿ ಇರುವಲ್ಲಿಗೆ ಹೋದನು.

೫. ಕಾಮದಿಂದ ಕೂಡಿದ ಮನಸ್ಸುಳ್ಳವನಾಗಿ ಅವಳನ್ನು ಕುರಿತು ಇಗೋ ನೋಡು, ಆಯುವಿನ ಮಗನಾದ ನಿನ್ನ ಗಂಡನನ್ನು ತಿಂದಿದ್ದೇನೆ.

೬. ಎಲೈ ಸುಂದರಿಯೇ, ನನ್ನನ್ನು ಕೂಡಿ ಇಚ್ಛೆಬಂದ ಭೋಗಗಳನ್ನು ಅನುಭವಿಸು. ಅವನು ಮನುಷ್ಯನು, ಆಯುಸ್ಸಿಲ್ಲದವನು. ಅವನನ್ನು ಕಟ್ಟಿಕೊಂಡೇನು ಮಾಡುತ್ತಿ?

೭. ಆ ಮಾತನ್ನು ಕೇಳಿ ಶಿವಕನ್ಯೆಯು, ನನಗೆ ಗಂಡನನ್ನು ದೇವತೆಗಳು ಕೊಟ್ಟಿರುವರು. ಅವನಿಗೆ ಸಾವಿಲ್ಲ. ದೋಷಗಳೂ ಅವನಲ್ಲಿಲ್ಲ. ದೇವತೆಗಳೂ ಮಹಾತ್ಮರೂ ಕೂಡ ಅವನ ಮೃತ್ಯುವನ್ನು ಕಂಡಿಲ್ಲ.

ತಸ್ಯ ಮೃತ್ಯುರ್ನ ವೈ ದೃಷ್ಟೋ ದೇವೈರಪಿ ಮಹಾತ್ಮಭಿಃ ।
ಏವಮಾಕರ್ಣ್ಯ ತದ್ವಾಕ್ಯಂ ದಾನವೋ ದುಷ್ಟಚೇಷ್ಟಿತಃ ॥ ೮ ॥

ತಾಮುವಾಚ ವಿಶಾಲಾಕ್ಷೀಂ ಪ್ರಹಸ್ಯೈವ ಪುನಃ ಪುನಃ ।
ಅದ್ಯೈವ ಭಕ್ಷಿತಂ ಮಾಂಸಮಾಯುಪುತ್ರಸ್ಯ ಸುಂದರಿ ॥ ೯ ॥

ಜಾತಮಾತ್ರಸ್ಯ ಬಾಲಸ್ಯ ನಹುಷಸ್ಯ ದುರಾತ್ಮನಃ ।
ಏವಂ ತ್ವಾಕರ್ಣ್ಯ ಸಾ ವಾಕ್ಯಂ ಕೋಪಂ ಚಕ್ರೇ ಸುದಾರುಣಂ ॥ ೧೦ ॥

ಪ್ರೋವಾಚ ಸತ್ಯಸಂಸ್ಥಾ ಸಾ ತಪಸಾ ಭಾವಿತಾ ಪುನಃ ।
ತಪ ಏವ ಮಯಾ ತಪ್ತಂ ಮನಸಾ ನಿಯಮೇನ ವೈ ॥ ೧೧ ॥

ಆಯುಸೂನುಶ್ಚಿರಾಯುಶ್ಚ ಸ ಸತ್ಯೇನ ಭವಿಷ್ಯತಿ ।
ಇತೋ ಗಚ್ಛ ದುರಾಚಾರ ಯದಿ ಜೀವಿತುಮಿಚ್ಛಸಿ ॥ ೧೨ ॥

ಅನ್ಯಥಾ ತ್ವಾಮಹಂ ಶಪ್ಸ್ಯೇ ಪುನರೇವ ನ ಸಂಶಯಃ ।
ಏವಮಾಕರ್ಣಿತಂ ತಸ್ಯಾಃ ಸೂದೇನ ನೃಪತಿಂ ಪ್ರತಿ ॥ ೧೩ ॥

---

೮. ಈ ಮಾತನ್ನು ಆ ದುಷ್ಟ ದಾನವನು ಕೇಳಿ ಪದೇಪದೇ ನಗುತ್ತಾ ಆಕೆಯನ್ನು ಕುರಿತು ಹೇಳಿದನು.

೯. ಎಲೈ ಸುಂದರಿಯೇ, ಆಯುಪುತ್ರನಾದ, ಬಾಲನಾದ ಆ ನಹುಷನ ಮಾಂಸವನ್ನು ಈಗತಾನೆ ತಿಂದೆನು ಎಂದನು.

೧೦. ಈ ಮಾತನ್ನು ಕೇಳಿ ಬಹುವಾದ ಕೋಪವನ್ನು ಹೊಂದಿ, ಸತ್ಯವತಿಯೂ ತಪೋನಿಷ್ಠೆಯೂ ಆದ ಆಕೆಯು ಹೇಳಿದಳು.

೧೧. ಶುದ್ಧವಾದ ಮನಸ್ಸಿನಿಂದಲೂ, ನಿಯಮದಿಂದಲೂ, ತಪಸ್ಸು ಮಾಡಿದ್ದೇನೆ. ಆಯುವಿನ ಮಗನು ನಿಶ್ಚಯವಾಗಿಯೂ ಚಿರಾಯುವಾಗಿರುವನು.

೧೨. ನೀನು ಬದುಕಬೇಕೆಂಬ ಇಚ್ಛೆ ಇದ್ದರೆ ಇಲ್ಲಿಂದ ಹೊರಡು. ಹಾಗಿಲ್ಲದಿದ್ದರೆ ತಿರುಗಿಯೂ ಶಾಪಕೊಡುತ್ತೇನೆ ಸಂಶಯವಿಲ್ಲ.

೧೩. ಆಗ ಅಡಿಗೆಯವನು ಎಲೈ ದಾನವೇಂದ್ರನೇ, ಈಕೆಯನ್ನು ಬಿಟ್ಟು ಮತ್ತೊಬ್ಬಳನ್ನು ಆಶ್ರಯಿಸು ಎಂದನು.

ಪರಿತ್ಯಜ್ಯ ಮಹಾರಾಜನ್ನೇತಾಮನ್ಯಾಂ ಸಮಾಶ್ರಯ ।
ಸೂದೇನ ಪ್ರೇಷಿತೋ ದೈತ್ಯಃ ಸ ಹುಂಡೋ ದಾನವಾಧಮಃ ॥ ೧೪ ॥

ನಿರ್ಜಗಾಮ ತ್ವರಾಯುಕ್ತಃ ಸ ಸ್ವಾಂ ಭಾರ್ಯಾಂ ಪ್ರಿಯಾಂ ಪ್ರತಿ ।
ಚೇಷ್ಟಿತಂ ನೈವ ಜಾನಾತಿ ದಾಸ್ಯಾ ಸೂದೇನ ಯತ್ಕೃತಂ ॥ ೧೫ ॥

ತಸ್ಯೈ ನಿವೇದಿತಂ ಸರ್ವಂ ಪ್ರಿಯಾಯೈ ವೃತ್ತಮೇವ ಚ ।

॥ ಸೂತ ಉವಾಚ ॥

ಅಶೋಕಸುಂದರೀ ಸಾ ಚ ಮಹತಾ ತಪಸಾ ಕಿಲ ॥ ೧೬ ॥

ದುಃಖಶೋಕೇನ ಸಂತಪ್ತಾ ಕೃಶೀಭೂತಾ ತಪಸ್ವಿನೀ ।
ಚಿಂತಯಂತೀ ಪ್ರಿಯಂ ಕಾಂತಂ ತಂ ಧ್ಯಾಯತಿ ಪುನಃ ಪುನಃ ॥ ೧೭ ॥

ಕಿಂ ನ ಕುರ್ವಂತಿ ವೈ ದೈತ್ಯಾ ಉಪಾಯೈರ್ವಿವಿಧೈರಪಿ ।
ಉಪಾಯಜ್ಞಾಃ ಸದಾ ಬುದ್ಧ್ಯಾ ಹ್ಯುಪಾಯೇನಾಪಿ ಸರ್ವದಾ ॥ ೧೮ ॥

---

೧೪. ಸೂದನು ಹೀಗೆ ಹೇಳುತ್ತಲೂ ಆ ದೈತ್ಯನು ಹೊರಟು ತನ್ನ ಹೆಂಡತಿಯ ಬಳಿಗೆ ಹೋದನು.

೧೫. ದಾಸಿಯೂ ಸೂದನೂ ಮಾಡಿದುದನ್ನು ಅವನು ತಿಳಿದೇ ಇರಲಿಲ್ಲ. ಆದ್ದರಿಂದ ಹೆಂಡತಿಯೊಡನೆ ತಾನು ಇದುವರೆಗೆ ಮಾಡಿದುದೆಲ್ಲವನ್ನೂ ಹೇಳಿದನು.

೧೬-೧೭. ಸೂತನು ಹೇಳಿದನು:—ಆ ಅಶೋಕಸುಂದರಿಯು ಮಹತ್ತಾದ ತಪಸ್ಸಿನಿಂದಲೂ, ದುಃಖದಿಂದಲೂ ಬಾರಿಬಾರಿಗೂ ಆ ಗಂಡನನ್ನು ನೆನೆಸಿಕೊಳ್ಳುತ್ತಲೂ ಕೃಶಳಾಗಿದ್ದಾಳೆ. ಮತ್ತು ಪದೇ ಪದೇ ಆ ಗಂಡನನ್ನೇ ನೆನೆಸಿಕೊಳ್ಳುತ್ತಿದ್ದಾಳೆ.

೧೮-೧೯. ದೈತ್ಯರು ನಾನಾ ಬಗೆಯಾದ ಉಪಾಯಗಳಿಂದ ಏನೇನು ಮಾಡಲಾರರು ? ಉಪಾಯವನ್ನು ಬಲ್ಲವರು ಯಾವಾಗಲೂ ಉಪಾಯದ ಬುದ್ಧಿಯಿಂದಲೇ ಇರುತ್ತಾರೆ. ಅದರಲ್ಲೂ ದಾನವರು ನಾನಾ ಅಭಿಪ್ರಾಯಗಳಿಂದಲೂ, ನಾನಾ ಸಂಪತ್ತುಗಳಿಂದಲೂ, ಅದರಲ್ಲೇ ಆಸಕ್ತರಾಗಿರುತ್ತಾರೆ. ಬಹು ಜಾಗರೂಕತೆಯಿಂದಲೂ, ವೇಗದಿಂದಲೂ, ನಾನು ಹೇಗೆ ಆ ಪಾಪಿಯಾದ ರಾಕ್ಷಸನಿಂದ ಕದಿಯು

ವರ್ತಂತೇ ದನುಜಶ್ರೇಷ್ಠಾ ನಾನಾಭಾವೈಸ್ಸುಸಂಪದಾ ।
ಯಥೋಪಾಯೇನ ವೇಗೇನ ಹೃತಾಹಂ ಪಾಪಿನಾ ಪುರಾ ॥ ೧೯ ॥

ತಥಾ ಸ ಘಾತಿತಃ ಪುತ್ರಆಯೋಶ್ಚೈವ ಭವಿಷ್ಯತಿ ।
ಯಂ ದೃಷ್ಟ್ವಾ ದೈವಯೋಗೇನ ಭವಿತಾರಮನಾಮಯಂ ॥ ೨೦ ॥

ಉದ್ಯಮೇನಾಪಿ ಪಶ್ಯೇತ ಕಿಂ ವಾ ನಶ್ಯತಿ ವಾ ನ ವಾ ।
ಕಿಂ ವಾ ಸ ಉದ್ಯಮಃ ಶ್ರೇಷ್ಠಃ ಕಿಂ ವಾ ತತ್ಕರ್ಮಜಂ ಫಲಂ ॥ ೨೧ ॥

ಭಾವಿಭಾವಃ ಕಥಂ ನಶ್ಯೇತ್ತತೋ ವೇದಃ ಪ್ರತಿಷ್ಠತಿ ।
ವಿಶೇಷೋ ಭಾವಿತೋ ದೈವೈಃ ಸ ಕಥಂ ಚಾನ್ಯಥಾ ಭವೇತ್ ॥ ೨೨ ॥

ಏವಂ ಸಾ ತು ಮಹಾಭಾಗಾ ಚಿಂತಯಂತೀ ಪುನಃ ಪುನಃ ।
ವಿದ್ಯಾಧರಃ ಕಿನ್ನರಸ್ತು ಬೃಹದ್ವಂಶೋ ಮಹಾತನುಃ ॥ ೨೩ ॥

---

ಲ್ಪಟ್ಟಿನೋ ಹಾಗೆ ಸೂಕ್ಷ್ಮದಿಂದಿರುತ್ತಾರೆ. ಹೀಗೆಯೇ ಆಯುವಿನ ಮಗನನ್ನು ಕೊಂದಿರಬಹುದು.

೨೦. ದೈವಯೋಗದಿಂದ ಮುಂದೆ ಹುಟ್ಟುವ ರೋಗರಹಿತನಾದ ಆ ನಹುಷ ನನ್ನು ಸತ್ತನೆಂದು ಈ ರಾಕ್ಷಸನಿಂದ ತಿಳಿದರೂ ಪ್ರಯತ್ನದಿಂದಲೂ, ಸಾಯುತ್ತಾನೆಯೇ ಇಲ್ಲವೇ ಎಂಬುದನ್ನು ನೋಡಬೇಕು. ನಿರ್ಧರಿಸಿಕೊಳ್ಳಬೇಕು.

೨೧. ಪ್ರಪಂಚದಲ್ಲಿ ಉದ್ಯೋಗವು ಹೆಚ್ಚಿನದೇ? ಕರ್ಮದ ಫಲವು ಹೆಚ್ಚಿನದೇ?

೨೨. ಮುಂದೆ ಆಗತಕ್ಕದ್ದು ಹೇಗೆ ನಾಶವಾದೀತು? ವೇದವು ಆ ಮುಂದಿನ ಕರ್ಮವನ್ನು ನಂಬಿಯೇ ಅಲ್ಲವೇ ನಿಂತಿರುವುದು. ದೇವತೆಗಳು ಏನೋ ವಿಶೇಷ ವಾಗುತ್ತದೆಂದು ಹೇಳಿರುವಾಗ ಅದು ಹೇಗೆ ಬೇರೆಯಾಗುವುದು? ಈ ರೀತಿಯಾಗಿ ಆಕೆಯು ಪದೇ ಪದೇ ಯೋಚಿಸುತ್ತಿದ್ದಳು.

೨೩-೨೪. ಆಗ ಕುಲೀನವಾದ ದೊಡ್ಡ ದೇಹವುಳ್ಳ, ರೆಕ್ಕೆಗಳಿಲ್ಲದ, ಎರಡು

**ಏತಸ್ಮಿನ್ನಂತರೇ ಮಹಾಕಾಯಃ ಪಕ್ಷಾಭ್ಯಾಂ ಹಿ ವಿವರ್ಜಿತಃ ।**
**ದ್ವಿಭುಜೋ ವಂಶಹಸ್ತಶ್ಚ ಹಾರಕಂಕಣಶೋಭಿತಃ　　॥ ೨೪ ॥**

**ದಿವ್ಯಗಂಧಾನುಲಿಪ್ತಾಂಗೋ ಭಾರ್ಯಯಾ ಸಹ ಚಾಗತಃ ।**
**ತಾಮುವಾಚ ನಿರಾನಂದಾಂ ಸ ಸುತಾಂ ಶಂಕರಸ್ಯ ಹಿ　　॥ ೨೫ ॥**

**ಕಿಂ ತ್ವಂ ಚಿಂತಯಸೇ ದೇವಿ ವಿದ್ಧಿ ವಿದ್ಯುದ್ಧರಂ ಹಿ ಮಾಂ ।**
**ಕಿನ್ನರಂ ವಿಷ್ಣುಭಕ್ತಂ ತ್ವಾಂ ಪ್ರೇಷಿತಂ ದೇವಸತ್ತಮೈಃ　　॥ ೨೬ ॥**

**ದುಃಖಮೇವಂ ನ ಕರ್ತವ್ಯಂ ಭವತ್ಯಾ ನಹುಷಂ ಪ್ರತಿ ।**
**ಹುಂಡೇನ ಪಾಪಚಾರೇಣ ವಧಾರ್ಥಂ ತಸ್ಯ ಧೀಮತಃ　　॥ ೨೭ ॥**

**ಕೃತಮೇವಾಖಿಲಂ ಕರ್ಮ ಹೃತಶ್ಚಾಯುಸುತಶ್ಶುಭೇ ।**
**ಸ ತು ವೈ ರಕ್ಷಿತೋ ದೇವೈರುಪಾಯೈರ್ವಿವಿಧೈರಪಿ　　॥ ೨೮ ॥**

**ಹುಂಡ ಏವಂ ವಿಜಾನಾತಿ ಆಯುಪುತ್ರೋ ಹೃತೋ ಮಯಾ ।**
**ಭಕ್ಷಿತಸ್ತು ವಿಶಾಲಾಕ್ಷಿ ಇತಿ ಜಾನಾತಿ ಸುವ್ರತೇ　　॥ ೨೯ ॥**

---

ಭುಜಗಳುಳ್ಳ, ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಹಾರ ಕೈಬಳೆಗಳನ್ನು ಹಾಕಿಕೊಂಡಿರುವ ಒಬ್ಬ ಕಿನ್ನರನು ಬಂದನು.

೨೫. ದಿವ್ಯವಾದ ಗಂಧವನ್ನು ಬಳಿದುಕೊಂಡು ಹೆಂಡತಿಯನ್ನು ಜೊತೆಯಲ್ಲಿ ಕರೆದುಕೊಂಡು ಬಂದನು. ಆ ಶಂಕರನ ಮಗಳು ಸಂತೋಷಶೂನ್ಯಳಾಗಿರುವುದನ್ನು ನೋಡಿ ಇಂತೆಂದನು.

೨೬. ದೇವಿ, ನೀನೇಕೆ ಚಿಂತಿಸುತ್ತಿದ್ದೀಯೆ? ನಾನು ವಿದ್ಯುದ್ಧರನೆಂದು ತಿಳಿ. ಕಿನ್ನರನು. ವಿಷ್ಣುಭಕ್ತನು. ದೇವತೆಗಳು ನಿನ್ನ ಬಳಿಗೆ ನನ್ನನ್ನು ಕಳುಹಿಸಿದ್ದಾರೆ.

೨೭-೨೮. ಈ ರೀತಿಯಾಗಿ ನಹುಷನನ್ನು ಕುರಿತು ನೀನು ದುಃಖಿಸಬೇಡ. ಹುಂಡನು ಆ ನಹುಷನನ್ನು ಕೊಲ್ಲುವುದಕ್ಕೆ ಎಲ್ಲಾ ಪ್ರಯತ್ನಗಳನ್ನು ಪಟ್ಟು, ಕದ್ದುಕೊಂಡು ಹೋದನು. ದೇವತೆಗಳು ನಾನಾ ಉಪಾಯಗಳಿಂದ ಅವನನ್ನು ರಕ್ಷಿಸಿದರು.

೨೯. ನಹುಷನನ್ನು ಕದ್ದುತಂದು ತಿಂದುಬಿಟ್ಟೆ ಎಂದು ಹುಂಡನು ತಿಳಿದಿದ್ದಾನೆ.

ಭವತೀಂ ಶ್ರಾವಯಿತ್ವಾ ತು ಗತೋಽಸೌ ದಾನವಾಧಮಃ ।
ಸ್ವೇನ ಪೂರ್ವವಿಪಾಕೇನ ಪುಣ್ಯಸ್ಯಾಪಿ ಮಹಾಯಶಾಃ ॥ ೩೦ ॥

ಪೂರ್ವಜನ್ಮಾರ್ಜಿತೇನೈವ ತವ ಭರ್ತಾ ಸ ಜೀವತಿ ।
ಪುಣ್ಯಸ್ಯಾಪಿ ಬಲೇನೈವ ಯೇಷಾಮಾಯುರ್ವಿನಿರ್ಮಿತಂ ॥ ೩೧ ॥

ಸ್ವಾರ್ಜಿತಸ್ಯ ಮಹಾಭಾಗೇ ನಾಶಮಿಚ್ಛತಿ ಘಾತುಕಃ ।
ಹತಮಾನಾ ಮಹಾಪಾಪಾಃ ಪರತೇಜೋವಿದೂಷಕಾಃ ॥ ೩೨ ॥

ತೇಷಾಮಥೋ ವಿನಾಶಾಯ ಪ್ರವೃತ್ತಂ ಹಿ ದಿನೇ ದಿನೇ ।
ನಾನಾವಿಧೈರುಪಾಯೈಸ್ತೇ ವಿಷಶಸ್ತ್ರಾದಿಭಿಸ್ತತಃ ॥ ೩೩ ॥

ಹಂತುಮಿಚ್ಛಂತಿ ತಂ ಪುಣ್ಯಂ ಪುಣ್ಯಕರ್ಮಾಭಿರಕ್ಷಿತಂ ।
ಪಾಪಿನಶ್ಚೈವ ಹುಂಡಾದಾ ಮೋಹನಸ್ತಂಭನಾದಿಭಿಃ ॥ ೩೪ ॥

---

೩೦-೩೧. ನಿನಗೆ ನಹುಷನು ಸತ್ತನೆಂದು ಹೇಳಿ ಆ ದಾನವನು ಹೊರಟು ಹೋದನು. ಆ ನಹುಷನು ತಾನು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದಿಂದಲೂ, ನೀನು ಮಾಡಿದ ತಪಸ್ಸಿನಿಂದಲೂ ಆತನು ಜೀವಿಸಿದ್ದಾನೆ. ಅವರವರ ಪುಣ್ಯಬಲದಿಂದಲ್ಲವೇ ಅವರವರ ಆಯುಸ್ಸಿನ ನಿರ್ಮಾಣವು?

೩೨. ಕ್ರೂರನಾದವನು ತನ್ನ ಪೂರ್ವಜನ್ಮದ ಪುಣ್ಯದ ನಾಶವನ್ನು ಅಪೇಕ್ಷಿಸಿ ಆ ಕೆಟ್ಟಕೆಲಸವನ್ನು ಮಾಡುತ್ತಾನೆ. ಅದರಿಂದಲೇ ಅವರು ಕಳ್ಳತನ, ಪಾಪಕೆಲಸ, ಪರರನ್ನು ನಿಂದಿಸುವುದು. ಇವೆಲ್ಲವನ್ನೂ ಮಾಡುತ್ತಾರೆ. ದಿನವೂ ಮಾಡುವ ಆ ಕೆಟ್ಟಕೆಲಸವು ಅವರವರ ವಿನಾಶಕ್ಕಾಗಿಯೇ ಎಂದು ತಿಳಿ.

೩೩. ಬಗೆಬಗೆಯ ಉಪಾಯಗಳಿಂದಲೂ ವಿಷ, ಶಸ್ತ್ರಾದಿಗಳಿಂದಲೂ, ಆ ಹಿಂದಿನ ಜನ್ಮದಲ್ಲಿ ಗಳಿಸಿದ ಪುಣ್ಯವನ್ನು ನಾಶಮಾಡಿಕೊಳ್ಳಲು ಅಪೇಕ್ಷಿಸುತ್ತಾರೆ.

೩೪. ಪಾಪಿಗಳಾದ ಹುಂಡನೇ ಮುಂತಾದ ದುರಾಚಾರಿಗಳು ಮೋಹನಸ್ತಂಭನಗಳಿಂದಲೂ, ನಾನಾ ಬಗೆಯಾದ ಇತರ ಉಪಾಯಗಳಿಂದಲೂ, ಜನರನ್ನು ಪೀಡಿಸುತ್ತಾರೆ.

ಪೀಡಯಂತಿ ದುರಾಚಾರಾ ನಾನಾಭೇದೈರ್ಬಲಾಬಲೈಃ ।
ಸುಕೃತಸ್ಯ ಪ್ರಯೋಗೇಣ ಪೂರ್ವಜನ್ಮಾರ್ಜಿತೇನ ವಾ ॥ ೩೫ ॥

ಪುಣ್ಯಸ್ಯಾಪಿ ಮಹಾಭಾಗೇ ಪುಣ್ಯವಂತಂ ಚ ರಕ್ಷಿತಂ ।
ವಿಫಲತ್ವಂ ಪ್ರಯಾಂತ್ಯೇವ ಉಪಾಯಾಃ ಪಾಪಿಭಿಃ ಕೃತಾಃ ॥ ೩೬ ॥

ಯಂತ್ರತಂತ್ರಾಣಿ ಮಂತ್ರಾಶ್ಚ ಶಸ್ತ್ರಾಸ್ತ್ರವಿಷಬಂಧನಾಃ ।
ರಕ್ಷಯಂತಿ ಮಹಾತ್ಮಾನಂ ದೇವಪುಣ್ಯೈಸ್ಸುರಕ್ಷಿತಂ ॥ ೩೭ ॥

ಕರ್ತಾರೋ ಭಸ್ಮತಾಂ ಯಾಂತಿ ಸ ವೈ ತಿಷ್ಠತಿ ಪುಣ್ಯಭಾಕ್ ।
ಆಯುಪುತ್ರಸ್ಯ ವೀರಸ್ಯ ರಕ್ಷಕಾ ದೇವತಾಶ್ಶುಭೇ ॥ ೩೮ ॥

ಪುಣ್ಯಸ್ಯ ಸಂಚಯಂ ಸರ್ವಂ ತಪಸಾಂ ನಿಧಿಮೇವ ಚ ।
ತಸ್ಮಾಚ್ಚ ರಕ್ಷಿತೋ ವೀರೋ ನಹುಷೋ ಬಲಿನಾಂ ವರಃ ॥ ೩೯ ॥

ಸತ್ಯೇನ ತಪಸಾ್ತ್ನೇನ ಪುಣ್ಯೈಶ್ಚ ಸಂಯಮೈರ್ದಮೈಃ ।
ಮಾ ಕೃಥಾ ದಾರುಣಂ ದುಃಖಂ ಮುಂಚ ಶೋಕಮಕಾರಣಂ ॥ ೪೦ ॥

---

೩೫-೩೬. ಪೂರ್ವಜನ್ಮದಲ್ಲಿ ತಾವು ಮಾಡಿರುವ ಸುಕೃತದಿಂದಾಗಲಿ, ಈ ಜನ್ಮದಲ್ಲಿ ಮಾಡುತ್ತಿರುವ ಪುಣ್ಯ ಕೆಲಸದಿಂದಾಗಲಿ ಪುಣ್ಯವಂತರು ಬದುಕಿಕೊಳ್ಳುತ್ತಾರೆ. ಪಾಪಿಗಳು ಮಾಡುವ ದುರಾಚಾರಗಳು ವಿಫಲವಾಗುತ್ತವೆ.

೩೭. ಯಂತ್ರ, ತಂತ್ರ, ಮಂತ್ರ, ಶಸ್ತ್ರ, ಅಗ್ನಿ, ವಿಷ, ಬಂಧನ, ಮುಂತಾದುವು ಪುಣ್ಯವಂತನು ತಾನು ಮಾಡಿರುವ ಪುಣ್ಯದಿಂದ ಬಾಧಕೊಡದಂತೆ ರಕ್ಷಿಸುತ್ತವೆ.

೩೮. ಕೆಟ್ಟದ್ದನ್ನು ಮಾಡತಕ್ಕವರು ಬೂದಿಯಾಗಿ ಹೋಗುತ್ತಾರೆ. ಆಯುಪುತ್ರನಿಗೆ ರಕ್ಷಕರು ದೇವತೆಗಳು.

೩೯. ಅವನು ಪುಣ್ಯಗಳ ಗಂಟು. ತಪಸ್ಸಿನ ನಿಧಿ. ಆದ್ದರಿಂದ ಬಲಿಷ್ಠನಾದ ಅವನು ಕಾಪಾಡಲ್ಪಟ್ಟನು.

೪೦. ಸತ್ಯ, ತಪಸ್ಸು, ಪುಣ್ಯ, ಇಂದ್ರಿಯನಿಗ್ರಹ, ಮನಸ್ಸಿನ ಸ್ಥಿರತೆಗಳಿಂದ ಕೂಡಿಕೊಂಡಿರು. ಹೆಚ್ಚು ದುಃಖವನ್ನು ಮಾಡಬೇಡ. ಕಾರಣವಿಲ್ಲದೇ ದುಃಖಿಸಬೇಡ.

ಸ ಹಿ ಜೀವತಿ ಧರ್ಮಾತ್ಮಾ ಮಾತ್ರಾ ಪಿತ್ರಾ ವಿನಾ ವನೇ ।
ತಪೋವನೇ ನಸತ್ಯೇಕಸ್ತಪಸ್ವಿಭಿರಲಂಕೃತಃ ॥ ೪೧ ॥

ವೇದವೇದಾಂಗತತ್ತ್ವಜ್ಞೋ ಧನುರ್ವೇದಸ್ಯ ಪಾರಗಃ ।
ವಿರಾಜತೇ ಶಶೀ ಯದ್ವತ್ಸ್ವಕಲಾಭಿಸ್ಸುತೇಜಸಾ ॥ ೪೨ ॥

ತಥಾ ವಿರಾಜತೇ ಸೋಽಪಿ ಸ್ವಕಲಾಭಿಸ್ಸುಮಧ್ಯಮೇ ।
ವಿದ್ಯಾಭಿಶ್ಚ ಮಹಾಪುಣ್ಯೈಸ್ತಪೋಭಿರ್ವಿವಿಧೈಸ್ತಥಾ ॥ ೪೩ ॥

ರಾಜತೇ ಪರವೀರಘ್ನೋ ರಿಪುಹಾ ಸುರವಲ್ಲಭಃ ।
ಹುಂಡಂ ನಿಹತ್ಯ ದೈತ್ಯೇಂದ್ರಂ ತ್ವಾಮೇವಂ ಹಿ ಪ್ರಲಪ್ಸ್ಯತೇ ॥ ೪೪ ॥

ತ್ವಯಾ ಸಾರ್ಧಂ ಸ್ತ್ರಿಯಾ ಚೈವ ಪೃಥಿವ್ಯಾಮೇಕಭೂಪತಿಃ ।
ಭವಿಷ್ಯತಿ ಮಹಾಯೋಗೀ ಯಥಾ ಸ್ವರ್ಗೇ ತು ವಾಸವಃ ॥ ೪೫ ॥

ತ್ವಂ ತಸ್ಮಾತ್ಪ್ರಾಪ್ಸ್ಯಸೇ ಭದ್ರೇ ಸುಪುತ್ರಂ ವಾಸವೋಪಮಮ್ ।
ಯಯಾತಿಂ ನಾಮ ಧರ್ಮಜ್ಞಂ ಪ್ರಜಾಪಾಲನತತ್ಪರಂ ॥ ೪೬ ॥

---

೪೧. ತಾಯಿತಂದೆಗಳಿಲ್ಲದೆ ಕಾಡಿನಲ್ಲಿ ಬದುಕಿದ್ದಾನೆ. ತಪಸ್ವಿಗಳಿಂದ ಉಪಚರಿಸಲ್ಪಟ್ಟವನಾಗಿ ತಪೋವನದಲ್ಲಿ ಒಬ್ಬನೇ ಇದ್ದಾನೆ.

೪೨-೪೩. ವೇದವೇದಾಂಗಗಳನ್ನು ತಿಳಿದಿದ್ದಾನೆ. ಧನುರ್ವೇದದಲ್ಲಿ ಪಂಡಿತನಾಗಿದ್ದಾನೆ. ಚಂದ್ರನು ತನ್ನ ಕಲೆಗಳಿಂದ ಪ್ರಕಾಶಿಸುವಂತೆ ವಿದ್ಯೆಗಳಿಂದಲೂ, ಪುಣ್ಯದಿಂದಲೂ, ತಪಸ್ಸಿನಿಂದಲೂ, ಆ ನಹುಷನು ಪ್ರಕಾಶಿಸುತ್ತಿದ್ದಾನೆ.

೪೪. ಶತ್ರುವೀರನಾಶಕನೂ, ದೇವತೆಗಳಿಗೆ ಪ್ರಿಯನೂ, ಆದ ಆ ನಹುಷನು ಹೀಗೆ ಸುಖವಾಗಿದ್ದಾನೆ. ಅವನು ದಾನವನಾದ ಹುಂಡನನ್ನು ಕೊಂದು ನಿನ್ನನ್ನು ಹೊಂದುತ್ತಾನೆ.

೪೫. ಹೆಂಡತಿಯಾದ ನಿನ್ನೊಡನೆ ಆ ನಹುಷನು ಕೂಡಿಕೊಂಡು ಭೂಮಿಯಲ್ಲಿ ಒಬ್ಬನೇ ಚಕ್ರವರ್ತಿಯಾಗಿ, ಸ್ವರ್ಗದಲ್ಲಿ ಇಂದ್ರನು ಪ್ರಕಾಶಿಸುವಂತೆ ಪ್ರಕಾಶಿಸುವನು.

೪೬. ಎಲೈ ಭದ್ರೆಯೇ! ನೀನು ಆ ನಹುಷನಿಂದ ಇಂದ್ರನಿಗೆ ಸಮಾನನಾದ, ಪ್ರಜಾಪಾಲನದಲ್ಲಿ ಆಸಕ್ತನಾದ, ಧರ್ಮಜ್ಞನಾದ ಯಯಾತಿ ಎಂಬ ಮಗನನ್ನು ಹೊಂದುತ್ತೀಯೆ.

**ತಥಾ ಕನ್ಯಾಶತಂ ಚಾಪಿ ರೂಪಸೌಭಾಗ್ಯಗುಣಾನ್ವಿತಂ ।**
**ಯಾಸಾಂ ಪುಣ್ಯೈರ್ಮಹಾರಾಜ ಇಂದ್ರಲೋಕಂ ಪ್ರಯಾಸ್ಯತಿ　　॥ ೪೭ ॥**

**ಇಂದ್ರತ್ವಂ ಭೋಕ್ಷ್ಯತೇ ದೇವಿ ನಹುಷಃ ಪುಣ್ಯವಿಕ್ರಮಃ ।**
**ಯಯಾತಿರ್ನಾಮ ಧರ್ಮಾತ್ಮಾ ಆತ್ಮಜಸ್ತೇ ಭವಿಷ್ಯತಿ　　॥ ೪೮ ॥**

**ಪ್ರಜಾಪಾಲೋ ಮಹಾರಾಜಃ ಸರ್ವಜೀವದಯಾಪರಃ ।**
**ತಸ್ಯ ಪುತ್ರಾಸ್ತು ಚತ್ವಾರೋ ಭವಿಷ್ಯಂತಿ ಮಹೌಜಸಃ　　॥ ೪೯ ॥**

**ಬಲವೀರ್ಯಗುಣೋಪೇತಾ ಧನುರ್ವೇದಸ್ಯ ಪಾರಗಾಃ ।**
**ಪ್ರಥಮಸ್ತುರ್ವಸುರ್ನಾಮ ಪುರುರ್ನಾಮ ದ್ವಿತೀಯಕಃ　　॥ ೫೦ ॥**

**ಉರುರ್ನಾಮ ತೃತೀಯಸ್ತು ಚತುರ್ಥೋ ವೀರ್ಯವಾನ್ಯದುಃ ।**
**ಏವಂ ಪುತ್ರಾ ಮಹಾವೀರ್ಯಾಸ್ತೇಜಸ್ವಿನೋ ಮಹಾಬಲಾಃ　　॥ ೫೧ ॥**

**ಭವಿಷ್ಯಂತಿ ಮಹಾತ್ಮಾನಃ ಸರ್ವತೇಜಸ್ಸಮನ್ವಿತಾಃ ।**
**ಯದೋಶ್ಚೈವ ಸುತಾ ಧೀರಾಃ ಸಿಂಹತುಲ್ಯಪರಾಕ್ರಮಾಃ　　॥ ೫೨ ॥**

---

೪೭. ರೂಪ ಔದಾರ್ಯಗಳಿಂದ ಕೂಡಿದ ನೂರುಜನ ಕನ್ಯೆಯರೂ ಹುಟ್ಟುತ್ತಾರೆ. ಅವರ ಪುಣ್ಯದಿಂದಲೇ ಆ ನಹುಷನು ಇಂದ್ರಲೋಕವನ್ನು ಹೊಂದುತ್ತಾನೆ.

೪೮. ಆ ನಹುಷನು ಪುಣ್ಯವಂತನಾಗಿ ಇಂದ್ರತ್ವವನ್ನು ಅನುಭವಿಸುತ್ತಾನೆ. ಯಯಾತಿಯೆಂಬ ಮಗನೂ ನಿನಗೆ ಹುಟ್ಟುತ್ತಾನೆ.

೪೯. ಅವನಿಗೆ ನಾಲ್ಕುಜನ ಮಕ್ಕಳಾಗುತ್ತಾರೆ. ಅವನು ದಯೆಯಿಂದ ಭೂಮಿಯನ್ನು ಪಾಲಿಸುತ್ತಾನೆ.

೫೦. ಬಲ, ವೀರ್ಯಗಳುಳ್ಳವರಾಗಿಯೂ, ಧನುರ್ವೇದದಲ್ಲಿ ಪಾರಗರಾಗಿಯೂ, ಆಗುತ್ತಾರೆ. ಆ ಮಕ್ಕಳುಗಳಲ್ಲಿ ಒಂದನೆಯವನು ತುರ್ವಸು. ಎರಡನೆಯವನು ಪುರು. ಮೂರನೆಯವನು ಉರು. ನಾಲ್ಕನೆಯವನು ಯದು ಎಂಬವರು.

೫೧. ಈ ಮಕ್ಕಳು ಮಹಾ ಬಲಿಷ್ಠರಾಗಿಯೂ, ತೇಜಸ್ವಿಗಳಾಗಿಯೂ, ಮಹಾತ್ಮರಾಗಿಯೂ ಆಗುತ್ತಾರೆ.

೫೨. ಯದುವಿಗೆ ಸಿಂಹದ ಬಲದಂತೆ ಬಲಿಷ್ಠರಾದ ಮಕ್ಕಳಾಗುತ್ತಾರೆ. ಅವರ ಹೆಸರನ್ನು ಹೇಳುತ್ತೇನೆ ಕೇಳು.

ತೇಷಾಂ ನಾಮಾನಿ ಭದ್ರೇ ತೇ ಶೃಣು ಮೇ ಗದತಶ್ಶುಭೇ ।
ಭೋಜಶ್ಚ ಭೀಮಕಶ್ಚಾಪಿ ಅನ್ಧಕಃ ಕುಕ್ಕುರಸ್ತಥಾ ॥ ೫೩ ॥

ವೃಷ್ಣಿರ್ನಾಮ ಸುಧರ್ಮಾತ್ಮಾ ಸತ್ಯಾಧಾರೋ ಭವಿಷ್ಯತಿ ।
ಷಷ್ಠಸ್ತು ಶುತ್ರಸೇನಶ್ಚ ಶ್ರುತಾಧಾರಶ್ಚ ಸಪ್ತಮಃ ॥ ೫೪ ॥

ಕಾಲದಂಷ್ಟ್ರೋ ಮಹಾವೀರ್ಯಃ ಸಮರೇ ಕಾಲಜಿದ್ಬಲೀ ।
ಯದೋಃ ಪುತ್ರಾ ಮಹಾವೀರ್ಯಾ ಯಾದವಾಖ್ಯಾ ಧರಾತಳೇ ॥ ೫೫ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಭವಿಷ್ಯಂತಿ ಧರಾತಳೇ ।
ಏವಂ ನಹುಷವಂಶೋ ವೈ ತವ ದೇವಿ ಭವಿಷ್ಯತಿ ॥ ೫೬ ॥

ದುಃಖಮೇವ ಪರಿತ್ಯಜ್ಯ ಸ್ಥೀಯತಾಮಧುನಾ ಸುಖಂ ।
ಸಮೇಷ್ಯತಿ ಮಹಾಪ್ರಾಜ್ಞಸ್ತವ ಭರ್ತಾ ಶುಭಾನನೇ ॥ ೫೭ ॥

ನಿಹತ್ಯ ದಾನವಂ ಹುಂಡಂ ತ್ವಾಮೇವಂ ಪರಿಣೇಷ್ಯತಿ ।
ದುಃಖಜಾತಾನಿ ಸೋಷ್ಣಾನಿ ನೇತ್ರಾಭ್ಯಾಂ ಹಿ ಪತಂತಿ ಚ ॥ ೫೮ ॥

---

೫೩-೫೪. ಯದುವಿಗೆ ಕ್ರಮವಾಗಿ ಭೋಜ, ಭೀಮ, ಅಂಧಕ, ಕುಕ್ಕುರ, ವೃಷ್ಣಿ, ಶ್ರುತಸೇನ, ಶ್ರುತಾಧಾರ, ಕಾಲದಂಷ್ಟ್ರ ಎಂಬುದಾಗಿ ಎಂಟುಜನ ಮಕ್ಕಳು.

೫೫-೫೬. ಯದುವಿನ ಮಕ್ಕಳು ಬಲಿಷ್ಠರಾಗಿಯೂ, ಖ್ಯಾತರಾಗಿಯೂ ಆಗುತ್ತಾರೆ. ಅವರಿಗೆ ಮಕ್ಕಳು ಮೊಮ್ಮಕ್ಕಳುಗಳು ಆಗುತ್ತಾರೆ. ಈ ರೀತಿಯಾಗಿ ನಹುಷನ ವಂಶವು ವೃದ್ಧಿಹೊಂದುತ್ತದೆ.

೫೭. ದುಃಖವನ್ನು ಬಿಟ್ಟು ಈಗ ಸುಖದಿಂದಿರು. ಮಹಾಪ್ರಾಜ್ಞನಾದ ನಿನ್ನ ಗಂಡನು ಬಂದು, ದಾನವನಾದ ಹುಂಡನನ್ನು ಕೊಂದು, ನಿನ್ನನ್ನು ಮದುವೆಯಾಗುತ್ತಾನೆ.

೫೮-೫೯. ದುಃಖದಿಂದ ಕಣ್ಣಿನಲ್ಲಿ ಬರುತ್ತಿರುವ ಇಂದುಮತಿಯ ಕಣ್ಣೀರನ್ನು

ಅಶ್ರೂಣಿ ಚೇಂದುಮತ್ಯಾಶ್ಚ ಸಂಮಾರ್ಜಯತಿ ಮಾನದಃ ।
ಆಯೋಶ್ಚ ದುಃಖಮುದ್ಧೃತ್ಯ ಸ್ವಕುಲಂ ತಾರಯಿಷ್ಯತಿ ॥ ೫೯ ॥

ಸುಖಿನಂ ಪಿತರಂ ಕೃತ್ವಾ ಪ್ರಜಾಪಾಲೋ ಭವಿಷ್ಯತಿ ।
ಏತತ್ತೇ ಸರ್ವಮಾಖ್ಯಾತಂ ದೇವಾನಾಂ ಕಥನಂ ಶುಭೇ ।
ದುಃಖಶೋಕಂ ಪರಿತ್ಯಜ್ಯ ಸುಖೇನ ಪರಿವರ್ತಯ ॥ ೬೦ ॥

॥ ಅಶೋಕಸುಂದರ್ಯುವಾಚ ॥

ಕದಾ ಹ್ಯೇಷ್ಯತಿ ಮೇ ಭರ್ತಾ ವಿಹಿತೋ ದೈವತ್ಯೈರ್ಯದಿ ।
ಸತ್ಯಂ ವದಸ್ವ ಧರ್ಮಜ್ಞ ಮಮ ಸೌಖ್ಯ ಪ್ರವರ್ಧಯ ॥ ೬೧ ॥

ಶೀಘ್ರಂ ದ್ರಕ್ಷ್ಯಸಿ ಭರ್ತಾರಂ ತ್ವಮೇವ ಶೃಣು ಸುಂದರಿ ।
ಏವಮುಕ್ತ್ವಾ ಜಗಾಮಾಥ ಗಂಧರ್ವೋ ವಿಬುಧಾಲಯಂ ॥ ೬೨ ॥

---

ಆ ನಹುಷನು ಒರಸಿ ಆಯುವಿನ ದುಃಖವನ್ನು ನಾಶಮಾಡಿ ಸ್ವಕುಲವನ್ನುದ್ಧಾರ ಮಾಡುತ್ತಾನೆ.

೬೦. ತಂದೆಯನ್ನು ಸುಖವುಳ್ಳವನನ್ನಾಗಿ ಮಾಡಿ ಪ್ರಜಾಪಾಲಕನಾಗುತ್ತಾನೆ. ದೇವತೆಗಳು ಹೇಳಿರುವುದನ್ನೆಲ್ಲಾ ಹೇಳಿದ್ದೇನೆ. ದುಃಖವನ್ನು ಬಿಟ್ಟು ಇನ್ನು ಸುಖವಾಗಿರು.

೬೧. ಅಶೋಕಸುಂದರಿಯು ಹೇಳಿದಳು:—ದೇವತೆಗಳು ಹೇಳಿರುವ ಪಕ್ಷದಲ್ಲಿ ನನ್ನ ಗಂಡನು ಯಾವಾಗ ಬರುತ್ತಾನೆಂಬುದನ್ನು ತಿಳಿಸು. ಧರ್ಮಜ್ಞನೇ, ಸತ್ಯವಾದ ಮಾತನ್ನು ಹೇಳಿ ನನಗೆ ಸುಖವನ್ನು ಹೆಚ್ಚಿಸು.

೬೨. ಸುಂದರಿಯೇ! ಕೇಳು ಜಾಗ್ರತೆಯಾಗಿಯೇ ನಿನ್ನ ಗಂಡನನ್ನು ಕಾಣುತ್ತೀಯೆ ಎಂದು ಹೇಳಿ ಆ ಗಂಧರ್ವನು ಸ್ವರ್ಗಕ್ಕೆ ಹೊರಟುಹೋದನು.

**ಅಶೋಕಸುಂದರೀ ಚಾಪಿ ತಪಸ್ತೇಪೇ ಹಿ ತತ್ರ ವೈ ।**
**ಕಾಮಂ ಕ್ರೋಧಂ ಪರಿತ್ಯಜ್ಯ ಲೋಭಂ ಚಾಪಿ ಶಿವಾತ್ಮಜಾ ॥ ೬೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ**
**ಗುರುತೀರ್ಥೇ ಚ್ಯವನನೋಪಾಖ್ಯಾನೇ ನವಾಧಿಕಶತತಮೋಧ್ಯಾಯಃ**



---

೬೩. ಇದನ್ನು ಕೇಳಿ ಅಶೋಕಸುಂದರಿಯು ಕಾಮ, ಕ್ರೋಧ, ಲೋಭ, ಮೋಹಗಳನ್ನು ಬಿಟ್ಟು ತಪಸ್ಸುಮಾಡುತ್ತಿದ್ದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಆಮಂತ್ರ್ಯ ಚ ಮುನೀನ್ಸರ್ವಾನ್ವಸಿಷ್ಠಂ ತಪತಾಂ ವರಂ ।
ಸಮುತ್ಸುಕೋ ಗನ್ತುಕಾಮೋ ನಹುಷೋ ದಾನವಂ ಪ್ರತಿ ॥ ೧ ॥

ತತಸ್ತೇ ಪುನಯಸ್ಸರ್ವೇ ವಸಿಷ್ಠಾದ್ಯಾಸ್ತಪೋಧನಾಃ ।
ಆಶೀರ್ಭಿರಭಿನಂದ್ಯೈನಮಾಯೋಃ ಪುತ್ರಂ ಮಹಾಬಲಂ ॥ ೨ ॥

ಆಕಾಶೇ ದೇವತಾಸ್ಸರ್ವಾ ಜಘ್ನುರ್ವೈ ದುಂದುಭೀನ್ಮುದಾ ।
ಪುಷ್ಪವೃಷ್ಟಿಂ ಪ್ರಚಕ್ರುಶ್ಚ ನಹುಷಸ್ಯಾಪಿ ಮೂರ್ಧನಿ ॥ ೩ ॥

---

## ನೂರ ಹತ್ತನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ಆ ಆಶ್ರಮದಲ್ಲಿರುವ ಎಲ್ಲಾ ಋಷಿಗಳಿಗೂ ಹೋಗಿಬರುತ್ತೇನೆಂದು ಹೇಳಿ, ತಪಸ್ವಿಯಾದ ವಸಿಷ್ಠನಿಗೂ ಹೇಳಿ ಆ ರಾಕ್ಷಸನನ್ನು ವಧಿಸಲು ಮನಸ್ಸುಮಾಡಿ ಹೊರಟನು.

೨. ವಸಿಷ್ಠನೇ ಮೊದಲಾದ ಋಷಿಗಳು ಈ ಆಯುವಿನ ಮಗನಾದ ನಹುಷನನ್ನು ಆಶೀರ್ವದಿಸಿದರು.

೩. ಆಕಾಶದಲ್ಲಿ ದೇವತೆಗಳು ದುಂದುಭಿಗಳನ್ನು ಬಾರಿಸಿದರು. ಮತ್ತು ಆ ದೇವತೆಗಳು ನಹುಷನ ತಲೆಯಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು.

**ಅಥ ದೇವಸ್ಸಹಸ್ರಾಕ್ಷಃ ಸುರೈಸ್ಸಾರ್ಧಂ ಸಮಾಗತಃ ।**
**ದದೌ ಶಸ್ತ್ರಾಣಿ ಚಾಸ್ತ್ರಾಣಿ ಸೂರ್ಯತೇಜೋಪಮಾನಿ ಚ ॥ ೪ ॥**

**ದೇವೇಭ್ಯೋ ನೃಪಶಾರ್ದೂಲೋ ಜಗೃಹೇ ದ್ವಿಜಸತ್ತಮಾಃ ।**
**ತಾನಿ ದಿವ್ಯಾನಿ ಶಾಸ್ತ್ರಾಣಿ ದಿವ್ಯರೂಪೋಪಮೋಽಭವತ್ ॥ ೫ ॥**

**ಅಥ ತೇ ಮುನಯಸ್ಸರ್ವೇ ಸಹಸ್ರಾಕ್ಷಮಥಾಬ್ರುವನ್ ।**
**ಸ್ಯಂದನೋ ದೀಯತಾಮಸ್ಮೈ ನಹುಷಾಯ ಸುರೇಶ್ವರ ॥ ೬ ॥**

**ಮುನೀನಾಂ ಮತಮಾಜ್ಞಾಯ ವಜ್ರಪಾಣಿಃ ಸ ಸಾರಥಿಂ ।**
**ಆಹೂಯ ಮಾತಲಿಂ ಚಾಪಿ ಹ್ಯಾದಿದೇಶ ಸುರಾಧಿಪಃ ॥ ೭ ॥**

**ಏನಂ ಗಚ್ಛ ಮಹಾತ್ಮಾನಂ ಯುಜ್ಯತಾಂ ಸ್ಯಂದನೇನ ವೈ ।**
**ಸಧ್ವಜೇನ ಮಹಾತ್ಮಾನಂ ಸಮರೇ ನೃಪನಂದನಂ ॥ ೮ ॥**

**ಸ ಚೋವಾಚ ಸಹಸ್ರಾಕ್ಷಂ ಕರಿಷ್ಯೇ ತವ ಶಾಸನಂ ।**
**ಏವಮುಕ್ತ್ವಾ ಜಗಾಮಾಶು ಹ್ಯಾಯುಪುತ್ರಂ ರಣೋದ್ಯತಂ ॥ ೯ ॥**

---

೪. ಆ ಮೇಲೆ ದೇವೇಂದ್ರನು ದೇವತೆಗಳೊಡನೆ ಬಂದು ಅನೇಕವಾದ ಸೂರ್ಯತೇಜಸ್ಸಿನಂತೆ ತೇಜಸ್ಸುಳ್ಳ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಕೊಟ್ಟನು.

೫. ಅನಂತರ ದೇವತೆಗಳಿಂದ ಕೂಡ ಉತ್ತಮವಾದ ಅಸ್ತ್ರಗಳನ್ನು ತೆಗೆದು ಕೊಂಡನು. ಅವೂ ಕೂಡ ಉತ್ತಮವಾದ ತೇಜಸ್ಸಿನಿಂದ ಕೂಡಿದ್ದುವು.

೬. ಆಗ ಋಷಿಗಳು ಎಲೈ ದೇವೇಂದ್ರನೇ, ಈ ನಹುಷನಿಗೆ ಒಂದು ರಥವನ್ನು ಕೊಡು ಎಂದರು.

೭. ಮುನಿಗಳ ಅಭಿಪ್ರಾಯವನ್ನು ತಿಳಿದು ಆ ಇಂದ್ರನು ಸಾರಥಿಯಾದ ಮಾತಲಿಯನ್ನು ಕರೆದು ಇಂತೆಂದನು.

೮. ಎಲೈ ಮಾತಲಿಯೇ, ಈ ನಹುಷನ ಬಳಿಗೆ ಹೋಗು. ನಹುಷನ ಧ್ವಜವನ್ನು ರಥದ ಮೇಲೆ ಕಟ್ಟಿ ಅವನನ್ನು ರಥದಲ್ಲಿ ಕೂರಿಸಿಕೋ.

೯. ತಮ್ಮ ಅಪ್ಪಣೆಯಂತೆ ನಡೆಯುತ್ತೇನೆ ಎಂದು ಹೇಳಿ ಮಾತಲಿಯು ಯುದ್ಧಸನ್ನದ್ಧನಾಗಿರುವ ನಹುಷನ ಬಳಿಗೆ ಹೋದನು.

ರಾಜಾನಂ ಪ್ರತ್ಯುವಾಚಾಥ ದೇವರಾಜೇನ ಭಾಷಿತಂ ।
ವಿಜಯೀ ಭವ ಧರ್ಮಜ್ಞ ರಥೇನಾನೇನ ಸಂಗರೇ ॥ ೧೦ ॥

ಇತ್ಯುವಾಚ ಸಹಸ್ರಾಕ್ಷಸ್ತ್ವಾಮೇವ ನೃಪತೀಶ್ವರ ।
ಜಹಿ ತ್ವಂ ದಾನವಂ ಸಂಖ್ಯೇ ಹುಂಡಂ ವೈ ಪಾಪಚೇತನಂ ॥ ೧೧ ॥

ಏವಮಾಕರ್ಣ್ಯ ರಾಜೇಂದ್ರಃ ಸಾನಂದಪುಲಕೋದ್ಗಮಃ ।
ಪ್ರಸಾದಾದ್ದೇವರಾಜಸ್ಯ ವಸಿಷ್ಠಸ್ಯ ಮಹಾತ್ಮನಃ ॥ ೧೨ ॥

ದಾನವಂ ಸೂದಯಿಷ್ಯಾಮಿ ಸಮರೇ ಪಾಪಚೇತನಂ ।
ದೇವಾನಾಂ ಚ ವಿಶೇಷೇಣ ಮಮ ಮಾಯಾಪ್ರಚಾರಿಣಂ ॥ ೧೩ ॥

ಏವಮುಕ್ತೇ ಶುಭೇ ವಾಕ್ಯೇ ನಹುಷೇಣ ಮಹಾತ್ಮನಾ ।
ಅಥಾಯಾತಃ ಸ್ವಯಂ ವಿಷ್ಣುಃ ಶಂಖಚಕ್ರಗದಾಧರಃ ॥ ೧೪ ॥

ಸ್ವಚಕ್ರಾಚ್ಚಕ್ರಮುತ್ಪಾದ್ಯ ಸೂರ್ಯಬಿಂಬೋಪಮಂ ಮಹತ್ ।
ಜ್ವಲತಾ ತೇಜಸಾ ದೀಪ್ತಂ ಸುವೃತ್ತಾನ್ತಂ ಶುಭಾವಹಂ ॥ ೧೫ ॥

---

೧೦. ದೇವೇಂದ್ರನು ಹೇಳಿದುದನ್ನು ರಾಜನಾದ ನಹುಷನಿಗೆ ಹೇಳಿದನು. ಈ ರಥವಲ್ಲಿ ಕುಳಿತುಕೊಂಡು ಶತ್ರುಗಳನ್ನು ಜಯಿಸಿ ವಿಜಯಿಯಾಗು.

೧೧. ದಾನವನಾದ ಹುಂಡನನ್ನು ಯುದ್ಧದಲ್ಲಿ ಜಯಿಸು, ಎಂದು ಸಹಸ್ರಾಕ್ಷನು ನಿನಗೆ ಹೇಳಿರುವನೆಂದು ಮಾತಲಿಯು ಹೇಳಿದನು.

೧೨-೧೩. ನಹುಷನು ಇದನ್ನು ಕೇಳಿ ದೇವರಾಜನ ಮತ್ತು ಮುನಿಶ್ರೇಷ್ಠನಾದ ವಸಿಷ್ಠನ ಅನುಗ್ರಹದಿಂದ ಪಾಪಿಯಾದ, ದೇವತೆಗಳಿಗೆ ಅಪಕಾರಿಯಾದ, ನನಗೆ ಮಾಯೆಯಿಂದ ತೊಂದರೆಮಾಡಿದ ಆ ದಾನವನನ್ನು ಕೊಲ್ಲುತ್ತೇನೆ.

೧೪. ನಹುಷನು ಹೀಗೆ ಹೇಳುವುದರೊಳಗೆ ವಿಷ್ಣುವು ಶಂಕಚಕ್ರಗದಾಧರನಾಗಿಯೇ ಅಲ್ಲಿಗೆ ಬಂದನು.

೧೫. ಆ ವಿಷ್ಣುವು ತನ್ನ ಚಕ್ರದಿಂದ ಮತ್ತೊಂದು ಚಕ್ರವನ್ನು ಸೃಷ್ಟಿಮಾಡಿದನು. ಅದು ಸೂರ್ಯಬಿಂಬದಂತೆ ಜ್ವಲಿಸುತ್ತಾ ಹರಿತನಾದ ಅಲಗುಗಳುಳ್ಳದ್ದಾಗಿಯೂ ಇದ್ದಿತು. ಅದನ್ನು ನಹುಷನಿಗೆ ಕೊಟ್ಟನು.

ನಹುಷಾಯ ದದೌ ದೇವೋ ಹರ್ಷೇಣ ಮಹತಾ ಕಿಲ ।
ತಸ್ಮೈ ಶೂಲಂ ದದೌ ಶಂಭುಃ ಸುತೀಕ್ಷ್ಣಂ ತೇಜಸಾನ್ವಿತಂ ॥ ೧೬ ॥

ತೇನ ಶೂಲವರೇಣಾಸೌ ಶೋಭತೇ ಸಮುರೋದ್ಯತಃ ।
ದ್ವಿತೀಯಶ್ಶಂಕರಶ್ಚಾಯಂ ತ್ರಿಪುರಘ್ನೋ ಯಥಾ ಪ್ರಭುಃ ॥ ೧೭ ॥

ಬ್ರಹ್ಮಾಸ್ತ್ರಂ ದತ್ತವಾನ್ ಬ್ರಹ್ಮಾ ವರುಣಃ ಪಾಶಮುತ್ತಮಂ ।
ಚಂದ್ರತೇಜಃಪ್ರತೀಕಾಶಂ ಜಲಜಂ ನಾಲಸಂಗತಂ ॥ ೧೮ ॥

ವಜ್ರಮಿಂದ್ರಸ್ತಥಾ ಶಕ್ತಿಂ ವಾಯುಶ್ಚಾಪಂ ಸಮಾರ್ಗಣಂ ।
ಆಗ್ನೇಯಾಸ್ತ್ರಂ ತಥಾ ವಹ್ನಿರ್ದದೌ ಚಾಸ್ಮೈ ಮಹಾತ್ಮನೇ ॥ ೧೯ ॥

ಶಸ್ತ್ರಾಣ್ಯನ್ಯಾನಿ ಸರ್ವಾಣಿ ದಿವ್ಯಾನಿ ವಿವಿಧಾನಿ ಚ ।
ದದುರ್ದೇವಾ ಮಹಾತ್ಮಾನಸ್ತಸ್ಮೈ ರಾಜ್ಞೇ ಮಹೌಜಸೇ ॥ ೨೦ ॥

॥ ಕುಂಜಲ ಉವಾಚ ॥

ಅಥ ಆಯುಸುತೋ ವೀರೋ ದೈವತೈಃ ಪರಿಮಾನಿತಃ ॥ ೨೧ ॥

---

೧೬-೧೭. ಶಂಭುವು ಆ ನಹುಷನಿಗೆ ಶೂಲವನ್ನು ಕೊಟ್ಟನು. ಆ ಶೂಲವನ್ನು ಕೈಯಲ್ಲಿ ಹಿಡಿದು ತ್ರಿಪುರಸಂಹಾರಿಯಾದ ರುದ್ರನಂತೆ ಪ್ರಕಾಶಿಸಿದನು.

೧೮. ಬ್ರಹ್ಮನು ಬ್ರಹ್ಮಾಸ್ತ್ರವನ್ನೂ ವರುಣನು ಪಾಶವನ್ನೂ ಕೊಟ್ಟರು. ಆ ಪಾಶವು ಚಂದ್ರನಂತೆ ಬೆಳ್ಳಗೂ, ನಾಲದಿಂದ ಕೂಡಿಕೊಂಡಿದ್ದಿತು.

೧೯. ಇಂದ್ರನು ವಜ್ರಾಯುಧವನ್ನೂ, ಶಕ್ತಿಯನ್ನೂ, ವಾಯುವು ಬಿಲ್ಲುಬಾಣಗಳನ್ನೂ, ಅಗ್ನಿಯು ಆಗ್ನೇಯಾಸ್ತ್ರವನ್ನೂ ಈತನಿಗೆ ಕೊಟ್ಟರು.

೨೦. ಮಹಾತ್ಮರಾದ ದೇವತೆಗಳು ಅನೇಕ ಬಗೆಯಾದ ಅಸ್ತ್ರಗಳನ್ನು ಕೊಟ್ಟರು.

೨೧. ಕುಂಜಲನು ಹೇಳಿದನು:—ಈ ರೀತಿಯಾಗಿ ಆಯುಸುತನಾದ ನಹುಷನು ದೇವತೆಗಳಿಂದ ಗೌರವಿಸಲ್ಪಟ್ಟನು. ಜ್ಞಾನಿಗಳಾದ ಋಷಿಗಳು ಆಶೀರ್ವದಿಸಿದರು.

**ಆಶೀರ್ಭಿರ್ನಂದಿತಶ್ಚಾಪಿ ಮುನಿಭಿಸ್ತತ್ತ್ವದರ್ಶಿಭಿಃ ।**
**ಆರುರೋಹ ರಥಂ ದಿವ್ಯಂ ಭಾಸ್ವರಂ ರತ್ನಭೂಷಿತಂ ॥ ೨೨ ॥**

**ಘಂಟಾರವೈಃ ಪ್ರಣದನ್ತಂ ಕ್ಷುದಘಂಟಾಸಮಾಕುಲಂ ।**
**ರಥೇನ ತೇನ ವೇಗೇನ ಶುಶುಭೇ ನೃಪನಂದನಃ ॥ ೨೩ ॥**

**ದಿವಿ ಮಾರ್ಗೇ ಯಥಾ ಸೂರ್ಯಸ್ತೇಜಸಾ ಸ್ವೇನ ವೈ ಕಿಲ ।**
**ಪ್ರತಪಂಸ್ತೇಜಸಾ ತದ್ವದ್ದೈತ್ಯಾನಾಂ ಮಸ್ತಕೇಷು ಸಃ ॥ ೨೪ ॥**

**ಜಗಾಮ ಶೀಘ್ರಂ ವೇಗೇನ ಯಥಾ ವಾಯುಃ ಸದಾಗತಿಃ ।**
**ಯತ್ರಾಸೌ ದಾನವಃ ಪಾಪಸ್ತಿಷ್ಠತೇ ಸ್ವಗಣೈರ್ಯುತಃ ।**
**ತೇನ ಮಾತಲಿನಾ ಸಾರ್ಧಂ ವಾಹಕೇನ ಮಹಾತ್ಮನಾ ॥ ೨೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ದಶಾಧಿಕಶತತಮೋಽಧ್ಯಾಯಃ**



---

೨೨. ರತ್ನದಿಂದ ಅಲಂಕೃತವಾದ ದಪ್ಪ ಮತ್ತು ಸಣ್ಣ ಘಂಟೆಗಳನ್ನು ಕಟ್ಟಿರುವ ರಥವನ್ನು ಹತ್ತಿದನು.

೨೩. ಆ ಉತ್ತಮವಾದ ರಥದಲ್ಲಿ ಕುಳಿತು ಆ ನಹುಷನು ಪ್ರಕಾಶಿಸಿದನು.

೨೪. ಅಂತರಿಕ್ಷದಲ್ಲಿ ಸೂರ್ಯನು ತನ್ನ ತೇಜಸ್ಸಿನಿಂದ ಪ್ರಕಾಶಿಸುವಂತೆ ನಹುಷನು ತನ್ನ ಪ್ರತಾಪದಿಂದ ದೈತ್ಯರ ತಲೆಯಲ್ಲಿ ಪ್ರಕಾಶಿಸಿದನು.

೨೫. ಈ ಮಾತಲಿಯೊಡನೆ ನಹುಷನು, ದಾನವನು ಇದ್ದ ಜಾಗಕ್ಕೆ ವಾಯುವೇಗದಿಂದ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕಾದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ನಿರ್ಗಚ್ಛಮಾನೇ ಸಮರೇ ಚ ವೀರೇ
ನಹುಷೇ ಹಿ ತಸ್ಮಿನ್ ಸುರರಾಜತುಲ್ಯೇ ॥
ಸಕೌತುಕಾ ಮಂಗಳಗೀತಯುಕ್ತಾಃ
ಸ್ತ್ರಿಯಸ್ತು ಸರ್ವಾಃ ಪರಿಜಗ್ಮುರತ್ರ ॥ ೧ ॥

ದೇವತಾನಾಂ ವರಾ ನಾರ್ಯೋ ರಂಭಾದ್ಯಪ್ಸರಸಸ್ತದಾ ।
ಕಿಂನರ್ಯಃ ಕೌತುಕೋತ್ಸುಕ್ಯೋ ಜಗುಃ ಸ್ವರೇಣ ಸತ್ತಮ ॥ ೨ ॥

ಗಂಧರ್ವಾಣಾಂ ತಥಾ ನಾರ್ಯೋ ರೂಪಾಲಂಕಾರಸಂಯುತಾಃ ।
ಕೌತುಕೇನ ಗತಾಸ್ತತ್ರ ಯತ್ರ ರಾಜಾ ಸ ತಿಷ್ಠತಿ ॥ ೩ ॥

---

## ನೂರ ಹನ್ನೊಂದನೆಯ ಅಧ್ಯಾಯವು

೧. ಕುಂಜಲನು ಹೇಳಿದನು:--ದೇವೇಂದ್ರನಿಗೆ ಸಮನಾದ ನಹುಷನು ಯುದ್ಧಕ್ಕೆ ಹೊರಡುತ್ತಿರಲಾಗಿ ಮಂಗಳಕರವಾದ ಹಾಡುಗಳನ್ನು ಹಾಡುತ್ತಾ ಮುತ್ತೈದೆಯರು ಎದುರಿಗೆ ಬಂದರು.

೨. ರಂಭಾದಿ ಅಪ್ಸರಸ್ತ್ರೀಯರೂ, ಕಿನ್ನರಸ್ತ್ರೀಯರೂ ಸಹ ಒಳ್ಳೆಯ ಸ್ವರದಿಂದ ಹಾಡಿದರು.

೩. ಅಲಂಕೃತರಾದ ಗಂಧರ್ವಸ್ತ್ರೀಯರು ಮಂಗಳವಸ್ತುವಿನೊಡನೆ ರಾಜನಿದ್ದ ಸ್ಥಳಕ್ಕೆ ಹೋದರು.

ಪುರಂ ಮಹೋದಯಂ ನಾಮ ಹುಂಡಸ್ಯಾಪಿ ದುರಾತ್ಮನಃ ।
ನಂದನೋಪವನೈರ್ದಿವ್ಯೈಃ ಸರ್ವತ್ರ ಸಮಲಂಕೃತಂ ॥ ೪ ॥

ಸಪ್ತ ಕಕ್ಷ್ಯಾಯುತೈರ್ಗೇಹೈಃ ಕಲಶೈರುಪಶೋಭಿತೈಃ ।
ಸೋಪಾನಕೈರ್ಮಹಾದಂಡೈಃ ಶೋಭಮಾನಂ ಪುರೋತ್ತಮಂ ॥ ೫ ॥

ಕೈಲಾಸಶಿಖರಾಕಾರೈಃ ಸೋನ್ನತೈರ್ದಿವಮಾಶ್ರಿತೈಃ ।
ಸರ್ವಶ್ರಿಯಾನ್ವಿತೈರ್ದಿವ್ಯೈರ್ಭ್ರಾಜಮಾನಂ ಗೃಹೋತ್ತಮೈಃ ॥ ೬ ॥

ವನೈಶ್ಚೋಪವನೈರ್ದಿವ್ಯೈಸ್ತಡಾಗೈಸ್ಸಾಗರೋಪಮೈಃ ।
ಜಲಪೂರ್ಣೈಸ್ಸುಶೋಭೈಸ್ತು ಪದ್ಮೈ ರಕ್ತೋತ್ಪಲಾನ್ವಿತೈಃ ॥ ೭ ॥

ಮಹಾರತ್ನಪ್ರಕಾಶೈಶ್ಚ ಹ್ಯಟ್ಟಾಲಕಶತೈರಪಿ ।
ಪರಿಖಾಭಿಃ ಸುಪೂರ್ಣಾಭಿರ್ಜಲಶಬ್ದೈಸ್ಸುಶೋಭಿತಂ ॥ ೮ ॥

---

೪. ದುಷ್ಟನಾದ ಹುಂಡನ ಪಟ್ಟಣವಾದ ಮಹೋದಯ ಪಟ್ಟಣವನ್ನು ಹೊಂದಿದರು. ಆ ಪಟ್ಟಣವು ದೊಡ್ಡ ವನಗಳಿಂದಲೂ, ಉಪವನಗಳಿಂದಲೂ, ಎಲ್ಲಾ ಕಡೆಯಲ್ಲೂ ಅಲಂಕೃತವಾಗಿದೆ.

೫. ಆ ಊರು ಏಳು ಮಹಡಿಗಳಿಂದ ಕೂಡಿ ಕಲಶಗಳಿಂದಲೂ, ದೊಡ್ಡದಾದ ಬಾವುಟ ನೆಡುಮರಗಳಿಂದಲೂ, ಮಹಡಿಯ ಮೆಟ್ಟಲುಗಳಿಂದಲೂ ಪ್ರಕಾಶಿಸುತ್ತಿರುವ ಮನೆಗಳನ್ನು ಹೊಂದಿದೆ.

೬. ಅಲ್ಲಿರುವ ಆ ಮನೆಗಳನ್ನು ನೋಡಿದರೆ ಕೈಲಾಸದ ಶಿಖರಗಳಂತೆ ಎತ್ತರವಾಗಿದ್ದು ಸಮಸ್ತವಾದ ಕಾಂತಿಗಳಿಂದ ಯುಕ್ತವಾಗಿದೆ.

೭. ವನಗಳಿಂದಲೂ, ಉಪವನಗಳಿಂದಲೂ, ಸಮುದ್ರದಂತೆ ತುಂಬಿರುವ ಕೆರೆಗಳಿಂದಲೂ, ಪದ್ಮಗಳಿಂದಲೂ, ಆ ಊರು ಶೋಭಿಸುತ್ತದೆ.

೮. ಉತ್ತಮವಾದ ರತ್ನಗಳಿಂದ ಪ್ರಕಾಶಿಸುವ, ಅಟ್ಟಣೆಗಳಿಂದ ಕೂಡಿರುವ, ನೀರಿನಿಂದ ತುಂಬಿ ಶಬ್ದಮಾಡುತ್ತಿರುವ ಅಗಳುಗಳಿಂದ ಶೋಭಿಸುತ್ತದೆ.

ಅನ್ಯೈಶ್ಚೈವ ಮಹಾರತ್ನೈರ್ಗಜೈಶ್ಚೈವ ವಿರಾಜಿತಂ ।
ಸುನಾರೀಭಿಸ್ಸಮಾಕೀರ್ಣಂ ಪುರುಷೈಶ್ಚ ಮಹಾಪ್ರಭೈಃ ॥ ೯ ॥

ನಾನಾಪ್ರಭಾವೈರ್ದಿವ್ಯೈಶ್ಚ ಶೋಭಮಾನಂ ಮಹೋದಯಂ ।
ರಾಜಶ್ರೇಷ್ಠೋ ಮಹಾವೀರೋ ನಹುಷೋ ದದೃಶೇ ಪುರಂ ॥ ೧೦ ॥

ಪುರಪ್ರಾಂಶೇ ವನಂ ದಿವ್ಯಂ ದಿವ್ಯವೃಕ್ಷೈರಲಂಕೃತಂ ।
ತದ್ವಿವೇಶ ಮಹಾವೀರೋ ನಂದನಂ ಹಿ ಯಥಾಮರಃ ॥ ೧೧ ॥

ರಥೇನ ಸಹ ಧರ್ಮಾತ್ಮಾ ತೇನ ಮಾತಲಿನಾ ಸಹ ।
ಪ್ರವಿಷ್ಟಸ್ಸ ತು ರಾಜೇಂದ್ರೋ ವನಮಧ್ಯೇ ಸರಿತ್ತಟೇ ॥ ೧೨ ॥

ತತ್ರ ತಾ ರೂಪಸಂಯುಕ್ತಾ ದಿವ್ಯಾ ನಾರ್ಯಸ್ಸಮಾಗತಾಃ ।
ಗಂಧರ್ವಾ ಗೀತತತ್ತ್ವಜ್ಞಾ ಜಗುರ್ಗೀತೈರ್ನೃಪೋತ್ತಮಂ ॥ ೧೩ ॥

---

೯. ಉತ್ತಮೋತ್ತಮವಾದ ಆನೆಗಳಿಂದಲೂ, ಉತ್ತಮವಾದ ಸ್ತ್ರೀಯರು ಪುರುಷರುಗಳಿಂದಲೂ ಆ ಊರು ತುಂಬಿದೆ.

೧೦. ಅನೇಕ ವಿಧವಾದ ಮಹಾತ್ಮೆಗಳಿಂದ ಪ್ರಕಾಶಿಸುವ ಮಹೋದಯ ಪುರವನ್ನು ನಹುಷನು ನೋಡಿದನು.

೧೧. ಪಟ್ಟಣದ ಹೊರಭಾಗದಲ್ಲಿ ಉತ್ತಮವಾದ ಮರಗಳಿಂದ ಅಲಂಕೃತ ವಾಗಿರುವ ವನವನ್ನು, ಇಂದ್ರನು ನಂದನವನವನ್ನು ಹೊಕ್ಕಂತೆ ಹೊಕ್ಕನು.

೧೨. ಮಾತಲಿ ನಡೆಸುತ್ತಿರುವ ಆ ರಥದಿಂದ ಆ ಮಹೋದಯಪುರವನ್ನು, ಕಾಡಿನ ಮಧ್ಯೆ ಇರುವ ನದಿಯ ಮಧ್ಯದಲ್ಲಿ ದಾಟಿ ಪ್ರವೇಶಿಸಿದನು.

೧೩. ಸುಂದರಿಯರಾದ, ಗೀತವನ್ನು ಚೆನ್ನಾಗಿ ಬಲ್ಲ ಗಂಧರ್ವರೂ ಹಾಡುತ್ತಾ ಜೊತೆಯಲ್ಲಿ ಹೋದರು.

**ಸೂತಾಶ್ಚ ಮಾಗಧಾಃ ಸರ್ವೇ ತಂ ಸ್ತುವಂತಿ ನರೋತ್ತಮಂ ।**
**ಶುಶ್ರಾವ ಗೀತಂ ಮಧುರಂ ನಹುಷಃ ಕಿನ್ನರೇರಿತಂ ॥ ೧೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಏಕಾದಶಾಧಿಕಶತತಮೋಧ್ಯಾಯಃ**



---

೧೪. ಸೂತರು, ಮಾಗಧರು, ಆ ರಾಜನನ್ನು ಸ್ತುತಿಸಿದರು. ನಹುಷನು ಆ ಕಿನ್ನರರು ಹಾಡಿದ ಗೀತವನ್ನು ಕೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ.
ನೂರ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವಾದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ತದೇವ ಗಾನಂ ಚ ಸುರಾಂಗನಾಭಿ
ರ್ಗೀತಂ ಸಮಾಕರ್ಣ್ಯ ಚ ಗೀತಕೈರ್ಧ್ರುವೈಃ ॥
ಸಮಾಕುಲಾ ಚಾಪಿ ಬಭೂವ ತತ್ರ
ಸಾ ಶಂಭುಪುತ್ರೀ ಪರಿಚಿಂತಯಾನಾ ॥ ೧ ॥

ಆಸನಾತ್ತೂರ್ಣಮುತ್ಥಾಯ ಮಹೋತ್ಸಾಹೇನ ಸಂಯುತಾ ।
ತೂರ್ಣಂ ಗತಾ ವರಾರೋಹಾ ತಪೋಬಲಸಮನ್ವಿತಾ ॥ ೨ ॥

ತಂ ದೃಷ್ಟ್ವಾ ದೇವಸಂಕಾಶಂ ದಿವ್ಯಲಕ್ಷಣಸಂಯುತಂ ।
ದಿವ್ಯಗಂಧಾನುಲಿಪ್ತಾಂಗಂ ದಿವ್ಯಮಾಲಾಭಿಶೋಭಿತಂ ॥ ೩ ॥

---

## ನೂರ ಹನ್ನೆರಡನೆಯ ಅಧ್ಯಾಯವು

೧. ಕುಂಜಲನು ಹೇಳಿದನು :—ದೇವತಾಸ್ತ್ರೀಯರಿಂದ ಹಾಡಲ್ಪಟ್ಟ ಸುಶ್ರಾವ್ಯವಾದ ಆ ಗೀತಗಳನ್ನು ಕೇಳಿ ಆ ಶಂಭುಪುತ್ರಿಯು ಯೋಚಿಸತೊಡಗಿದಳು.

೨. ಸಂತೋಷಗೊಂಡು ತನ್ನ ಆಸನದಿಂದ ಶೀಘ್ರವಾಗಿ ಎದ್ದು ಆ ಅಶೋಕ ಸುಂದರಿಯು ಅಲ್ಲಿಗೆ ಹೋದಳು.

೩-೪. ದಿವ್ಯಲಕ್ಷಣಗಳಿಂದ ಕೂಡಿದ, ಗಂಧವನ್ನು ಪೂಸಿಕೊಂಡಿರುವ ಮಾಲೆ

**ದಿವ್ಯೈರಾಭರಣೈರ್ವಸ್ತ್ರೈಃ ಶುಶುಭೇ ನೃಪನಂದನಃ ।**
**ದೀಪ್ತಿಮಾಂಶ್ಚ ಯಥಾ ಸೂರ್ಯೋ ದಿವ್ಯಲಕ್ಷಣಸಂಯುತಃ ॥ ೪ ॥**

**ಕಿಂ ವಾ ದೇವೋ ಮಹಾಪ್ರಾಜ್ಞೋ ಗಂಧರ್ವೋ ವಾ ಭವಿಷ್ಯತಿ ।**
**ಕಿಂ ವಾ ನಾಗಸುತಸ್ಸೋಽಯಂ ಕಿಂ ವಾ ವಿದ್ಯಾಧರೋ ಭವೇತ್ ॥ ೫ ॥**

**ದೇವೇಷು ನೈವ ಪಶ್ಯಾಮಿ ಕುತೋ ಯಕ್ಷೇಷು ಜಾಯತೇ ।**
**ಅನಯಾ ಲೀಲಯಾ ದೇವಃ ಸಹಸ್ರಾಕ್ಷೋಽಪಿ ಜಾಯತೇ ॥ ೬ ॥**

**ಶಂಭುರೇವ ಭವೇತ್ಕಿಂ ವಾ ಕಿಂ ವಾ ಚಾಯಂ ಮನೋಭವಃ ।**
**ಕಿಂ ವಾ ಪಿತುಸ್ಸಖಾ ಮೇ ಸ್ಯಾತ್ಪಾಲಸ್ತ್ಯೋಽಯಂ ಧನಾಧಿಪಃ ॥ ೭ ॥**

**ಏವಂ ಸಮಾಲೋಕಯಂತೀ ಬಲರೂಪಗುಣಾನ್ವಿತಂ ।**
**ಸಮೇತ್ಯ ತಂ ಸಖೀಭಿಸ್ತು ರಂಭಾದ್ಯಾಭಿಃ ಸ್ಥಿತಾಭವತ್ ॥ ೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನೋಪಾಖ್ಯಾನೇ ದ್ವಾದಶಾಧಿಕಶತತಮೋಽಧ್ಯಾಯಃ**

---

ಗಳನ್ನು ಹಾಕಿಕೊಂಡಿರುವ, ಆಭರಣಗಳನ್ನು ತೊಟ್ಟಿರುವ, ಆ ರಾಜನು ಲಕ್ಷಣಗಳಿಂದ ಕೂಡಿಕೊಂಡು ಕಾಂತಿಯುಳ್ಳ ಸೂರ್ಯನಂತಿದ್ದನು.

೫. ಇವನು ಜ್ಞಾನಿಯಾದ ವಿಷ್ಣುವೇ? ಅಥವಾ ಗಂಧರ್ವನೇ, ಇಲ್ಲದಿದ್ದರೆ ನಾಗಕನ್ನಿಕೆಯ ಮಗನೇ? ಇನ್ನೇನಾದರೂ ವಿದ್ಯಾಧರನಾಗಿರಬಹುದೇ? ಯಾರು?

೬. ಇಂತಹವನು ದೇವತೆಗಳಲ್ಲಿಲ್ಲ. ಯಕ್ಷರಲ್ಲಿ ಹುಟ್ಟುವ ಸಂಭವವೇ ಇಲ್ಲ. ಈ ರೀತಿಯಾದ ಲಕ್ಷಣಗಳು ಇಂದ್ರನಿಗೂ ಇಲ್ಲ. ಅವನೂ ಅಲ್ಲ.

೭. ಇವನೇನಾದರೂ ಈಶ್ವರನೇ? ಅಥವಾ ಮನ್ಮಥನೋ, ಇಲ್ಲದಿದ್ದರೆ ನಮ್ಮ ತಂದೆಯ ಸ್ನೇಹಿತನಾದ ಕುಬೇರನೋ, ಯಾರಿರಬಹುದು?

೮. ಬಲ, ರೂಪಗಳಿಂದ ಕೂಡಿದ ಈತನನ್ನು ಈ ರೀತಿಯಾಗಿ ನೋಡುತ್ತ, ರಂಭಾದಿ ಸಖಿಯರಿಂದ ಕೂಡಿಕೊಂಡಿದ್ದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ ನೂರ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಯೋದಶಾಧಿಕಶತತಮೋಽಧ್ಯಾಯಃ

॥ ರಂಭೋವಾಚ ॥

ತಪ ಏತತ್ಪರಿತ್ಯಜ್ಯ ಕಿಮಾಲೋಕಯಸೇ ಶುಭೇ ।
ಮನಃ ಸಂರಕ್ಷ ವೈ ಸಾಧ್ವಿ ಪುರುಷಸ್ಯ ವಿಚಿಂತನಾತ್ ॥ ೧ ॥

॥ ಅಶೋಕಸುಂದರ್ಯುವಾಚ ॥

ಮನಸ್ತಪಸಿ ಲೀನಂ ಮೇ ನಹುಷಸ್ಯಾಪಿ ಕಾಮ್ಯಯಾ ।
ನ ವೈ ಚಾಲಯಿತುಂ ಶಕ್ಯಂ ದೇವೈರಪಿ ಸಹೇಶ್ವರೈಃ ॥ ೨ ॥

ಏನಂ ದೃಷ್ಟ್ವಾ ಮಹಾಭಾಗೇ ಮನೋ ಮೆ ಚಲತೇ ಭೃಶಂ ।
ರಂತುಮಿಚ್ಛಾಮ್ಯಹಂ ಗತ್ವಾ ಏವಮುತ್ಕಂಠತಾಂ ಗತಂ ॥ ೩ ॥

---

## ನೂರ ಹದಿಮೂರನೆಯ ಅಧ್ಯಾಯವು

೧. ರಂಭೆಯು ಹೇಳಿದಳು:—ಎಲೈ! ಮಂಗಳಾಂಗಿಯೇ! ತಪಸ್ಸು ಮಾಡುವುದನ್ನು ಬಿಟ್ಟುಬಿಟ್ಟು ಏನನ್ನು ಮಾಡುತ್ತಿದ್ದೀಯೆ? ನೀನು ನಿನ್ನ ಪುರುಷನನ್ನು ಯೋಚಿಸುವುದೊಂದರಿಂದ ಹೊರತಾಗಿ ಮತ್ತೊಂದನ್ನು ಯೋಚಿಸದಂತೆ ಬಿಗಿಹಿಡಿದುಕೋ.

೨. ಅಶೋಕಸುಂದರಿಯು ಹೇಳಿದಳು:—ನಹುಷನ ಮೇಲಿನ ಅಪೇಕ್ಷೆಯ ರೂಪವಾದ ತಪಸ್ಸಿನಲ್ಲಿಯೇ ನನ್ನ ಮನಸ್ಸು ಕೂತಿದೆ. ಈಶ್ವರನೊಡನೆ ದೇವತೆಗಳು ಬಂದರೂ ಅದನ್ನು ಬದಲಾಯಿಸಲಾರರು.

೩. ಎಲೈ! ಮಹಾತ್ಮಳೇ! ಈತನನ್ನು ನೋಡಿ ನನ್ನ ಮನಸ್ಸು ಬಹು ಚಂಚಲವಾಗಿದೆ. ನಾನು ಹೋಗಿ ರಮಿಸಲೇ ಎನ್ನುವಷ್ಟು ಆಸೆಯು ಹುಟ್ಟಿದೆ.

ಏವಂ ವಿಪರ್ಯಯಶ್ಚಾಸೀನ್ಮನಸೋ ಮೇ ವರಾನನೇ ।
ತನ್ಮೇ ತ್ವಂ ಕಾರಣಂ ಬ್ರೂಹಿ ತವಾಸ್ತಿ ಜ್ಞಾನಮುತ್ತಮಂ ॥ ೪ ॥

ಆಯೋಃ ಪುತ್ರಸ್ಯ ಭಾರ್ಯಾಹಂ ದೈವೈಃ ಸೃಷ್ಟಾ ಮಹಾತ್ಮನಃ ।
ಕಸ್ಮಾನ್ಮೇ ಧಾವತೇ ಚೇತ ಉತ್ಸುಕಂ ರಂತುಮೇವ ಚ ॥ ೫ ॥

॥ ರಂಭೋವಾಚ ॥

ಸರ್ವೇಷ್ವೇವ ಮಹಾಭಾಗೇ ದೇಹರೂಪೇಷು ಭಾಮಿನಿ ।
ವಸತ್ಯಾತ್ಮಾ ಸ್ವಯಂ ಬ್ರಹ್ಮ ಜ್ಞಾನರೂಪಃ ಸನಾತನಃ ॥ ೬ ॥

ಯದ್ಯಪಿ ಪ್ರಕೃತೇರ್ಭಾವೈರಿಂದ್ರಿಯೈರಪಕಾರಿಭಿಃ ।
ಮೋಹಪಾಶಶತೈರ್ಬದ್ಧಸ್ತಥಾ ಸಿದ್ಧಸ್ತು ಸರ್ವದಾ ॥ ೭ ॥

ಪ್ರಕೃತಿರ್ನೈವ ಜಾನಾತಿ ತಾಂ ವೈ ವೈಜ್ಞಾನಿಕೀಂ ಕಲಾಂ ।
ಅಯಂ ಶುದ್ಧಸ್ತು ಧರ್ಮಜ್ಞ ಆತ್ಮಾ ವೇತ್ತಿ ಚ ಸುಂದರಿ ॥ ೮ ॥

---

೪. ನನ್ನ ಮನಸ್ಸು ಅಷ್ಟು ವ್ಯತ್ಯಾಸಗೊಂಡಿದೆ; ನಿನಗೆ ಅತ್ಯುತ್ತಮವಾದ ಜ್ಞಾನವಿರುವುದರಿಂದ ಆದಕ್ಕೆ ನನಗೆ ಕಾರಣವನ್ನು ಹೇಳು.

೫. ನಾನು ಆಯುವಿನ ಮಗನಾದ ನಹುಷನ ಹೆಂಡತಿಯಾಗಿ ದೇವರಿಂದ ಸೃಷ್ಟಿಸಲ್ಪಟ್ಟಿದ್ದೇನೆ. ಆದರೂ ನನ್ನ ಮನಸ್ಸೇಕೆ ಓಡುತ್ತಿದೆಯಲ್ಲ! ರಮಿಸುವುದಕ್ಕೂ ಆಸೆಪಡುತ್ತಿದೆಯಲ್ಲ?

೬. ರಂಭೆಯು ಹೇಳಿದಳು :—ಜ್ಞಾನರೂಪಿನಿಂದ ಸನಾತನನಾದ ಬ್ರಹ್ಮನು ದೇಹರೂಪದಲ್ಲಿರುವವರಲ್ಲೆಲ್ಲಾ ವಾಸಮಾಡುತ್ತಾನೆ.

೭. ಆದರೂ ಪ್ರಕೃತಿಯ ಸ್ವಭಾವದಿಂದ ಅಪಕಾರಮಾಡತಕ್ಕ ಇಂದ್ರಿಯಗಳು ಮೋಹಪಾಶಗಳಿಂದ ಆತ್ಮನನ್ನು ಕಟ್ಟಿಹಾಕಿವೆ. ಕಟ್ಟಿಹಾಕಲು ಸಿದ್ಧವಾಗಿಯೂ ಇವೆ.

೮. ಪ್ರಕೃತಿಯು ಆ ವಿಜ್ಞಾನ ವಿದ್ಯೆಯನ್ನು ತಿಳಿಯಲಾರದು. ಶುದ್ಧನಾದ ಈ ಆತ್ಮನು ಅದನ್ನು ತಿಳಿಯುತ್ತಾನೆ.

ಗಚ್ಛೇತ್ಯಪಿ ಮನಸ್ತಾಪ ಏನಂ ದೃಷ್ಟ್ವಾ ಮಹಾಮತಿಂ ।
ಪಾಪಮೇವಂ ಪರಿತ್ಯಜ್ಯ ಸತ್ಯಮೇವ ಪ್ರಧಾವತಿ ॥ ೯ ॥

ಭರ್ತಾಯಮಾಯುಪುತ್ರಸ್ತೇ ತತ್ಸತ್ಯಂ ಚ ನ ಸಂಶಯಃ ।
ಅನ್ಯಂ ದೃಷ್ಟ್ವಾ ವಿಶಂಕೇತ ಪುರುಷಂ ಪಾಪಲಕ್ಷಣಂ ॥ ೧೦ ॥

ಏವಂ ವಿಧಿಃ ಕೃತೋ ದೈವೈಃ ಸತ್ಯಪಾಶೇನ ಬಂಧಿತಃ ।
ಅಸ್ಯಾಸ್ತು ಹ್ಯಾಯುಪುತ್ರೋಽಪಿ ಭರ್ತೃತ್ವಮುಪಯಾಸ್ಯತಿ ॥ ೧೧ ॥

ಏವಮಾಕರ್ಣಿತಂ ಭದ್ರೇ ಹ್ಯಾತ್ಮಾನಂ ಚಾಪಿ ಸುಂದರಿ ।
ತದ್ಧ್ರುವಂ ಸತ್ಯಸಂಪನ್ನೋ ವಿಜ್ಞಾನಾತ್ಮಾ ಸ್ವಯಂ ಸ್ಥಿತಃ ॥ ೧೨ ॥

ಅನ್ಯಭಾವಂ ನ ಜಾನಾತಿ ಹ್ಯಾಯುಪುತ್ರಂ ಚ ವಿಂದತಿ ।
ಪ್ರಕೃತಿರ್ನೈವ ತೇ ದೇವಿ ಹ್ಯೇನಂ ಜಾನಾತಿ ಚಾಽಽಗತಂ ॥ ೧೩ ॥

---

೯. ಈ ಮಹಾಮತಿಯನ್ನು ನೋಡಿದರೆ ಮನಸ್ಸಿನ ತಾಪವು ಹೋಗುತ್ತದೆ. ಪಾಪದ ವಿಷಯವನ್ನು ಬಿಟ್ಟು ಯಥಾರ್ಥದ ಕಡೆಗೆ ಓಡುತ್ತದೆ.

೧೦. ಹಾಗೆ ನಿನ್ನ ಮನಸ್ಸು ಹೋಗುವುದರಿಂದ, ಈತನು ಆಯುವಿನ ಮಗನೇ! ಸಂಶಯವಿಲ್ಲ. ಪಾಪಿಯಾದ ಪುರುಷನನ್ನು ನೋಡಿದರೆ ಸಂದೇಹ ಪಟ್ಟೀತು.

೧೧. ಅದೃಷ್ಟದ ನಿಯಮವು ಈ ರೀತಿಯಿದೆ. ಅಲ್ಲದೆ ದೇವತೆಗಳು ಈ ರೀತಿ ಸತ್ಯದಿಂದ ಕೂಡಿದ ನಿಯಮವನ್ನು ಮಾಡಿದ್ದಾರೆ. ಇವಳಿಗಾದರೋ ಆಯುಪುತ್ರನು ಗಂಡನಾಗುವನು.

೧೨-೧೩. ಈ ರೀತಿಯಾಗಿ ಜನರು ಹೇಳುವುದನ್ನು ಕೇಳಿದ್ದೇವೆ. ಇದು ನಿನಗೂ ಗೊತ್ತಿರಬಹುದು. ಆದ್ದರಿಂದಲೇ ಸತ್ಯವಂತನಾದ ಜ್ಞಾನಿಯಾದ, ಆತ್ಮನು ಎಲ್ಲರಲ್ಲೂ ಇದ್ದು ಹೀಗೆ ಹೇಳುತ್ತಾನೆ. ಆದ್ದರಿಂದಲೇ ವಿಜ್ಞಾನಾತ್ಮನು ಬೇರೆಯುದನ್ನು ತಿಳಿಯದೆ ಆಯುಪುತ್ರನನ್ನೇ ತಿಳಿಯುತ್ತಾನೆ. ಪ್ರಕೃತಿಯು ಭಿನ್ನವಾದುದರಿಂದ ಬರತಕ್ಕ ಆ ಆಯುಪುತ್ರನನ್ನು ತಿಳಿಯಲಾರದು.

**ಏವಂ ಜ್ಞಾತ್ವಾ ಪ್ರಧಾನಾತ್ಮಾ ತವಾದ್ಯೈವ ಪ್ರಧಾವತಿ ।**
**ಆತ್ಮಾ ಸರ್ವಂ ಪ್ರಜಾನಾತಿ ಆತ್ಮಾ ದೇವಃ ಸನಾತನಃ ॥ ೧೪ ॥**

**ಸ್ವಯಮೇವ ನರೇಂದ್ರೋಽಯಂ ನಹುಷೋ ನಾಮ ವೀರ್ಯವಾನ್ ।**
**ತಸ್ಮಾದ್ಗಚ್ಛತಿ ಚೇತಸ್ತೇ ಸತ್ಯಬಂಧಂ ವಿಶಿಷ್ಯತೇ ॥ ೧೫ ॥**

**ಆಯೋಃ ಸುತಂ ಪರಿಜ್ಞಾಯ ಅನ್ಯಂ ಚೈವ ನ ಗಚ್ಛತಿ ।**
**ಏತತ್ತೇ ಸರ್ವಮಾಖ್ಯಾತಂ ಶಾಶ್ವತಂ ತ್ವನ್ಮನೋಗತಂ ॥ ೧೬ ॥**

**ಹುಂಡಂ ಹತ್ವಾ ಮಹಾಘೋರಂ ಸಮರೇ ದಾನವಾಧಮಂ ।**
**ತ್ವಾಂ ನಯಿಷ್ಯತಿ ಸ್ವಸ್ಥಾನಮಾಯೋಶ್ಚ ಗೃಹಮುತ್ತಮಂ ॥ ೧೭ ॥**

**ಹೃತೋ ದೈತ್ಯೇನ ವೀರೇಂದ್ರೋ ನಿಜಪುಣ್ಯೇನ ಶೇಷಿತಃ ।**
**ಬಾಲ್ಯಾತ್ಪ್ರಭೃತಿ ವೀರೇಂದ್ರೋ ವಿಯುಕ್ತಃ ಸ್ವಜನೇನ ವೈ ॥ ೧೮ ॥**

---

೧೪. ಇದನ್ನು ತಿಳಿದೇ ಪ್ರಧಾನನಾದ ಆತ್ಮನು ಅಲ್ಲಿಗೆ ಓಡುತ್ತಿದ್ದಾನೆ. ಆತ್ಮನು ಎಲ್ಲವನ್ನೂ ಬಲ್ಲವನು. ಆತ್ಮನೇ ಪುರಾತನನಾದ ದೇವರಷ್ಟೆ?

೧೫. ಅವನೇ ವೀರ್ಯವಂತನಾದ ನಹುಷನೆಂಬ ದೊರೆಯು. ಆದ್ದರಿಂದ ನಿನ್ನ ಮನಸ್ಸು ಸತ್ಯವನ್ನು ತಿಳಿದು ಅಲ್ಲಿಗೆ ಹೋಗುತ್ತಿದೆ.

೧೬. ಆಯುವಿನ ಮಗನು ಇವನೆಂದು ತಿಳಿದು ಬೇರೆಯವನ ಮೇಲೆ ಬೀಳುತ್ತಿಲ್ಲ. ಇವನ ಮೇಲೆ ಬೀಳುತ್ತಿದೆ. ಶಾಶ್ವತವಾದ ನಿನ್ನ ಮನಸ್ಸಿನ ಅಭಿಪ್ರಾಯಗಳನ್ನೆಲ್ಲಾ ಹೇಳಿದ್ದೇನೆ.

೧೭. ಯುದ್ಧದಲ್ಲಿ ಅಯೋಗ್ಯನಾದ ಆ ಹುಂಡನನ್ನು ಕೊಂದು ತನ್ನ ತಂದೆಯಾದ ಆಯುವಿನ ಮನೆಗೆ ಕರೆದುಕೊಂಡು ಹೋಗುತ್ತಾನೆ.

೧೮. ಆ ದೈತ್ಯನು ಈ ನಹುಷನನ್ನು ಕದ್ದಿದ್ದನು. ಆದರೆ ಅವನ ಪುಣ್ಯಕರ್ಮದಿಂದ ಉಳಿದುಕೊಂಡನು. ಅಂತೆಯೇ ಬಾಲ್ಯದಿಂದಲೂ ಅವನಿಗೆ ಅವನ ನಂಟರಿಷ್ಟರ ವಿಯೋಗ ಉಂಟಾಯಿತು.

ಪಿತೃಮಾತೃವಿಹೀನಸ್ತು ಗತೋ ವೃದ್ಧಿಂ ಮಹಾವನೇ ।
ಯಾಸ್ಯತ್ಯೇವ ಪಿತುರ್ಗೇಹಂ ತ್ವಯೈವ ಸಹ ಸಾಂಪ್ರತಂ ॥ ೧೯ ॥

ಏವಮಾಭಾಷಿತಂ ಶ್ರುತ್ವಾ ರಂಭಾಯಾಃ ಶಿವನಂದಿನೀ ।
ಹರ್ಷೇಣ ಮಹತಾಽಽವಿಷ್ಟಾ ತಾಮುವಾಚ ತಪಸ್ವಿನೀ ॥ ೨೦ ॥

ಅಯಮೇವ ಸ ಧರ್ಮಾತ್ಮಾ ಮಮ ಭರ್ತಾ ಸುವೀರ್ಯವಾನ್ ।
ಮನೋ ಮೇ ಧಾವತೇ ಸತ್ಯಂ ಕಾಮಾಕುಲಿತವಿಹ್ವಲಂ ॥ ೨೧ ॥

ನಾಸ್ತಿ ಚಿತ್ತಸಮೋ ದೇವೋ ಯೋ ಜಾನಾತಿ ಸುನಿಶ್ಚಿತಂ ।
ಸತ್ಯಮೇತನ್ಮಯಾ ದೃಷ್ಟಂ ಸುಚಿತ್ರಂ ಚಾರುಹಾಸಿನಿ ॥ ೨೨ ॥

ಮನೋಭವಸಮಾನಂ ತು ಪುರುಷಂ ದಿವ್ಯಲಕ್ಷಣಂ ।
ನ ಧಾವತ್ಯತಿಭಾವೇನ ಏನಂ ದೃಷ್ಟ್ವಾ ಯಥಾ ಸಖಿ ॥ ೨೩ ॥

---

೧೯. ತಾಯಿತಂದೆಗಳಿಲ್ಲದೇನೆ ಕಾಡಿನಲ್ಲಿ ಬೆಳೆದನು. ಈಗ ನಿನ್ನೊಡನೆ ತಂದೆಯ ಮನೆಗೆ ಹೋಗಿಯೇ ಹೋಗುತ್ತಾನೆ.

೨೦. ರಂಭೆಯು ಹೀಗೆ ಹೇಳಿದುದನ್ನು ಕೇಳಿ ಶಿವನಂದಿನಿಯು ಬಹು ಸಂತೋಷವುಳ್ಳವಳಾಗಿ ಆ ರಂಭೆಯನ್ನು ಕುರಿತು ಇಂತೆಂದಳು.

೨೧. ಇವನೇನೆ ವೀರ್ಯವಂತನಾದ ನನ್ನ ಗಂಡನು. ಆದ್ದರಿಂದಲೇ ನನ್ನ ಮನಸ್ಸು ಕಾಮದಿಂದ ತಲ್ಲಣಗೊಂಡು ಅಲ್ಲಿಗೆ ಓಡುತ್ತಿದೆ.

೨೨. ಚಿತ್ತಕ್ಕೆ ಸಮವಾದ ದೇವರೇ ಇಲ್ಲ. ಅದೇ ನಿಶ್ಚಯವನ್ನು ತಿಳಿಯ ಬಲ್ಲುದು. ಇದು ಆಶ್ಚರ್ಯ. ನಾನು ಖಂಡಿತವಾಗಿಯೂ ಇದನ್ನು ನೋಡಿದ್ದೇನೆ.

೨೩. ದಿವ್ಯ ಲಕ್ಷಣಗಳುಳ್ಳ ಮನ್ಮಥನಿಗೆ ಸಮಾನನಾದ ಪುರುಷನನ್ನು ನೋಡಿದರೂ, ಈತನನ್ನ ನೋಡಿದರೆ ಹೇಗೆ ಓಡುತ್ತದೋ ಹಾಗೆ ಅವನನ್ನು ನೋಡಿ ದರೆ ಆಸಕ್ತವಾಗುವುದಿಲ್ಲ.

ತಥಾ ನ ಧಾವತೇ ಭದ್ರೇ ಪುಂಸಮನ್ಯಂ ನ ಮನ್ಯತೇ ।
ಏವಂ ಗಂತವ್ಯಮಾವಾಭ್ಯಾಂ ಸಖೀಭಿರ್ಗೃಹಮೇವ ಹಿ ॥ ೨೪ ॥

ಏವ ಮಾಭಾಷ್ಯ ಸಾ ರಂಭಾಂ ಗಮನಾಯೋಪಚಕ್ರಮೇ ।
ಗಮನಾಯೋತ್ಸುಕಾಂ ಜ್ಞಾತ್ವಾ ನಹುಷಸ್ಯಾಂತಿಕಂ ಪ್ರತಿ ।
ತಾಮುವಾಚ ತತೋ ರಂಭಾ ಕಸ್ಮಾದ್ದೇವಿ ನ ಗಮ್ಯತೇ ॥ ೨೫ ॥

॥ ಸೂತ ಉವಾಚ ॥

ಸಖ್ಯಾ ಚ ರಂಭಯಾ ಸಾರ್ಧಂ ನಹುಷಂ ವೀರಲಕ್ಷಣಂ ।
ತಸ್ಯಾಂತಿಕಂ ತು ಸಂಪ್ರಾಪ್ಯ ಪ್ರೇಷಯಾಮಾಸ ತಾಂ ಸಖೀಂ ॥ ೨೬ ॥

ಏನಂ ಗಚ್ಛ ಮಹಾಭಾಗೇ ನಹುಷಂ ದೇವರೂಪಿಣಂ ।
ಕಥಯಸ್ವ ಕಥಾಮೇತಾಂ ತವಾರ್ಥೇ ಆಗತಾ ಯತಃ ॥ ೨೭ ॥

ಏವಂ ಸಖಿ ಕರಿಷ್ಯಾಮಿ ಸುಪ್ರಿಯಂ ತವ ಸುವ್ರತೇ ।
ಏವಮುಕ್ತ್ವಾ ಗತಾ ರಂಭಾ ನಹುಷಂ ರಾಜನಂದನಂ ॥ ೨೮ ॥

---

೨೪. ಇವನನ್ನು ನೋಡಿ ಹೇಗೆ ಓಡಿತೋ ಹಾಗೆ ಬೇರೆಯವನನ್ನು ನೋಡಿದರೆ ಓಡುವುದಿಲ್ಲ. ಬೇರೆ ಪುರುಷನನ್ನು ಮನಸ್ಸು ಯೋಚಿಸುವುದೇ ಇಲ್ಲ. ಆದ್ದರಿಂದ ಸಖಿಯರೊಡನೆ ಮನೆಗೆ ಹೋಗೋಣ.

೨೫. ಹೀಗೆ ರಂಭೆಗೆ ಹೇಳಿ, ನಹುಷನ ಬಳಿಗೆ ಹೋಗಲು ಆಸೆಯುಳ್ಳವಳಾದಳು. ಆಸೆಯುಳ್ಳ ಅಶೋಕಸುಂದರಿಯನ್ನು ಕುರಿತು ರಂಭೆಯು, ಆಸೆಪಟ್ಟಿದ್ದೀಯೆ, ಏಕೆ ಹೋಗಬಾರದು? ಹೋಗೋಣ ನಡೆ ಎಂದಳು.

೨೬. ಸೂತನು ಹೇಳಿದನು:—ರಂಭೆಯೊಡನೆ ನಹುಷನ ಬಳಿಗೆ ಹೋದಳು. ಸ್ವಲ್ಪ ದೂರದಲ್ಲಿ ನಿಂತು ಸಖಿಯನ್ನು ಕಳುಹಿಸಿದಳು.

೨೭. ಸಖಿಯೇ! ನಹುಷನ ಬಳಿಗೆ ಹೋಗಿ ಅವನಿಗೆ ಕಥೆಯೆಲ್ಲವನ್ನೂ ಹೇಳಿ, ನಿನಗೋಸ್ಕರ ಬಂದಿದ್ದಾಳೆಂದು ಹೇಳು.

೨೮. ಅಮ್ಮಾ, ನೀನು ಹೇಳಿದಂತೆಯೇ ಮಾಡುತ್ತೇನೆ ಎಂದು ಹೇಳಿ. ರಂಭೆಯು ಬಿಲ್ಲುಬಾಣಗಳನ್ನು ತೊಟ್ಟಿರುವ, ಇಂದ್ರನಂತಿರುವ ನಹುಷನ ಬಳಿಗೆ ಹೋದಳು.

ಚಾಪಬಾಣಧರಂ ವೀರಂ ದ್ವಿತೀಯಮಿವ ವಾಸವಂ ।
ಪ್ರತ್ಯುವಾಚ ಗತಾ ರಂಭಾ ಸಖ್ಯಾ ವಚನಮುತ್ತಮಂ ॥ ೨೯ ॥

ಆಯುಪುತ್ರ ಮಹಾಭಾಗ ರಂಭಾಽಹಂ ಸಮುಪಾಗತಾ ।
ಶಿವಸ್ಯ ಕನ್ಯಯಾ ವೀರ ತಪಸ್ಯಂತ್ಯಾ ಪ್ರಯೋಜಿತಾ ॥ ೩೦ ॥

ತ್ವದರ್ಥಂ ದೇವದೇವೇನ ಉಮಯಾ ದಿವ್ಯಯಾ ಪುರಾ ।
ಭಾರ್ಯಾರತ್ನಂ ವನೇ ಸೃಷ್ಟಂ ಶ್ರೇಷ್ಠಂ ಲೋಕೇಷು ದುರ್ಲಭಂ ॥ ೩೧ ॥

ದುಷ್ಪ್ರಾಪ್ಯಂ ಚ ನರಶ್ರೇಷ್ಠೈರ್ದೇವೈಃ ಸೇನ್ದ್ರೈಸ್ತಪೋಧನೈಃ ।
ಗಂಧರ್ವೈಃ ಪನ್ನಗೈಃ ಸಿದ್ಧೈಶ್ಚಾರಣೈಃ ಪುಣ್ಯಲಕ್ಷಣೈಃ ॥ ೩೨ ॥

ಸ್ವಯಮೇವ ಸಮಾಯಾತಂ ತವಾರ್ಥೇ ಶೃಣು ಸಾಂಪ್ರತಂ ।
ಸ್ತ್ರೀರತ್ನಂ ಚ ಮಹಾಪ್ರಾಜ್ಞ ಪ್ರಕೃಷ್ಟಂ ಪುಣ್ಯನಿರ್ಮಿತಂ ॥ ೩೩ ॥

---

೨೯. ರಂಭೆಯು ಹೋಗಿ ಸಖಿಯು ಹೇಳಿದ ಮಾತನ್ನು ಹೇಳಿದಳು.

೩೦. ಆಯುಪುತ್ರನಾದ ನಹುಷನೇ, ಇದೋ ನಾನು ಬಂದಿದ್ದೇನೆ. ನನ್ನ ಹೆಸರು ರಂಭೆಯು. ತಪಸ್ಸು ಮಾಡುತ್ತಿರುವ ಶಿವನ ಮಗಳು ನನ್ನನ್ನು ಕಳುಹಿಸಿರುವಳು.

೩೧. ಅಯ್ಯಾ! ಪೂರ್ವದಲ್ಲಿ ದೇವದೇವನಾದ ಶಿವನೂ, ಉಮೆಯೂ ನಿನಗೋಸ್ಕರ ಇನ್ನೊಬ್ಬರಿಂದ ಹೊಂದಲಸಾಧ್ಯವಾದ, ಶ್ರೇಷ್ಠವಾದ ಕನ್ಯಾರತ್ನವನ್ನು ಸೃಷ್ಟಿಸಿರುವರು. ಅವಳೇ ನಿನಗೆ ಹೆಂಡತಿಯಾಗಬೇಕೆಂದು ಸೃಷ್ಟಿಸಿರುವವರ ಇಷ್ಟ.

೩೨. ನರಶ್ರೇಷ್ಠರು, ದೇವತೆಗಳು, ತಪಸ್ವಿಗಳು, ಗಂಧರ್ವರು, ಕಿನ್ನರರು, ಪನ್ನಗರು, ಚಾರಣರು ಯಾರಿಂದಲೂ ಇಂಥವಳನ್ನು ಹೊಂದಲಸಾಧ್ಯವು.

೩೩. ಉತ್ತಮವಾದ, ಪುಣ್ಯರೂಪವಾದ ಆ ಸ್ತ್ರೀರತ್ನವು ನಿನಗೋಸ್ಕರ ತಾನಾಗಿಯೇ ಬಂದಿದೆ.

**ಅಶೋಕಸುಂದರೀ ನಾಮ ತವಾರ್ಥಂ ತಪಸಿ ಸ್ಥಿತಾ ।**
**ಅತ್ಯರ್ಥಂ ತು ತಪಸ್ತಪ್ತಂ ಭವಂತಮಿಚ್ಛತೇ ಸದಾ ॥ ೩೪ ॥**

**ಏವಂ ಜ್ಞಾತ್ವಾ ಮಹಾಪ್ರಾಜ್ಞ ಭಜಮಾನಾಂ ಭಜಸ್ವ ಹಿ ।**
**ತೃಧ್ವತೆ ಸಾ ವರಾರೋಹಾ ಪುರುಷಂ ನೈವ ಯಾಚತೇ ॥ ೩೫ ॥**

**ನಹುಷೇಣ ತಯೋಕ್ತಂ ತು ಶ್ರುತ್ವಾ ತಥಾऽವಧಾರಿತಂ ।**
**ಪ್ರತ್ಯುತ್ತರಂ ದದೌ ಚಾಥ ರಂಭೇ ಮೇ ಶ್ರೂಯತಾಂ ವಚಃ ॥ ೩೬ ॥**

**ತತ್ತು ಸರ್ವಂ ವಿಜಾನಾಮಿ ಯತ್ತ್ವಯೋಕ್ತಂ ಮಮಾಗ್ರತಃ ।**
**ಮಮಾಗ್ರೇ ಕಥಿತಂ ಪೂರ್ವಂ ವಸಿಷ್ಠೇನ ಮಹಾತ್ಮನಾ ॥ ೩೭ ॥**

**ಸರ್ವಮೇವ ವಿಜಾನಾಮಿ ಹ್ಯಸ್ಯಾಸ್ತು ತಪ ಉತ್ತಮಂ ।**
**ಶ್ರೂಯತಾಂ ವಚನಂ ರಂಭೇ ಯೇನ ಸೌಖ್ಯಂ ಭವಿಷ್ಯತಿ ॥ ೩೮ ॥**

---

೩೪. ಅವಳ ಹೆಸರು ಅಶೋಕಸುಂದರಿಯು. ನಿನ್ನನ್ನು ಹೊಂದಲು ತಪಸ್ಸು ಮಾಡುತ್ತಿದ್ದಳು. ನಿನ್ನನ್ನು ಹೊಂದಲಪೇಕ್ಷಿಸುತ್ತಾ ಬಹಳವಾಗಿ ತಪಸ್ಸು ಮಾಡಿದಳು.

೩೫ ಇದನ್ನು ತಿಳಿದು ನಿನ್ನನ್ನು ಇಚ್ಛಿಸುತ್ತಿರುವ ಆಕೆಯನ್ನು ವರಿಸು. ನಿನ್ನನ್ನು ಹೊರತು ಮತ್ತೊಬ್ಬರನ್ನು ಆಕೆಯು ಇಚ್ಛಿಸುವುದಿಲ್ಲ.

೩೬. ಅವಳು ಹೇಳಿದ್ದನ್ನು ನಹುಷನು ಕೇಳಿ, ಮನಸ್ಸಿಗೆ ತಂದುಕೊಂಡನು. ರಂಭೆಯೇ! ಕೇಳು ಎಂದು ಉತ್ತರವನ್ನು ಹೇಳಿದನು.

೩೭. ನೀನು ಹೇಳಿದುದೆಲ್ಲವನ್ನೂ ನಾನು ತಿಳಿದಿದ್ದೇನೆ. ಹಿಂದೆಯೇ, ಮಹಾತ್ಮನಾದ ವಸಿಷ್ಠನು ನನಗೆಲ್ಲವನ್ನೂ ಹೇಳಿದ್ದನು.

೩೮. ಇವಳ ಉತ್ತಮವಾದ ತಪಸ್ಸು ಮುಂತಾದ ಎಲ್ಲಾ ವಿಷಯಗಳನ್ನು ಬಲ್ಲೆ. ಒಂದು ವಿಷಯವನ್ನು ಹೇಳುತ್ತೇನೆ ಅದರಿಂದ ಸುಖವುಂಟು.

ಅಹತ್ವಾ ದಾನವಂ ಹುಂಡಂ ನ ಗಚ್ಛಾಮಿ ವರಾನನೇ ।
ಸರ್ವಮೇತತ್ಸುವೃತ್ತಾಂತಮಹಂ ಜಾನಾಮಿ ಚೈವ ಹಿ ॥ ೩೯ ॥

ಮಮಾರ್ಥಂ ತವ ಸಂಭೂತಿಸ್ತ್ವಪ ಆಚರಿತಂ ತ್ವಯಾ ।
ಮಮ ಭಾರ್ಯಾ ನ ಸಂದೇಹೋ ಭವತೀ ವಿಧಿನಾ ಕೃತಾ ॥ ೪೦ ॥

ಮಮಾರ್ಥೇ ನಿಶ್ಚಯಂ ಕೃತ್ವಾ ತಪ ಆಚರಿತಂ ತ್ವಯಾ ।
ಹೃತಾ ತಸ್ಮಾದುಪಾಯೇನ ಭವತೀ ನಿಯಮಸ್ಥಿತಾ ॥ ೪೧ ॥

ಸೂತಿಗೃಹಾದಹಂ ತೇನ ದಾನವೇನಾಧಮೇನ ಚ ।
ಬಾಲಭಾವಸ್ಥಿತೋ ದೇವಿ ಪಿತೃಮಾತೃವಿನಾಕೃತಃ ॥ ೪೨ ॥

ತಸ್ಮಾತ್ತಂ ತು ಹನಿಷ್ಯಾಮಿ ಹುಂಡಂ ತಂ ದಾನವಾಧಮಂ ।
ಪಶ್ಚಾತ್ತ್ವಾಮುಪನೇಷ್ಯೇಽಹಂ ವಸಿಷ್ಠಸ್ಯಾಽಶ್ರಮಂ ಪ್ರತಿ ॥ ೪೩ ॥

ಏವಂ ಕಥಯ ಭದ್ರಂ ತೇ ರಂಭೇ ಮತ್ಪ್ರಿಯಕಾರಿಣೀಂ ।
ಏವಂ ವಿಸರ್ಜಿತಾ ತೇನ ಸತ್ವರಂ ಸಾ ಗತಾ ಪುನಃ ॥ ೪೪ ॥

---

೩೯. ದಾನವನಾದ ಹುಂಡನನ್ನು ಕೊಂದಲ್ಲದೆ ನಾನು ಹೋಗುವುದಿಲ್ಲ. ಎಲ್ಲಾ ವಿಷಯವನ್ನು ನಾನು ತಿಳಿದಿದ್ದೇನೆ.

೪೦-೪೨. ನನಗೋಸ್ಕರ ಆಕೆಯ ಉತ್ಪತ್ತಿಯು. ಆಕೆಯು ನನಗೋಸ್ಕರವೇ ತಪಸ್ಸು ಮಾಡಿದಳು. ತಪಸ್ಸಿನಲ್ಲಿದ್ದ ಆಕೆಯನ್ನು ಉಪಾಯದಿಂದ ಆ ಹುಂಡನು ಕರೆತಂದುದೂ, ಹೆರಿಗೆಯ ಮನೆಯಿಂದ ನನ್ನನ್ನೂ ಕದ್ದು ತಂದುದೂ, ಮಗುವಾದ ನನ್ನನ್ನೂ ನನ್ನ ತಾಯಿತಂದೆಗಳಿಂದ ಅಗಲಿಸಿದುದೂ, ಎಲ್ಲವನ್ನೂ ಬಲ್ಲೆ. ಆದ್ದರಿಂದಲೇ ದಾನವಾಧಮನಾದ ಹುಂಡನನ್ನು ಕೊಲ್ಲುವೆನು.

೪೩-೪೪. ಆ ಮೇಲೆ ಅವಳನ್ನು ವಸಿಷ್ಠನ ಆಶ್ರಮಕ್ಕೆ ಕರೆದುಕೊಂಡು ಹೋಗುವೆನು. ನನಗೆ ಹಿತಕಾರಿಣಿಯಾದ ಅವಳಿಗೆ ಇದೆಲ್ಲವನ್ನು ಹೇಳು ಎಂದು ರಂಭೆಯನ್ನು ಕಳುಹಿಸಲು, ಆ ರಂಭೆಯು ಇವಳ ಬಳಿಗೆ ಬಂದಳು.

ಅಶೋಕಸುಂದರೀಂ ದೇವೀಂ ಕಥಯಾಮಾಸ ತಸ್ಯ ಚ ।
ಸಮಾಸೇನ ತಥಾ ಸರ್ವಂ ರಂಭಾ ಸಾ ದ್ವಿಜಸತ್ತಮ ॥ ೪೫ ॥

ಅಶೋಕಸುಂದರೀ ಬಾಲಾ ಹ್ಯಮುಧಾರ್ಯ ಸುಭಾಷಿತಂ ।
ನಹುಷ್ಯಾಪಿ ವೀರಸ್ಯ ಹರ್ಷೇಣ ಚ ಸಮನ್ವಿತಾ ॥ ೪೬ ॥

ತಸ್ಥೌ ತತ್ರ ತಯಾ ಸಾರ್ಧಂ ಸ್ವಸಖ್ಯಾ ರಂಭಯಾ ತದಾ ।
ಭರ್ತುಶ್ಚ ಕೀದೃಶಂ ವೀರ್ಯಮಿತಿ ಪಶ್ಯಾಮ್ಯಹಂ ಸ್ಥಿತಾ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ತ್ರಯೋದಶಾಧಿಕಶತತಮೋಽಧ್ಯಾಯಃ



---

೪೫. ಆ ರಂಭೆಯು ಅಶೋಕಸುಂದರಿಗೆ ಎಲ್ಲವನ್ನೂ ಸಂಗ್ರಹವಾಗಿ ತಿಳಿಸಿದಳು.

೪೬. ಅಶೋಕಸುಂದರಿಯು ನಹುಷನು ಹೇಳಿದ ವಿಷಯವನ್ನು ಕೇಳಿ ಸಂತೋಷಪಟ್ಟಳು.

೪೭. ಗಂಡನ ಪರಾಕ್ರಮವು ಎಷ್ಟರಮಟ್ಟಿನದು ಎಂಬುದನ್ನು ನೋಡಬೇಕೆಂದು ಆ ರಂಭೆಯೊಡನೆ ಅಲ್ಲಿಯೇ ಅಶೋಕಸುಂದರಿಯು ಇದ್ದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುರ್ದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಅಥ ತೇ ದಾನವಾಃ ಸರ್ವೇ ಹುಂಡಸ್ಯ ಪರಿಚಾರಕಾಃ ।
ನಹುಷಸ್ಯಾಪಿ ಸಂವಾದಂ ರಂಭಾಯಾಃ ಶುಶ್ರುವುಸ್ತದಾ ॥ ೧ ॥

ಆಚಚಕ್ಷುಶ್ಚ ತೇ ಹುಂಡಂ ದೈತ್ಯೇಂದ್ರಂ ಸರ್ವಮೇವ ತತ್ ।
ತಮಾಕರ್ಣ್ಯ ಸ ಚುಕ್ರೋಧ ದೂತಂ ವಾಕ್ಯಮಥಾಬ್ರವೀತ್ ॥ ೨ ॥

ಗಚ್ಛ ದೂತ ಮಮಾಽಽದೇಶಾತ್ತ್ವಮೇವಂ ತಂ ಸಮಾಚರ ।
ಸಂಭಾಷತೇ ತಯಾ ಸಾರ್ಧಂ ಪುರುಷಃ ಶಿವಕನ್ಯಯಾ ॥ ೩ ॥

---

## ನೂರ ಹದಿನಾಲ್ಕನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಅಲ್ಲಿದ್ದ ಹುಂಡನ ಆಳುಗಳಾದ ದಾನವರು ಆ ರಂಭೆ ನಹುಷರ ಸಂವಾದವನ್ನು ಕೇಳಿದರು.

೨. ಅವರು ಅದೆಲ್ಲವನ್ನೂ ಹುಂಡನಿಗೆ ಹೇಳಿದರು. ಅದನ್ನು ಕೇಳಿ ಅವನು ಕೋಪಗೊಂಡು ದೂತನಿಗೆ ಹೇಳಿದನು.

೩. ಎಲೈ ದೂತನೆ, ನೀನು ಹೋಗು. ಆ ಮನುಷ್ಯನು ಶಿವಕನ್ಯೆಯೊಡನೆ ಮಾತನಾಡಿದನಂತೆ, ಅದನ್ನು ತಿಳಿದು ಸರಿಯಾದ ರೀತಿಯಲ್ಲಿ ನಡೆ ಎಂದನು.

ಸ್ವಾಮಿನಿರ್ದೇಶಮಾಕರ್ಣ್ಯ ಜಗಾಮ ಲಘು ದಾನವಃ ।
ವಿವಿಕ್ತೇ ನಹುಷಂ ವೀರಮಿದಂ ವಚನಮಬ್ರವೀತ್ ॥ ೪ ॥

ರಥೇನ ಸಾಶ್ವಸೂತೇನ ದಿವ್ಯೇನ ಪರಿತಿಷ್ಠಸಿ ।
ಧನುಷಾ ದಿವ್ಯಬಾಣೈಸ್ತು ಸಭಾಯಾಂ ಹಿ ಭಯಂಕರಃ ॥ ೫ ॥

ಕಸ್ಯ ಕೇನ ಸುಕಾರ್ಯೇಣ ಪ್ರೇಷಿತಃ ಕೇನ ವೈ ಭವಾನ್ ।
ಅನಯಾ ರಂಭಯಾ ತೇಽದ್ಯಾಪ್ಯನಯಾ ಶಿವಕನ್ಯಯಾ ॥ ೬ ॥

ಕಿಮುಕ್ತಂ ತತ್ಸ್ಫುಟಂ ಸರ್ವಂ ಕಥಯಸ್ವ ಮಮಾಗ್ರತಃ ।
ಹುಂಡಸ್ಯ ದೇವಮರ್ದಸ್ಯ ನ ಬಿಭೇತಿ ಭವಾನ್ ಕಥಂ ॥ ೭ ॥

ಏತನ್ಮೇ ಸರ್ವಮಾಚಕ್ಷ್ವ ಯದಿ ಜೀವಿತುಮಿಚ್ಛಸಿ ।
ಸದ್ಯೋ ಗಚ್ಛಾತ್ರ ಮಾ ತಿಷ್ಠ ದುಃಸಹೋ ದಾನವಾಧಿಪಃ ॥ ೮ ॥

---

೪. ದೊರೆಯ ಅಪ್ಪಣೆಯನ್ನು ಕೇಳಿ ಆ ಆಳು ಜಾಗ್ರತೆಯಾಗಿ ಅಲ್ಲಿಗೆ ಹೋಗಿ, ಒಬ್ಬರೂ ಇಲ್ಲದಿರುವಾಗ ನಹುಷನನ್ನು ಕುರಿತು ಇಂತೆಂದನು.

೫. ಕುದುರೆ ಸಾರಥಿಯಿಂದ ಕೂಡಿರುವ ರಥದೊಡನೆ ಧನುಸ್ಸು ಬಾಣಗಳನ್ನು ಧರಿಸಿ ಸಭೆಯಲ್ಲಿ ಭಯಂಕರವಾಗಿ ನಿಂತಿದ್ದೀಯೆ.

೬. ನೀನು ಯಾರು? ಯಾವ ಕೆಲಸಕ್ಕೋಸ್ಕರ ನಿನ್ನನ್ನು ಕಳುಹಿಸಿದ್ದಾನೆ? ಕಳುಹಿಸಿದವರು ಯಾರು?

೭. ಆ ರಂಭೆಯೂ, ಶಿವಕನ್ಯೆಯೂ ನಿನ್ನೊಡನೆ ಏನು ಹೇಳಿದರು? ಅದೆಲ್ಲವನ್ನೂ ನನ್ನೊಡನೆ ವ್ಯಕ್ತವಾಗಿ ಹೇಳು. ದೇವತೆಗಳನ್ನೂ ನಾಶಪಡಿಸುವ ಹುಂಡನಿಗೂ ನೀನೇಕೆ ಹೆದರಲಿಲ್ಲ?

೮. ನೀನು ಬದುಕಬೇಕೆಂದಿದ್ದರೆ ಅದೆಲ್ಲವನ್ನೂ ನೀನು ನನಗೆ ಹೇಳು. ಒಡನೆಯೇ ಇಲ್ಲಿಂದ ಹೊರಡು, ನಿಲ್ಲಬೇಡ, ಹುಂಡನು ಬಹು ಕ್ರೂರಿಯು.

॥ ನಹುಷ ಉವಾಚ ॥

ಯೋಽಸಾವಾಯುರ್ಬಲೀ ರಾಜಾ ಸಪ್ತದ್ವೀಪಾಧಿಪಃ ಪ್ರಭುಃ ।
ತಸ್ಯ ಮಾಂ ತನಯಂ ವಿದ್ಧಿ ಸರ್ವದೈತ್ಯವಿನಾಶನಂ ॥
ನಹುಷಂ ನಾಮ ವಿಖ್ಯಾತಂ ದೇವಬ್ರಾಹ್ಮಣಪೂಜಕಂ ॥ ೯ ॥

ಹುಂಡೇನಾಪಹೃತಂ ಬಾಲ್ಯೇ ಸ್ವಾಮಿನಾ ತವ ಮಾನದ ।
ಸೇಯಂ ಕನ್ಯಾ ಶಿವಸ್ಯಾಪಿ ದೈತ್ಯೇನಾಪಹೃತಾ ಪುರಾ ॥ ೧೦ ॥

ಘೋರಂ ತಪಶ್ಚರತ್ಯೇಷಾ ಹುಂಡಸ್ಯಾಪಿ ವಧಾಯ ಚ ।
ಯೋಽಹಮಾದೌ ಹೃತೋ ಬಾಲಸ್ತ್ವಯಾಽಽಯೋಃ ಸೂತಿಕಾಗೃಹಾತ್ ॥ ೧೧ ॥

ದಾಸ್ಯಾ ಅಪಿ ಕರೇ ದತ್ತಃ ಸೂದಸ್ಯಾಪಿ ದುರಾತ್ಮನಾ ।
ವಧಾರ್ಥಂ ಶ್ರೂಯತಾಂ ಪಾಪ ಸೋಽಹಮದ್ಯ ಸಮಾಗತಃ ॥ ೧೨ ॥

ಅಸ್ಯಾಪಿ ಹುಂಡದೈತ್ಯಸ್ಯ ದುಷ್ಟಸ್ಯ ಪಾಪಕರ್ಮಣಃ ।
ಅನ್ಯಾಂಶ್ಚ ದಾನವಾನ್ ಘೋರಾನ್ನಯಿಷ್ಯೇ ಯಮಸಾದನಂ ॥ ೧೩ ॥

---

೯. ನಹುಷನು ಹೇಳಿದನು:—ಸಪ್ತದ್ವೀಪಗಳಿಗೂ ಅಧಿಪತಿಯಾದ ಆಯುವೆಂಬ ರಾಜನು ಪ್ರಸಿದ್ಧನಾಗಿದ್ದಾನೆ. ನಾನು ಅವನ ಮಗನು. ಎಲ್ಲಾ ದೈತ್ಯರನ್ನು ಧ್ವಂಸಮಾಡತಕ್ಕವನು. ನನ್ನ ಹೆಸರು ನಹುಷನು. ದೇವಬ್ರಾಹ್ಮಣಪೂಜಕನಾಗಿದ್ದೇನೆ.

೧೦. ನಿನ್ನ ಸ್ವಾಮಿಯಾದ ಹುಂಡನು ಬಾಲ್ಯದಲ್ಲಿಯೇ ನನ್ನನ್ನು ಕದ್ದು ತಂದನು. ಆ ಶಿವಕನ್ಯೆಯನ್ನೂ ಅದೇ ನಿಮ್ಮ ದೈತ್ಯನು ಕದ್ದು ತಂದನು.

೧೧-೧೨. ಆ ಶಿವಕನ್ಯೆಯು ಹುಂಡನ ನಾಶಕ್ಕೋಸ್ಕರ ಘೋರವಾದ ತಪಸ್ಸನ್ನು ಮಾಡುತ್ತಿದ್ದಾಳೆ. ಆ ರಾಕ್ಷಸನು ಬಾಲ್ಯದಲ್ಲಿಯೇ ಆಯುರಾಜನ ಹೆರಿಗೆಯ ಮನೆಯಿಂದ ನನ್ನನ್ನು ಕದ್ದುತಂದು ದಾಸಿಯ ಕೈಯಲ್ಲಿ ಕೊಟ್ಟು ಅಡಿಗೆಯವನಿಂದ ಈ ಮಗುವನ್ನು ಕೊಂದು ಅಡಿಗೆಮಾಡಿ ಬಡಿಸೆಂದು ಹೇಳಿದನು. ಎಲೈ ಪಾಪಿಯೇ! ಇಗೋ! ಅದೇ ಆ ನಾನು. ಈಗ ಆ ಹುಂಡನ ವಧೆಗ್ಕೋಸರ ಬಂದಿದ್ದೇನೆ.

೧೩-೧೪. ಆ ಪಾಪಿಯಾದ ಹುಂಡನನ್ನೂ, ಘೋರರಾದ ಮಿಕ್ಕ ದಾನವ

**ಮಾಮೇವಂ ವಿದ್ಧಿ ಪಾಪಿಷ್ಠ ಏವಂ ಕಥಯ ದಾನವಂ ।**
**ಏವಮಾಕರ್ಣ್ಯ ತತ್ಸರ್ವಂ ನಹುಷಸ್ಯ ಮಹಾತ್ಮನಃ ॥ ೧೪ ॥**

**ಗತ್ವಾ ಹುಂಡಂ ಸ ದುಷ್ಟಾತ್ಮಾ ಆಚಚಕ್ಷೇಽಸ್ಯ ಭಾಷಿತಂ ।**
**ನಿಶಮ್ಯ ತನ್ಮುಖಾತ್ತೂರ್ಣಂ ಚುಕ್ರೋಧ ದಿತಿಜೇಶ್ವರಃ ॥ ೧೫ ॥**

**ಕಸ್ಮಾತ್ಸೂದೇನ ಪಾಪೇನ ತಯಾ ದಾಸ್ಯಾ ನ ಘಾತಿತಃ ।**
**ಯತೋಽಯಂ ವೃದ್ಧಿಮಾಯಾತೋ ಮಯಾ ವ್ಯಾಧಿರುಪೇಕ್ಷಿತಃ ॥ ೧೬ ॥**

**ಅದ್ಯೈನಂ ಘಾತಯಿಷ್ಯಾಮಿ ತ್ವನಯಾ ಶಿವಕನ್ಯಯಾ ।**
**ಆಯೋಃ ಪುತ್ರಂ ಖಲಂ ಯುದ್ಧೇ ಬಾಣೈರೇಭಿಃ ಶಿಲಾಶಿತೈಃ ॥ ೧೭ ॥**

**ಏವಮುಕ್ತ್ವಾ ವಿಚಿಂತ್ಯೈವ ಸಾರಥಿಂ ವಾಕ್ಯಮಬ್ರವೀತ್ ।**
**ಯೋಜಯ ಸ್ಯಂದನಂ ತ್ವಂ ಮೇ ವಾಜಿಭಿಃ ಸಾಧುಭಿಃ ಶುಭೈಃ ॥ ೧೮ ॥**

---

ರನ್ನೂ ಯಮನ ಮನೆಗೆ ಕಳುಹಿಸುತ್ತೇನೆ. ನಾನು ಈ ರೀತಿಯಾದವನೆಂದು ಹುಂಡನಿಗೆ ಹೇಳು.

೧೫. ನಹುಷನ ಈ ಮಾತುಗಳನ್ನು ಕೇಳಿ, ಹುಂಡನ ಬಳಿಗೆ ಹೋಗಿ ಆ ದೂತನು ಎಲ್ಲವನ್ನೂ ಹೇಳಿದನು. ಆ ದೂತನಿಂದ, ಆ ಮಾತುಗಳನ್ನು ಕೇಳಿ ಹುಂಡನು ಬಹು ಕೋಪಗೊಂಡನು.

೧೬. ಆ ಸೂದನೂ, ದಾಸಿಯೂ ಏತಕ್ಕೆ ಕೊಲ್ಲದೇ ಹೋದರು? ಆದ್ದರಿಂದಲೇ ಈತನು ವೃದ್ಧಿಯನ್ನು ಹೊಂದಿದನು. ನಾನು ರೋಗವನ್ನು ಉದಾಸೀನಮಾಡಿದೆನು.

೧೭. ಈ ಆಯುವಿನ ಮಗನಾದ ದುಷ್ಟನಾದ ನಹುಷನನ್ನು ಶಿವಕನ್ಯೆಯೊಡನೆ . ಈಗಲೇ ಈ ಚೂಪಾದ ಬಾಣಗಳಿಂದ ಕೊಲ್ಲುತ್ತೇನೆ.

೧೮. ಹೀಗೆಂದು ಹೇಳಿ ಯೋಚಿಸಿ, ಸಾರಥಿಯನ್ನು ಕುರಿತು ಒಳ್ಳೆಯ ಕುದುರೆಗಳಿಂದ ಕಟ್ಟಿದ ರಥವನ್ನು ಸಿದ್ಧಪಡಿಸೆಂದನು.

ಸೇನಾಧ್ಯಕ್ಷಂ ಸಮಾಹೂಯ ಇತ್ಯುವಾಚ ರುಷಾನ್ವಿತಃ ।
ಸಜ್ಜ್ಯತಾಂ ಮಮ ಸೈನ್ಯಂ ತ್ವಂ ಶೂರಾನ್ನಾಗಾನ್ ಪ್ರಕಲ್ಪಯ ॥ ೧೯ ॥

ಸಾರೋಹೈಸ್ತುರಗಾನ್ ಯೋಜ ಪತಾಕಾಧ್ವಜಚಾಮರೈಃ ।
ಚತುರಂಗಂ ಬಲಂ ಮೇಽದ್ಯ ಯೋಜಯಸ್ವ ಹಿ ಸತ್ವರಂ ॥ ೨೦ ॥

ಏವಮಾಕರ್ಣ್ಯ ತತ್ತಸ್ಯ ಹುಂಡಸ್ಯಾಪಿ ಮತಂ ಲಘು ।
ಸೇನಾಧ್ಯಕ್ಷೋ ಮಹಾಪ್ರಾಜ್ಞಃ ಸರ್ವಂ ಚಕ್ರೇ ಯಥಾವಿಧಿ ॥ ೨೧ ॥

ಚತುರಂಗೇಣ ಸೇನಾಸೌ ಬಲೇನ ಮಹತಾಽನ್ವಿತಃ ।
ಜಗಾಮ ನಹುಷಂ ವೀರಂ ಚಾಪಬಾಣಧರಂ ರಣೇ ॥ ೨೨ ॥

ಇಂದ್ರಸ್ಯ ಸ್ಯಂದನೇ ಯುಕ್ತಂ ಸರ್ವಶಾಸ್ತ್ರಭೃತಾಂ ವರಂ ।
ಉದ್ಯತಂ ಸಮರೇ ವೀರಂ ದುರಾಪಂ ದೇವದಾನವೈಃ ॥ ೨೩ ॥

---

೧೯. ಸೇನಾಪತಿಯನ್ನು ಕರೆದು, ಸೈನ್ಯವನ್ನು ಸಿದ್ಧಪಡಿಸು. ಬಲಿಷ್ಠವಾದ ಆನೆಗಳನ್ನು ಅದರಲ್ಲಿ ಸೇರಿಸು ಎಂದು ಕೋಪದಿಂದ ಹೇಳಿದನು.

೨೦. ಸವಾರರನ್ನೂ ಕುದುರೆಗಳನ್ನೂ ಸಿದ್ಧಪಡಿಸು. ಚತುರಂಗ ಸೈನ್ಯವನ್ನು ಜಾಗ್ರತೆ ಸಿದ್ಧಪಡಿಸು ಎಂದು ಹೇಳಿದನು.

೨೧. ಹುಂಡನ ಮಾತನ್ನು ಕೇಳಿ ಅವನ ಅಭಿಪ್ರಾಯದಂತೆ ಸೇನಾಪತಿಯು ಎಲ್ಲವನ್ನೂ ಸಿದ್ಧಪಡಿಸಿದನು.

೨೨. ಬಹಳವಾದ ಚತುರಂಗ ಸೇನೆಯೊಡನೆ ಕೂಡಿಕೊಂಡು ಆ ಹುಂಡನು ನಹುಷನನ್ನು ಎದುರಿಸಲು ಹೊರಟನು.

೨೩. ಇಂದ್ರನ ರಥದಲ್ಲಿ ಕುಳಿತು ಸರ್ವ ಶಸ್ತ್ರಗಳನ್ನು ಧರಿಸಿ ದೇವದಾನವರಿಂದ ಎದುರಿಸಲಸಾಧ್ಯನಾದ ವೀರ ನಹುಷನನ್ನು ಎದುರಿಸಲು ಹೊರಟನು.

ಪಶ್ಯಂತಿ ಗಗನೇ ದೇವಾ ವಿಮಾನಸ್ಥಾ ಮಹೌಜಸಃ ।
ತೇಜೋಜ್ವಾಲಾಸಮಾಕೀರ್ಣಂ ದಿವಿಸ್ಥಮಿವ ಭಾಸ್ಕರಂ ॥ ೨೪ ॥

॥ ಸೂತ ಉವಾಚ ॥

ಅಥ ತೇ ದಾನವಾಃ ಸರ್ವೇ ವವೃಷುಸ್ತಂ ಶರೋತ್ತಮೈಃ ।
ಖಡ್ಗೈಃ ಪಾಶೈರ್ಮಹಾಶೂಲೈಃ ಶಕ್ತಿಭಿಶ್ಚ ಪರಶ್ವಧೈಃ ॥ ೨೫ ॥

ಯುಯುಧುಃ ಸಂಯುಗೇ ತೇನ ನಹುಷೇಣ ಮಹಾತ್ಮನಾ ।
ಸಂರಂಭಾದ್ಗರ್ಜಮಾನಾಸ್ತೇ ಯಥಾ ಮೇಘಾ ಗಿರೌ ತಥಾ ॥ ೨೬ ॥

ತದ್ವಿಕ್ರಮಂ ಸಮಾಲೋಕ್ಯ ಆಯುಪುತ್ರಃ ಪ್ರತಾಪವಾನ್ ।
ಇಂದ್ರಾಯುಧಸಮಂ ಚಾಪಂ ವಿಸ್ಫಾರ್ಯ ಸುಗುಣಸ್ವರಂ ॥ ೨೭ ॥

ವಜ್ರಸ್ಫೋಟಸಮಃ ಶಬ್ದಃ ಚಾಪಸ್ಯಾಪಿ ಮಹಾತ್ಮನಾ ।
ನಹುಷೇಣ ಕೃತೋ ವಿಪ್ರಾ ದಾನವಾನಾಂ ಭಯಪ್ರದಃ ॥ ೨೮ ॥

---

೨೪. ಅಂತರಿಕ್ಷದಲ್ಲಿ ದೇವತೆಗಳು, ತೇಜಸ್ಸು ಜ್ವಾಲೆಯಿಂದ ಕೂಡಿರುವ ನಹುಷನನ್ನು ಅಂತರಿಕ್ಷದಲ್ಲಿ ಪ್ರಕಾಶಿಸುವ ಸೂರ್ಯನಂತೆ ಕಂಡರು.

೨೫. ಸೂತನು ಹೇಳಿದನು :—ಆ ಮೇಲೆ ದಾನವರೆಲ್ಲರೂ ಆ ನಹುಷನನ್ನು ಖಡ್ಗ, ಪಾಶ, ಶೂಲ, ಶಕ್ತಿ ಪರಶ್ವಧ, ಬಾಣಗಳಿಂದ ಮಳೆಯನ್ನು ಸುರಿಸುತ್ತಾ ಎದುರಿಸಿದರು.

೨೬. ಯುದ್ಧದಲ್ಲಿ ದಾನವರು, ನಹುಷನ ಮೇಲೆ, ಮೇಘಗಳು ಪರ್ವತದ ಮೇಲೆ ಗರ್ಜಿಸುತ್ತಾ ಮಳೆ ಸುರಿಸುವಂತೆ ಎದುರಿಸಿ ಯುದ್ಧಮಾಡಿದರು.

೨೭-೨೮. ಅವರ ಪ್ರತಾಪವನ್ನು ನಹುಷನು ನೋಡಿ ಇಂದ್ರಾಯುಧಕ್ಕೆ ಸಮಾನವಾದ ಆತನ ಧನುಸ್ಸನ್ನು ಹಿಡಿಯಲು ಅದು ದಾನವರಿಗೆ ಭಯಂಕರವಾಗಿ ಸಿಡಿಲಿನ ಶಬ್ದವನ್ನು ಮಾಡಿತು.

**ಮಹತಾ ತೇನ ಶಬ್ದೇನ ದಾನವಾಶ್ಚ ಚಕಂಪಿರೇ ।**
**ಕಂಪನಾವಿಷ್ಟಹೃದಯಾ ಭಗ್ನಸತ್ವಾ ಮಹಾಹವೇ ॥ ೨೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಚತುರ್ದಶಾಧಿಕಶತತಮೋಧ್ಯಾಯಃ**



---

೨೯. ಆ ಘೋರಯುದ್ಧಧ್ವನಿಯಿಂದ ದಾನವರು ನಡುಗಿದರು. ನಡುಗುತ್ತಾ ಯುದ್ಧದಲ್ಲಿ ಬಲಗುಂದಿದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ತತಸ್ತ್ವಸೌ ಸಂಯತಿ ರಾಜಮಾನಃ
ಸಮುದ್ಯತಶ್ಚಾಪಧರೋ ಮಹಾತ್ಮಾ ।
ಯಥೈವ ಕಾಲಃ ಕುಪಿತಃ ಸ ಲೋಕಾನ್
ಸಂಹರ್ತುಮಭ್ಯುಚ್ಛ್ರಿತಸ್ತು ತಥಾ ಸ ದಾನವಾನ್ ॥ ೧ ॥

ಮಹಾಸ್ತ್ರಜಾಲೈ ರವಿತೇಜತುಲ್ಯೈಃ
ಸುದೀಪ್ತಿಮದ್ಭಿರ್ನಿಜಘಾನ ತೇಜಸಾ ।
ವಾಯುರ್ಯಥೋನ್ಮೂಲಯತೀಹ ಪಾದಪಾಂ
ಸ್ತಥೈವ ರಾಜಾ ನಿಜಘಾನ ದಾನವಾನ್ ॥ ೨ ॥

ವಾಯುರ್ಯಥಾ ಮೇಘಚಯಂ ಚ ದಿವ್ಯಂ
ಸಂಚಾಲಯೇತ್ಸ್ವೇನ ಬಲೇನ ತೇಜಸಾ ।

---

## ನೂರ ಹದಿನೈದನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಹೆದೆಯನ್ನೇರಿಸಿದ ಧನಸ್ಸನ್ನು ಹಿಡಿದು ರಣರಂಗದಲ್ಲಿ ಆ ನಹುಷನು ಕೋಪಗೊಂಡ ಯಮನಂತೆ ಲೋಕವನ್ನೇ ಸಂಹರಿಸಲು ಪ್ರಯತ್ನಪಟ್ಟಂತೆ ಕಂಡುಬಂದಿತು.

೨. ಸೂರ್ಯತೇಜಸ್ಸಿಗೆ ಸಮವಾದ ಅಸ್ತ್ರಗಳಿಂದ, ವಾಯುವು ಮರಗಳನ್ನು ಬುಡದಿಂದ ಕಿತ್ತುಹಾಕುವಂತೆ ದಾನವರನ್ನು ನಹುಷನು ಕೊಂದನು.

ತಥಾ ಸ ರಾಜಾ ಹ್ಯಸುರಾನ್ ಸಮಸ್ತಾನ್
ಸಂನಾಶಯೇದ್ಬಾಣವರೈಃ ಸುತೀಕ್ಷ್ಣೈಃ ॥ ೩ ॥

ನ ಶೇಕುರ್ದಾನವಾಃ ಸರ್ವೇ ಬಾಣವರ್ಷಂ ಮಹಾತ್ಮನಃ ।
ಮೃತಾಃ ಕೇಚಿದ್ದ್ರುತಾಃ ಕೇಚಿನ್ನಷ್ಟಾಃ ಕೇಚಿನ್ಮಹಾಹವಾತ್ ॥ ೪ ॥

ಮಹಾತೇಜಂ ಮಹಾಪ್ರಾಜ್ಞಂ ಮಹಾದಾನವಶಾಸನಂ ।
ಸ ಚುಕ್ರೋಧ ಸುದುಷ್ಟಾತ್ಮಾ ದೃಷ್ಟ್ವಾ ತಂ ನೃಪನಂದನಂ ॥ ೫ ॥

ಸ್ಥಿತೋ ಗತ್ವೇದಮಾಭಾಷ್ಯ ತಿಷ್ಠ ತಿಷ್ಠೇತಿ ಚಾऽऽಹವೇ ।
ತ್ವಾಮದ್ಯೈವ ನಯಿಷ್ಯಾಮಿ ಆಯುಪುತ್ರ ಯಮಾಂತಿಕೇ ॥ ೬ ॥

॥ ನಹುಷ ಉವಾಚ ॥

ಸ್ಥಿತೋಽಸ್ಮಿ ಸಮರೇ ಪಶ್ಯ ತ್ವಾಮಹಂ ಹಂತುಮಾಗತಃ ।
ಅಹತ್ವಾ ನೈವ ಯಾಸ್ಯಾಮಿ ಭವಂತಂ ಪಾಪಚೇತನಂ ॥ ೭ ॥

---

೩. ಗಾಳಿಯು ಮೇಘಗಳ ಗುಂಪನ್ನು ತನ್ನ ಪರಾಕ್ರಮದಿಂದ ಓಡಿಯಾಡಿಸುವಂತೆ ರಾಜನು ದಾನವರನ್ನೆಲ್ಲಾ ಓಡಿಯಾಡಿಸಿ ಕೊಂದನು.

೪. ನಹುಷನ ಬಾಣದ ಪೆಟ್ಟನ್ನು ತಡೆಯಲಾರದೆ ದಾನವರು ಕೆಲವರು ಸತ್ತರು. ಕೆಲವರು ಓಡಿದರು. ಕೆಲವರು ಕಣ್ಣಿಗೆ ಕಾಣದವರಾದರು.

೫. ಮಹಾತೇಜಸ್ಸುಳ್ಳ ಆ ನಹುಷನನ್ನು ನೋಡಿ ಆ ದುಷ್ಟ ಹುಂಡನು ಕೋಪಗೊಂಡನು.

೬. ಆ ಹುಂಡನು ನಹುಷನ ಬಳಿಗೆ ಹೋಗಿ, ರಣರಂಗದಲ್ಲಿ ನಿಲ್ಲು ನಿಲ್ಲು ನಿನ್ನನ್ನು ಈಗಲೇ ಯಮನ ಬಳಿಗೆ ಕಳುಹಿಸುತ್ತೇನೆ ಎಂದು ಹೇಳಿದನು.

೭. ನಹುಷನು ಹೇಳಿದನು:—ನಾನು ಯುದ್ಧರಂಗದಲ್ಲಿ ಸಿದ್ಧನಾಗಿದ್ದೇನೆ. ನಿನ್ನನ್ನು ಕೊಲ್ಲುವುದಕ್ಕೆ ಬಂದಿದ್ದೇನೆ. ಪಾಪಿಯಾದ ನಿನ್ನನ್ನು ಕೊಲ್ಲದೆ ಹೋಗುವುದೇ ಇಲ್ಲ.

**ಇತ್ಯುಕ್ತ್ವಾ ಧನುರಾದಾಯ ಬಾಣಾನಗ್ನಿಶಿಖೋಪಮಾನ್ ।**
**ಛತ್ರೇಣ ಧ್ರಿಯಮಾಣೇನ ಶುಶುಭೇ ಸೋಽಪಿ ಸಂಗರೇ ॥ ೮ ॥**

**ಇಂದ್ರಸ್ಯ ಸಾರಥಿಂ ದಿವ್ಯಂ ಮಾತಲಿಂ ವಾಕ್ಯಮಬ್ರವೀತ್ ।**
**ವಾಹಯಸ್ವ ರಥಂ ಮೇಽದ್ಯ ಹುಂಡದೈತ್ಯಸ್ಯ ಸಂಮುಖೇ ॥ ೯ ॥**

**ಇತ್ಯುಕ್ತಸ್ತೇನ ವೀರೇಣ ಮಾತಲಿರ್ಲಘುವಿಕ್ರಮಃ ।**
**ತುರುಗಾಂಶ್ಚೋದಯಾಮಾಸ ಮಹಾವಾತರಯೋಪಮಾನ್ ॥ ೧೦ ॥**

**ಉತ್ಪೇತುಶ್ಚ ತತೋ ವಾಹಾಹಂಸಾ ಇವ ಸರೋಜಲೇ ।**
**ಛತ್ರೇಣ ಚಂದುವರ್ಣೇನ ಸ ರಥೇನ ಪತಾಕಿನಾ ॥ ೧೧ ॥**

**ನಭಸ್ತಲಂ ಸಮಾಸಾದ್ಯ ಯಥಾ ಸೂರ್ಯೋ ವಿರಾಜತೇ ।**
**ಆಯುಪುತ್ರಸ್ತಥಾ ಸಂಖ್ಯೇ ತೇಜಸಾ ವಿಕ್ರಮೇಣ ಚ ॥ ೧೨ ॥**

---

೮. ಹೀಗೆಂದು ಹೇಳಿ ಅಗ್ನಿಯ ಶಿಖೆಗಳಂತಿರುವ ಬಾಣಗಳನ್ನು ತೆಗೆದುಕೊಂಡು ಸಿದ್ಧನಾಗಿ ಛತ್ರಿಯನ್ನು ಹಿಡಿದುಕೊಂಡು ಆ ರಣರಂಗದಲ್ಲಿ ಪ್ರಕಾಶಿಸಿದನು.

೯. ಇಂದ್ರನ ಸಾರಥಿಯಾದ ಮಾತಲಿಯನ್ನು ಕುರಿತು ಹುಂಡನ ಎದುರಿಗೆ ರಥವನ್ನು ತೆಗೆದುಕೊಂಡು ಹೋಗು ಎಂದು ಹೇಳಿದನು.

೧೦. ಆ ವೀರನು ಹೀಗೆ ಹೇಳುತ್ತಲೂ, ವಾಯುವೇಗಕ್ಕೆ ಸಮಾನವಾದ ಕುದುರೆಗಳನ್ನು ಅವನು ಹೇಳಿದಂತೆ ನಡೆಸಿದನು.

೧೧. ಕುದುರೆಗಳು, ಹಂಸಗಳು ಸರೋವರದ ನೀರಿಗೆ ಇಳಿಯುವಂತೆ ಮೇಲೆ ಬೀಳಲಾರಂಭಿಸಿದುವು.

೧೨. ಚಂದ್ರನಂತಿರುವ ಛತ್ರಿಯಿಂದಲೂ, ಧ್ವಜದಿಂದಲೂ, ರಥದಿಂದಲೂ, ಕೂಡಿರುವ ಆ ನಹುಷನು ಅಂತರಿಕ್ಷದಲ್ಲಿ ಸೂರ್ಯನು ಪ್ರಕಾಶಿಸುವಂತೆ ತನ್ನ ತೇಜಸ್ಸಿನಿಂದ ಪ್ರಕಾಶಿಸಿದನು.

ಅಥ ಹುಂಡೋ ರಥಸ್ಥೋಽಪಿ ಭ್ರಾಜಮಾನಃ ಸ್ವತೇಜಸಾ ।
ಸರ್ವಾಯುಧಾಸ್ತ್ರಸಂಯುಕ್ತಸ್ತದ್ವತ್ಸೋಽಪ್ಯಂಬರೇ ಸ್ಥಿತಃ ॥ ೧೩ ॥

ಉಭಯೋರ್ವೀರಯೋರ್ಯುದ್ಧಂ ದೇವವಿಸ್ಮಯಕಾರಕಂ ।
ಆಸೀತ್ತದಾ ಮಹಾಪ್ರಾಜ್ಞಃ ದಾರುಣಂ ಭೀತಿದಾಯಕಂ ॥ ೧೪ ॥

ಸುಬಾಣೈರ್ನಿಶಿತೈಸ್ತೀಕ್ಷ್ಣೈಃ ಕಂಕಪತ್ರೈಃ ಶಿಲೀಮುಖೈಃ ।
ಹುಂಡೇನ ತಾಡಿತೋ ರಾಜಾ ಸ ಬಾಹ್ವೋರನ್ತರೇ ತದಾ ॥ ೧೫ ॥

ಸುಭಾಲೆ ಪಂಚಭಿರ್ಬಾಣೈರ್ವಿದ್ಧಃ ಕ್ರುದ್ಧೋಽಭವತ್ತದಾ ।
ಸ ವಿದ್ಧಸ್ತು ಮಹಾಬಾಣೈರಧಿಕಂ ಶುಶುಭೇ ನೃಪಃ ॥ ೧೬ ॥

ಸಾರುಣಃ ಕರಮಾಲಾಭಿರುದಯಂಶ್ಚ ದಿವಾಕರಃ ।
ರುಧಿರೇಣ ಸುದಿಗ್ಧಾಂಗೋ ಹೇಮಬಾಣೈಸ್ತನುಸ್ಥಿತೈಃ ॥ ೧೭ ॥

---

೧೩. ಹುಂಡನೂ ಕೂಡ ವೀರ್ಯದಿಂದ ಪ್ರಕಾಶಿಸುತ್ತಾ ಸರ್ವಾಯುಧಗಳಿಂದಲೂ ಕೂಡಿ ಆ ನಹುಷನಂತೆಯೇ ಪ್ರಕಾಶಿಸಿದನು.

೧೪. ಆ ಇಬ್ಬರು ವೀರರಿಗೂ, ದೇವತೆಗಳೂ ಆಶ್ಚರ್ಯಪಡುವಂತೆ ಮಹಾ ಭಯಂಕರವಾದ ಯುದ್ಧವು ನಡೆಯಿತು.

೧೫. ಆ ಹುಂಡನು ಹರಿತವಾದ ಬಾಣಗಳಿಂದ ನಹುಷನ ಎದೆಯ ಮೇಲೆ ಹೊಡೆದನು.

೧೬. ಅದೇ ಹುಂಡನು ಹಣೆಯ ಮೇಲೆ ಐದು ಬಾಣಗಳನ್ನು ಹೊಡೆದನು. ಈ ಏಟುಗಳಿಂದ ಆ ನಹುಷನು ಕೋಪಗೊಂಡು ಪ್ರಕಾಶಿಸಿದನು.

೧೭. ಹುಟ್ಟುತ್ತಿರುವ ಸೂರ್ಯನು ತನ್ನ ಕಿರಣಗಳಿಂದ ಹೇಗೆ ಕೆಂಪಾಗಿ ಪ್ರಕಾಶಿಸುವನೋ ಹಾಗೆ ರಕ್ತದಿಂದ ಬಳಿಯಲ್ಪಟ್ಟು ಚಿನ್ನದ ಬಾಣಗಳು ಚುಚ್ಚಿಕೊಂಡಿರುವ ಆ ನಹುಷನು ಪ್ರಕಾಶಿಸಿದನು.

ಸೂರ್ಯವಚ್ಛೋಭತೇ ರಾಜಾ ಪೂರ್ವವನ್ನಭಸಿ ಸ್ಥಿತಃ ।
ದೃಷ್ಟ್ವಾ ತು ಪೌರುಷಂ ತಸ್ಯ ದಾನವಂ ವಾಕ್ಯಮಬ್ರವೀತ್ ॥ ೧೮ ॥

ತಿಷ್ಠ ತಿಷ್ಠ ಕ್ಷಣಂ ದೈತ್ಯ ಪಶ್ಯ ಮೇ ಲಾಘವಂ ಪುನಃ ।
ಇತ್ಯುಕ್ತ್ವಾ ಚರಣೇ ದೈತ್ಯಂ ಜಘಾನಾ ದಶಭಿಃ ಶರೈಃ ॥ ೧೯ ॥

ಮುಖೇ ಬಾಣೈರ್ಹತಸ್ತೇನ ಮೂರ್ಛಿತೋ ನಿಪಪಾತ ಹ ।
ಪಶ್ಯಮಾನೈಃ ಸುರೈಃ ಸರ್ವೈ ರಥೋಪರಿ ಮಹಾಬಲಃ ॥ ೨೦ ॥

ದೇವೈಶ್ಚ ಚಾರಣೈಃ ಸಿದ್ಧೈಃ ಕೃತಃ ಶಬ್ದಃ ಸುಹರ್ಷಜಃ ।
ಜಯ ಜಯೇತಿ ರಾಜೇಂದ್ರ ಶಂಖಾ ದಧ್ಮುಃ ಪುನಃ ಪುನಃ ॥ ೨೧ ॥

ಸ ಕೋಲಾಹಲಶಬ್ದಸ್ತು ತುಮುಲೋ ದೇವತೇರಿತಃ ।
ಕರ್ಣರಂಧ್ರಂ ಸಮಾವಿಷ್ಟೋ ಹುಂಡಸ್ಯ ಮೂರ್ಛಿತಸ್ಯ ಚ ॥ ೨೨ ॥

---

೧೮. ಹೀಗಿರುವ ರಾಜನು ಆಕಾಶದಲ್ಲಿರುವ ಸೂರ್ಯನಂತೆ ಪ್ರಕಾಶಿಸಿದನು. ಆ ಹುಂಡನ ಪರಾಕ್ರಮವನ್ನು ನೋಡಿ ಇಂತೆಂದನು.

೧೯. ಎಲೈ ದೈತ್ಯನೇ! ನಿಲ್ಲು, ನಿಲ್ಲು, ಕ್ಷಣಕಾಲ ನಿಲ್ಲು, ನನ್ನ ಕೈಚಳಕ ವನ್ನು ನೋಡುತ್ತೀಯಂತೆ; ಹೀಗೆಂದು ಹೇಳಿ ಹತ್ತು ಬಾಣಗಳಿಂದ ಆ ದೈತ್ಯನ ಕಾಲುಗಳನ್ನು ಹೊಡೆದನು.

೨೦. ಹಣೆಯ ಮೇಲೆ ಬಾಣಗಳನ್ನು ಬಿಡಲು, ಆ ದೈತ್ಯನು ಮೂರ್ಛಿತ ನಾದನು. ಇದನ್ನು ದೇವತೆಗಳೆಲ್ಲಾ ನೋಡುತ್ತಿದ್ದರು.

೨೧. ದೇವತೆಗಳೂ, ಚಾರಣರೂ, ಸಿದ್ಧರೂ, ಹರ್ಷಶಬ್ದವನ್ನು ಮಾಡುತ್ತಾ ಜಯ ಜಯ ಎಂದು ಕೂಗುತ್ತಾ ಶಂಖಧ್ವನಿಯನ್ನು ಮಾಡಿದರು.

೨೨. ದೇವತೆಗಳು ಮಾಡಿದ ಕೋಲಾಹಲಶಬ್ದವು ಮೂರ್ಛೆಹೊಂದಿದ್ದ ಆ ಹುಂಡನ ಕಿವಿಯನ್ನು ಮುಟ್ಟಿತು.

ಶ್ರುತ್ವಾ ಸ ಧನುರಾದಾಯ ಬಾಣಮಾಶೀವಿಷೋಪಮಂ ।
ಸ್ಥೀಯತಾಂ ಸ್ಥೀಯತಾಂ ಯುದ್ಧೇ ನ ಮೃತೋಽಸ್ಮಿ ತ್ವಯಾ ಹತಃ ॥೨೩॥

ಇತ್ಯುಕ್ತ್ವಾ ಪುನರುತ್ಥಾಯ ಲಾಘವೇನ ಸಮನ್ವಿತಃ ।
ಏಕವಿಂಶತಿಭಿರ್ಬಾಣೈರ್ನಹುಷಂ ಚಾಹನತ್ಪುನಃ ॥ ೨೪ ॥

ಏಕೇನ ಮುಷ್ಟಿಮಧ್ಯೇತು ಬಹುಭಿರ್ಜಾನುಮಧ್ಯತಃ ।
ಚತುರ್ಭಿಶ್ಚ ಮಹಾಶ್ವಾಂಶ್ಚ ಛತ್ರಮೇಕೇನ ಚೈವ ಚ ॥ ೨೫ ॥

ಪಂಚಭಿರ್ಮಾತಲಿಂ ವಿದ್ಧ್ವಾ ರಥನೀಡಂ ತು ಸಪ್ತಭಿಃ ।
ಧ್ವಜದಂಡಂ ತ್ರಿಭಿಸ್ತೀಕ್ಷ್ಣೈರ್ದಾನವಃ ಶಿಖಿಭಿಸ್ತ್ರಿಭಿಃ ॥ ೨೬ ॥

ಆದಾನಂ ದಾನವೇಂದ್ರಸ್ಯ ಶರಮೋಕ್ಷಂ ದುರಾತ್ಮನಃ ।
ಲಾಘವಂ ತಸ್ಯ ವೈ ದೃಷ್ಟ್ವಾ ದೇವಾಸ್ತೇ ವಿಸ್ಮಯಂ ಗತಾಃ ॥ ೨೭ ॥

ತಸ್ಯ ಪೌರುಷಮಾಪಶ್ಯ ಸ ರಾಜಾ ದಾನವೇಶ್ವರಂ ।
ಧೀರೋಽಸಿ ಕೃತವಿದ್ಯೋಽಸಿ ಶೂರೋಽಸಿ ರಣಪಂಡಿತಃ ॥ ೨೮ ॥

---

೨೩. ಇದನ್ನು ಕೇಳಿ ಆ ಹುಂಡನು ಕಾಲಸರ್ಪದಂತಿರುವ ಬಾಣಗಳನ್ನು ತೆಗೆದುಕೊಂಡು ನಿಲ್ಲು, ನಿಲ್ಲು, ಯುದ್ಧದಲ್ಲಿ ನಿಲ್ಲು, ನೀನು ಹೊಡೆದರೂ ನಾನು ಸತ್ತಿಲ್ಲ.

೨೪. ಹೀಗೆಂದು ಹೇಳಿ ಮೇಲಕ್ಕೆದ್ದು ಲಾಘವದಿಂದ ಇಪ್ಪತ್ತೊಂದು ಬಾಣಗಳಿಂದ ನಹುಷನನ್ನು ಹೊಡೆದನು.

೨೫-೨೬. ಒಂದು ಬಾಣವನ್ನು ಮುಷ್ಟಿಯ ಮಧ್ಯಕ್ಕೂ, ಮೊಣಕಾಲುಗಳ ಮಧ್ಯಕ್ಕೆ ಅನೇಕ ಬಾಣಗಳನ್ನೂ ಬಿಟ್ಟು, ನಾಲ್ಕು ಬಾಣಗಳನ್ನು ಕುದುರೆಗಳಿಗೂ, ಒಂದು ಬಾಣವನ್ನು ಛತ್ರಿಗೂ, ಐದು ಬಾಣಗಳನ್ನು ಮಾತಲಿಗೂ ರಥದ ಮಧ್ಯಕ್ಕೆ ಏಳು ಬಾಣಗಳನ್ನೂ, ಧ್ವಜದ ಕೋಲಿಗೆ ಮೂರು ಬಾಣಗಳನ್ನೂ, ಮತ್ತು ಮೂರು ಬಾಣಗಳನ್ನು ಧ್ವಜದಂಡಕ್ಕೂ ಬಿಟ್ಟು ಹೊಡೆದನು

೨೭. ಬಾಣ ತೆಗೆವುದು, ಅದನ್ನು ಬಿಡುವುದು ಈ ರೀತಿಯಲ್ಲಿರುವ ದಾನವೇಂದ್ರನ ಲಾಘವವನ್ನು ನೋಡಿ ದೇವತೆಗಳು ಆಶ್ಚರ್ಯಪಟ್ಟರು.

೨೮. ಆ ರಾಜನು ದಾನವನ ಪೌರುಷವನ್ನು ನೋಡಿ ಧೀರನಾಗಿದ್ದೀಯೆ. ವಿದ್ಯೆಯನ್ನು ಚೆನ್ನಾಗಿ ಬಲ್ಲವನಾಗಿದ್ದೀಯೆ. ರಣಪಂಡಿತನು ಆಗಿದ್ದೀಯೆ.

ಇತ್ಯುಕ್ತ್ವಾ ದಾನವಂ ತಂ ತು ಧನುರ್ವಿಸ್ಫಾರ್ಯ ಭೂಪತಿಃ ।
ನಾಗಣೈರ್ದಶಭಿಸ್ತಂ ತು ವಿವ್ಯಾಧ ಲಘುವಿಕ್ರಮಃ ॥ ೨೯ ॥

ತ್ರಿಭಿರ್ಧ್ವಜಂ ಪ್ರಚಿಚ್ಛೇದ ಸ ಪಪಾತ ಧರಾತಲೇ ।
ತುರಗಾನ್ಪಾತಯಾಮಾಸ ಚತುರ್ಭಿಸ್ತಸ್ಯ ಸಾಯಕೈಃ ॥ ೩೦ ॥

ಏಕೇನ ಛತ್ರಂ ತಸ್ಯಾಪಿ ಚಕರ್ತ ಲಘುವಿಕ್ರಮಃ ।
ದಶಭಿಃ ಸಾರಥಿಸ್ತಸ್ಯ ಪ್ರೇಷಿತೋ ಯಮಮಂದಿರಂ ॥ ೩೧ ॥

ದಂಶನಂ ದಶಭಿಶ್ಛಿತ್ವಾ ಶರೈಶ್ಚ ವಿದಲೀಕೃತಃ ।
ಸರ್ವಾಂಗೇಷು ಚ ತ್ರಿಂಶದ್ಭಿರ್ವಿವ್ಯಾಧ ದನುಜೇಶ್ವರಂ ॥ ೩೨ ॥

ಹತಾಶ್ವೋ ವಿರಥೋ ಜಾತೋ ಬಾಣಪಾಣಿರ್ಧನುರ್ಧರಃ ।
ಅಭ್ಯಧಾವತ್ಸ ವೇಗೇನ ವರ್ಷಯನ್ನಿಶಿತೈಃ ಶರೈಃ ॥ ೩೩ ॥

---

೨೯. ಈ ರೀತಿ ಆ ದಾನವನಿಗೆ ಹೇಳಿ ಧನುಸ್ಸನ್ನು ಹಿಡಿದು ಹತ್ತು ಬಾಣಗಳಿಂದ ಆ ದಾನವನನ್ನು ಹೊಡೆದನು.

೩೦. ಮೂರು ಬಾಣಗಳನ್ನು ಹೊಡೆದು ಧ್ವಜವನ್ನು ಕೆಳಗೆ ಕೆಡುಹಿದನು. ನಾಲ್ಕು ಬಾಣಗಳಿಂದ ಕುದುರೆಗಳನ್ನು ಕೆಳಗೆ ಕೆಡುಹಿದನು.

೩೧. ಅವನ ಛತ್ರಿಯನ್ನು ಒಂದು ಬಾಣದಿಂದ ಕೆಡವಿ, ಅವನ ಸಾರಥಿಗೆ ಹತ್ತು ಬಾಣಗಳನ್ನು ಬಿಟ್ಟು ಕೊಂದನು.

೩೨. ಅವನ ಅಂಗಿಯನ್ನು ಹತ್ತು ಬಾಣಗಳಿಂದ ಚೂರುಚೂರು ಮಾಡಿದನು. ಮೂವತ್ತು ಬಾಣಗಳನ್ನು ಅಂಗಗಳಿಗೆಲ್ಲಾ ಬಿಟ್ಟು ನೋಯಿಸಿದನು.

೩೩. ಕುದುರೆಗಳು ಸತ್ತು, ರಥಶೂನ್ಯನಾದ ಆ ದಾನವನು ಧನುಸ್ಸಿನಿಂದ ಉಗ್ರವಾದ ಬಾಣಗಳನ್ನು ಬಿಡುತ್ತಾ ನಹುಷನನ್ನು ಎದುರಿಸಿದನು.

ಖಡ್ಗಚರ್ಮಧರೋ ದೈತ್ಯೋ ರಾಜಾನಂ ತಮುಧಾವತ ।
ಧಾವಮಾನಸ್ಯ ಹುಂಡಸ್ಯ ಖಡ್ಗಂ ಚಿಚ್ಛೇದ ಭೂಪತಿಃ ॥ ೩೪ ॥

ಕ್ಷುರಪ್ರೈರ್ನಿಶಿತೈರ್ಬಾಣೈಶ್ಚರ್ಮ ಚಿಚ್ಛೇದ ಭೂಪತಿಃ ।
ಅಥ ಹುಂಡಃ ಸುದುಷ್ಟಾತ್ಮಾ ಸಮಾಲೋಕ್ಯ ಸಮಂತತಃ ॥ ೩೫ ॥

ಜಗ್ರಾಹ ಮುದ್ಗರಂ ತೂರ್ಣಂ ಮುಮೋಚ ಲಘುವಿಕ್ರಮಃ ।
ವಜ್ರವೇಗಂ ಸಮಾಯಾಂತಂ ದದೃಶೇ ನೃಪತಿಸ್ತದಾ ॥ ೩೬ ॥

ಮುದ್ಗರಂ ಸ್ವನವಂತಂ ಚಾಪಾತಯದಂಬತಾತ್ತತಃ ।
ದಶಭಿರ್ನಿಶಿತೈರ್ಬಾಣೈಃ ಕ್ಷುರಪ್ರೈಶ್ಚ ಸ್ವವಿಕ್ರಮಾತ್ ॥ ೩೭ ॥

ಮುದ್ಗರಂ ಪತಿತಂ ದೃಷ್ಟ್ವಾ ದಶಖಂಡಮಯಂ ಭುವಿ ।
ಗದಾಮುದ್ಯಮ್ಯ ವೇಗೇನ ರಾಜಾನಂ ಸಮುಧಾವತ ॥ ೩೮ ॥

---

೩೪. ಖಡ್ಗವನ್ನೂ ಚರ್ಮವನ್ನೂ ತೆಗೆದುಕೊಂಡು ಆ ದೈತ್ಯನು ಮೇಲೆ ಬೀಳಲು ಬರುತ್ತಿರಲು, ನಹುಷನು ಆ ಖಡ್ಗವನ್ನು ಕತ್ತರಿಸಿದನು.

೩೫. ಹರಿತವಾದ ಬಾಣಗಳಿಂದ ಆ ಚರ್ಮವನ್ನು ನಹುಷನು ಕತ್ತರಿಸಿದನು.

೩೬. ಆಗ ಹುಂಡನು ಸುತ್ತಲೂ ನೋಡಿ ಅಲ್ಲಿದ್ದ ಮುದ್ಗರವನ್ನು ತೆಗೆದುಕೊಂಡು ವೇಗದಿಂದ ನಹುಷನ ಮೇಲೆ ಬಿಟ್ಟನು.

೩೭. ವಜ್ರಾಯುಧದಂತೆ ವೇಗವಾಗಿ ಬರುತ್ತಿರುವ ಆ ಮುದ್ಗರವನ್ನು ರಾಜನು ನೋಡಿದನು. ಶಬ್ದಮಾಡುತ್ತಾ ಬರುತ್ತಿದ್ದ ಆ ಮುದ್ಗರವನ್ನು ಆಕಾಶದಿಂದ ಮಧ್ಯದಲ್ಲಿಯೇ ಹತ್ತು ಬಾಣಗಳನ್ನು ಬಿಟ್ಟು ಕೆಡವಿದನು.

೩೮. ದಾನವನು, ಮುದ್ಗರವು ಹತ್ತು ಚೂರಾಗಿ ಬಿದ್ದುದನ್ನು ನೋಡಿ ಗದೆಯನ್ನು ತೆಗೆದುಕೊಂಡು ರಾಜನನ್ನು ಎದುರಿಸಿದನು.

ಖಡ್ಗೇನ ತೀಕ್ಷ್ಣಧಾರೇಣ ತಸ್ಯ ಬಾಹುಂ ಪ್ರಚಿಚ್ಛದೇ ।
ಸಗದಂ ಪತಿತಂ ಭೂಮೌ ಸಾಂಗದಂ ಕಟಕಾನ್ವಿತಂ ॥ ೩೯ ॥

ಮಹಾಶಬ್ಧಂ ತತಃ ಕೃತ್ವಾ ವಜ್ರಸ್ಫೋಟಿಮಯಂ ಸ ತು ।
ರುಧಿರೇಣ ವಿಧಿಗ್ಧಾಂಗೋ ಧಾವಮಾನೋ ಮಹಾಹವೇ ॥ ೪೦ ॥

ಕ್ರೋಧೇನ ಮಹತಾವಿಷ್ಟೋ ಗ್ರಸ್ತುಮಿಚ್ಛತಿ ಭೂಪತಿಂ ।
ದುರ್ನಿವಾರ್ಯಃ ಸಮಾಯಾತಃ ಪಾರ್ಶ್ವೆ ತಸ್ಯ ಚ ಭೂಪತೇಃ ॥ ೪೧ ॥

ನಹುಷೇಣ ಮಹಾಶಕ್ತ್ಯಾ ತಾಡಿತೋ ಹೃದಿ ದಾನವಃ ।
ಪತಿತಃ ಸಹಸಾ ಭೂಮೌ ವಜ್ರಾಹತ ಇವಾಚಲಃ ॥ ೪೨ ॥

ತಸ್ಮಿನ್ದೈತ್ಯೇ ಗತೇ ಭೂಮಾವಿತರೆ ದಾನವಾ ಗತಾಃ ।
ವಿವಿಶುರ್ಗಿರಿದುರ್ಗೇಷು ಕತಿ ಪಾತಾಲಮಾಸ್ಥಿತಾಃ ॥ ೪೩ ॥

ದೇವಾಃ ಪ್ರಹರ್ಷಂ ಜಗ್ಮುಸ್ತೇ ಗಂಧರ್ವಾಃ ಸಿದ್ಧಚಾರಣಾಃ ।
ಹತೇ ತಸ್ಮಿನ್ ಮಹಾಪಾಪೇ ನಹುಷೇಣ ಮಹಾತ್ಮನಾ ॥ ೪೪ ॥

---

೩೯. ಹರಿತವಾದ ಕತ್ತಿಯಿಂದ ಅವನ ತೋಳನ್ನು ಕತ್ತರಿಸಲು ಗದೆಯೊಡನೆಯೂ, ಭುಜಕೀರ್ತಿ ಕೈಬಳೆಗಳೊಡನೆಯೂ ಆ ತೋಳು ಬಿದ್ದಿತು.

೪೦. ಸಿಡಿಲಿನಂತೆ ಶಬ್ದಮಾಡುತ್ತಾ, ರಕ್ತದಿಂದ ಲಿಪ್ತನಾಗಿ ಯುದ್ಧದಲ್ಲಿ ಕೋಪದಿಂದ ಓಡಿಬಂದು ರಾಜನನ್ನು ತಿನ್ನಲು ಯತ್ನಿಸಿದನು.

೪೧-೪೨. ಆಗ ಆ ದಾನವನು ತಡೆಯಲು ಅಸಾಧ್ಯನಾಗಿ, ಪಕ್ಕದಲ್ಲೇ ಬಂದು ನಿಂತನು. ಆಗ ನಹುಷನು ದೊಡ್ಡ ಶಕ್ತ್ಯಾಯುಧದಿಂದ ಎದೆಗೆ ಹೊಡೆಯಲು ವಜ್ರಾಯುಧದಿಂದ ಕತ್ತರಿಸಿ ಬಿದ್ದ ಬೆಟ್ಟದಂತೆ ಕೆಳಗೆ ಬಿದ್ದನು.

೪೩. ಆ ದಾನವನು ಕೆಳಗೆ ಬೀಳಲು, ಮಿಕ್ಕ ದಾನವರು ಕೆಲವರು ಓಡಿದರು. ಕೆಲವರು ಗಿರಿಯ ದುರ್ಗದಲ್ಲಿ ಅಡಗಿದರು. ಕೆಲವರು ಪಾತಾಳವನ್ನು ಹೊಕ್ಕರು.

೪೪. ನಹುಷನು ಅವನನ್ನು ಕೊಲ್ಲಲು ದೇವತೆಗಳೂ, ಸಿದ್ಧರೂ, ಚಾರಣರೂ ಸಂತೋಷಗೊಂಡರು.

ತಸ್ಮಿನ್ ಹತೇ ದೈತ್ಯವರೇ ಮಹಾಹವೇ
ದೇವಾಶ್ಚ ಸರ್ವೇ ಪ್ರಮುದಂ ಚ ಲೇಭಿರೇ ।
ತಾಂ ದೇವರೂಪಾಂ ತಪಸಾ ವಿವರ್ಧಿತಾಂ
ಸ ಆಯುಪುತ್ರಃ ಪ್ರತಿಲಭ್ಯ ಹರ್ಷಿತಃ ॥ ೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ಪಂಚದಶಾಧಿಕಶತತಮೋऽಧ್ಯಾಯಃ



---

೪೫. ಆ ದೈತ್ಯನು ಸಾಯಲು ದೇವತೆಗಳು ಸಂತೋಷಪಟ್ಟರು. ತಪೋನಿಷ್ಠಳಾದ, ದೇವರೂಪಿಣಿಯಾದ ಆ ಅಶೋಕಸುಂದರಿಯನ್ನು ಹೊಂದಿ ಆ ನಹುಷನು ಸಂತುಷ್ಟನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷೋಡಶಾಧಿಕಶತತಮೋಽಧ್ಯಾಯಃ

---

॥ ಕುಂಜಲ ಉವಾಚ ॥

**ಅಶೋಕಸುಂದರೀ ಪುಣ್ಯಾ ರಂಭಯಾ ಸಹ ಹರ್ಷಿತಾ ।**
**ನಹುಷಂ ಪ್ರಾಪ್ಯ ವಿಕ್ರಾಂತಂ ತಮುವಾಚ ತಪಸ್ವಿನೀ ॥ ೧ ॥**

**ಅಹಂ ತೇ ಧರ್ಮತಃ ಪತ್ನೀ ದೇವೈರ್ದಿಷ್ಟಾ ತಪಸ್ವಿನೀ ।**
**ಉದ್ವಾಹಯಸ್ವ ಮಾಂ ವೀರ ಪತಿಧರ್ಮಮಿಹೇಚ್ಛತೀಂ ॥ ೨ ॥**

**ಸದೈವ ಚಿಂತಮಾನಾ ಚ ತ್ವಾಮಹಂ ತಪ ಆಸ್ಥಿತಾ ।**
**ಭವಾನ್ ಧರ್ಮಪ್ರಸಾದೇನ ಮಯಾ ಪ್ರಾಪ್ತೋ ನೃಪೋತ್ತಮ ॥ ೩ ॥**

---

## ನೂರ ಹದಿನಾರನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಅಶೋಕಸುಂದರಿಯು ರಂಭೆಯೊಡನೆ ಕೂಡಿ ಸಂತೋಷಗೊಂಡಳು. ನಹುಷನನ್ನು ಅವರು ಹೊಂದಿ ಪರಾಕ್ರಮಿಯಾದ ಅವನನ್ನು ಕುರಿತು ಇಂತೆಂದರು.

೨. ನಾನು ನಿನಗೆ ಧರ್ಮಪತ್ನಿಯು. ದೇವನೇ ಹಾಗೆ ತೋರಿಸಿದ್ದಾನೆ. ನಾನು ತಪಸ್ವಿನಿಯು. ನನಗೆ ಪತಿಧರ್ಮಬೇಕಾಗಿರುವುದರಿಂದ ನನ್ನನ್ನು ಮದುವೆಯಾಗು.

೩. ನಿನ್ನನ್ನೇ ಚಿಂತಿಸುತ್ತ ನಾನು ತಪಸ್ಸು ಮಾಡುತ್ತಿದ್ದೆನು. ಆ ಧರ್ಮದ ಅನುಗ್ರಹದಿಂದ ನೀನು ನನಗೆ ಲಭ್ಯನಾದೆ.

॥ ನಹುಷ ಉವಾಚ ॥

ಮದರ್ಥೇ ನಿಯತಾ ಭದ್ರೇ ಯದಿ ತ್ವಂ ತಪ ಆಸ್ಥಿತಾ ।
ಗುರೋರ್ವಾಕ್ಯಾನ್ಮುಹೂರ್ತೇನ ತವ ಭರ್ತಾ ಭವಾಮ್ಯಹಂ ॥ ೪ ॥

ಅನಯಾ ರಂಭಯಾ ಸಾರ್ಧಮಾವಾಂ ಗಚ್ಛಾವ ಭಾಮಿನಿ ।
ಸಮಾರೋಪ್ಯ ರಥೇ ತಾಂ ತು ರಂಭಾಂ ಚ ಸುಮನೋಹರಾಂ ॥ ೫ ॥

ತೇನೈವ ರಥಮುಖ್ಯೇನ ವಸಿಷ್ಠಾಸ್ಯಾಶ್ರಮಂ ಪ್ರತಿ ।
ಜಗಾಮ ಲಘುವೇಗೇನ ತಾಭ್ಯಾಂ ಸಹ ಮಹಾಶಯಾಃ ॥ ೬ ॥

ತಮಾಶ್ರಮಗತಂ ವಿಪ್ರಂ ಸಮಾಲೋಕ್ಯ ಪ್ರಣಮ್ಯ ಚ ।
ತಯಾ ಸಾರ್ಧಂ ಮಹಾತೇಜಾ ಹರ್ಷೇಣ ಮಹತಾನ್ವಿತಃ ॥ ೭ ॥

ಯಥಾ ಚ ಯುದ್ಧಂ ಸಂಜಾತಂ ನಿಹತೋ ದಾನವೋ ಯಥಾ ।
ನಿವೇದಯಾಮಾಸ ಸರ್ವಂ ವಸಿಷ್ಠಾಯ ಮಹಾತ್ಮನೇ ॥ ೮ ॥

---

೪. ನಹುಷನು ಹೇಳಿದನು:—ನನಗೋಸ್ಕರ ನೀನು ನಿಶ್ಚಯವಾಗಿಯೂ ತಪಸ್ಸುಮಾಡಿದ್ದರೆ, ಗುರುವಿನ ಮಾತನ್ನು ಪಡೆದು ಒಂದು ಕ್ಷಣದಲ್ಲೇ ಮದುವೆಯಾಗುತ್ತೇನೆ.

೫. ಈ ರಂಭೆಯೊಡನೆಯೇ ನಾವಿಬ್ಬರೂ ಹೋಗೋಣ ಎಂದು ಹೇಳಿ ತನ್ನ ರಥದಲ್ಲಿ ಆ ಅಶೋಕಸುಂದರಿಯನ್ನೂ, ರಂಭೆಯನ್ನೂ ಕೂರಿಸಿಕೊಂಡನು.

೬. ಆ ರಥದಲ್ಲಿ ಕುಳಿತು ಇವರು ವೇಗವಾಗಿ ವಸಿಷ್ಠಾಶ್ರಮಕ್ಕೆ ಹೋದರು.

೭. ಆಶ್ರಮದಲ್ಲಿ ಇದ್ದ ಆ ವಸಿಷ್ಠನನ್ನು ನೋಡಿ ಸಂತೋಷದಿಂದ ಆಕೆಯೊಡನೆ ಆ ವಸಿಷ್ಠನನ್ನು ನಮಸ್ಕರಿಸಿದನು.

೮. ಯುದ್ಧವು ನಡೆದ ಬಗೆಯನ್ನೂ ರಾಕ್ಷಸನನ್ನು ಕೊಂದ ರೀತಿಯನ್ನೂ ಎಲ್ಲವನ್ನೂ ಆ ಋಷಿಗೆ ಹೇಳಿದನು.

ವಸಿಷ್ಠೋಽಪಿ ಸಮಾಕರ್ಣ್ಯ ನಹುಷಸ್ಯ ವಿಚೇಷ್ಟಿತಂ ।
ಹರ್ಷೇಣ ಮಹತಾವಿಷ್ಟ ಆಶೀರ್ಭಿರಂಭಿನಂದ್ಯ ತಂ ॥ ೯ ॥

ತಿಥೌ ಲಗ್ನೇ ಶುಭೇ ಪ್ರಾಪ್ತೇ ತಯೋಸ್ತು ಮುನಿಪುಂಗವಃ ।
ವಿವಾಹಂ ಕಾರಯಾಮಾಸ ಅಗ್ನಿಬ್ರಾಹ್ಮಣಸಂನಿಧೌ ॥ ೧೦ ॥

ಆಶೀರ್ಭಿರಭಿನಂದ್ಯೈವಂ ಮಿಥುನಂ ಪ್ರೇಷಿತಂ ಪುನಃ ।
ಮಾತರಂ ಪಿತರಂ ಪಶ್ಯ ದ್ರುತಂ ಗತ್ವಾ ಮಹಾಮತೇ ॥ ೧೧ ॥

ತ್ವಾಂ ಚ ದೃಷ್ಟ್ವಾ ಹಿ ತೇ ಮಾತಾ ಪಿತಾಸೌ ಚಾಪಿ ಸುವ್ರತಃ ।
ಹರ್ಷೇಣ ವೃದ್ಧಿಮಾಪ್ನೋತು ಪರ್ವಣೀವ ತು ಸಾಗರಃ ॥ ೧೨ ॥

ಏವಂ ಸಂಪ್ರೇಷಿತೋ ವೀರೋ ಮುನಿನಾ ಬ್ರಹ್ಮಸೂನುನಾ ।
ತೇನೈವ ರಥವರ್ಯೇಣ ಜಗಾಮ ಲಘುವಿಕ್ರಮಃ ॥ ೧೩ ॥

---

೯. ನಹುಷನ ಕರ್ತವ್ಯವನ್ನು ವಸಿಷ್ಠನು ಕೇಳಿ ಸಂತೋಷಗೊಂಡು, ಆಶೀರ್ವಾದಗಳಿಂದ ವೃದ್ಧಿಪಡಿಸಿದನು.

೧೦. ಆ ಋಷಿಯು ಒಳ್ಳೆಯ ಶುಭಲಗ್ನದಲ್ಲಿ ಅಗ್ನಿಬ್ರಾಹ್ಮಣರ ಸನ್ನಿಧಿಯಲ್ಲಿ ಅವರಿಬ್ಬರಿಗೂ ಮದುವೆ ಮಾಡಿಸಿದನು.

೧೧. ತಾಯಿತಂದೆಗಳನ್ನು ಜಾಗ್ರತೆಯಾಗಿ ಹೋಗಿ ನೋಡೆಂದು ಹೇಳಿ, ಆಶೀರ್ವಾದಗಳನ್ನು ಮಾಡಿ ಕಳುಹಿಸಿದನು.

೧೨. ನಿನ್ನ ತಾಯಿತಂದೆಗಳು ನಿನ್ನನ್ನು ನೋಡಿ ಪರ್ವಕಾಲದಲ್ಲಿ ಸಾಗರವು ವೃದ್ಧಿಹೊಂದುವಂತೆ ಹರ್ಷದಿಂದ ವೃದ್ಧಿಹೊಂದಲಿ.

೧೩. ಹೀಗೆ ವಸಿಷ್ಠನಿಂದ ಕಳುಹಿಸಲ್ಪಟ್ಟ ದಂಪತಿಗಳು ಅದೇ ರಥದಲ್ಲಿ ವೇಗದಿಂದ ಹೊರಟರು.

ನಮುಸ್ಕೃತ್ಯ ದ್ವಿಜೇಂದ್ರಂ ತಂ ಗತೋ ಮಾತಲಿನಾ ತದಾ ।
ಸ್ವಪುರಂ ಪಿತರಂ ದ್ರಷ್ಟುಂ ತಾಂ ಚ ಮಾತಾಂ ಯಶಸ್ವಿನೀಂ ॥ ೧೪ ॥

॥ ಸೂತ ಉವಾಚ ॥

ಅಪ್ಸರಾ ಮೇನಕಾ ನಾಮ ಪ್ರೇಷಿತಾ ದೇವತೈಸ್ತತಃ ।
ಆಯೋರ್ಭಾರ್ಯಾ ಸುದುಃಖೇನ ಪತಿತಾ ಶೋಕಸಾಗರೇ ॥ ೧೫ ॥

ತಾಮುವಾಚ ಮಹಾಭಾಗಾಂ ದೇವೀಮಿಂದುಮತೀಂ ಪ್ರತಿ ।
ಮುಂಚ ಶೋಕಂ ಮಹಾಭಾಗೇ ತನಯಂ ಪಶ್ಯ ಸಂಮುಖಂ ॥ ೧೬ ॥

ನಿಹತ್ಯ ದಾನವಂ ಪಾಪಂ ತವ ಪುತ್ರಾಪಹಾರಕಂ ।
ಸಮಾಯಾಂತಂ ಸಭಾಯಾಂ ಚ ವೀರಶ್ರಿಯಾ ಸಮನ್ವಿತಂ ॥ ೧೭ ॥

ಸುವೃತ್ತಂ ಸಂಗರೇ ತತ್ರ ನಹುಷೇಣ ಯಥಾ ಕೃತಂ ।
ತಸ್ಯೈ ನಿವೇದಯಾಮಾಸ ಇಂದುಮತ್ಯೈ ಚ ಮೇನಕಾ ॥ ೧೮ ॥

---

೧೪. ತಾಯಿತಂದೆಗಳನ್ನು ನೋಡಲು ಆ ವಸಿಷ್ಠದಂಪತಿಗಳಿಗೆ ನಮಸ್ಕರಿಸಿ ತನ್ನ ಊರಿಗೆ ಹೊರಟನು.

೧೫. ಸೂತನು ಹೇಳಿದನು :—ಆಯುವಿನ ಹೆಂಡತಿಯಾದ ಇಂದುಮತಿಯು ದುಃಖಗೊಂಡಿರಲು, ದೇವತೆಗಳು ಅವಳ ಬಳಿಗೆ ಮೇನಕೆಯೆಂಬ ಅಪ್ಸರಸ್ತ್ರೀಯನ್ನು ಕಳುಹಿಸಿದರು.

೧೬. ಆಕೆ ಇಂದುಮತಿಯನ್ನು ಕುರಿತು, ಶೋಕಮಾಡಬೇಡ; ನಿನ್ನ ಮಗನು ಇದುರಿಗೆ ಬರುತ್ತಿದ್ದಾನೆ, ನೋಡು ಎಂದು ಹೇಳಿದಳು.

೧೭. ನಿನ್ನ ಮಗನನ್ನು ಕದ್ದ ಆ ಪಾಪಿ ದಾನವನನ್ನು ಕೊಂದು ವೀರಲಕ್ಷ್ಮಿಯಿಂದ ಕೂಡಿದ ಮಗನನ್ನು ಸಭೆಯಲ್ಲಿ ನೋಡು.

೧೮. ಯುದ್ಧದಲ್ಲಿ ನಡೆದುದೆಲ್ಲವನ್ನೂ ಅಲ್ಲಿ ನಹುಷನ ಪೌರುಷವನ್ನು ಇಂದುಮತಿಗೆ ಮೇನಕೆಯು ತಿಳಿಸಿದಳು.

**ಮೇನಕಾಯಾ ವಚಶ್ಶ್ರುತ್ವಾ ಹರ್ಷೇಣಾಕುಲಿತೇಕ್ಷಣಾ ।**
**ಸಖಿ ಸತ್ಯಂ ಬ್ರವೀಷಿ ತ್ವಮಿತ್ಯುವಾಚ ಸಗದ್ಗದಂ ॥ ೧೯ ॥**

**ಸಾಮೃತಂ ಸುಪ್ರಿಯಂ ವಾಕ್ಯಂ ಮನಃಪ್ರೋತ್ಸಾಹಕಾರಕಂ ।**
**ಜೀವಾದಿಕಂ ಮಯಾ ದೇಯಂ ತ್ವಯಿ ಸರ್ವಸ್ವಮೇವ ಚ ॥ ೨೦ ॥**

**ಏವಮಾಭಾಷ್ಯ ತಾಂ ದೇವೀ ರಾಜಾನಮಿದಮಬ್ರವೀತ್ ।**
**ತವ ಪುತ್ರೋ ಮಹಾಬಾಹುಃ ಸಮಾಯಾತೋ ಹಿ ಸಾಂಪ್ರತಂ ॥ ೨೧ ॥**

**ಆಖ್ಯಾತಿ ಚ ಮಹಾಭಾಗ ಏಷಾ ಚೈವ ವರಾಪ್ಸರಾ ।**
**ಭರ್ತಾರಮೇವಮಾಭಾಷ್ಯ ವಿರರಾಮ ಪ್ರಹರ್ಷಿತಾ ॥ ೨೧ ॥**

**ಸಮಾಕರ್ಣ್ಯ ನೃಪೇಂದ್ರಸ್ತು ತಾಮುವಾಚ ಪ್ರಿಯಾಂ ಸತೀಂ ।**
**ಪುರಾ ಪ್ರೋಕ್ತಂ ಮಹಾಭಾಗೇ ಮುನಿನಾ ನಾರದೇನ ಹಿ ॥ ೨೩ ॥**

**ಪುತ್ರಂ ಪ್ರತಿ ನ ಕರ್ತವ್ಯಂ ದುಃಖಂ ರಾಜನ್ಕದಾಚನ ।**
**ತಂ ನಿಹತ್ಯ ಸ್ವವೀರ್ಯೇಣ ದಾನವಂ ಚೇಷ್ಯತೇ ಪುನಃ ॥ ೨೪ ॥**

---

೧೯. ಇಂದುಮತಿಯು ಮೇನಕೆಯ ಮಾತನ್ನು ಕೇಳಿ ಹರ್ಷದಿಂದ ಕಣ್ಣೀರು ಸುರಿಸುತ್ತಾ, ಸಖಿಯೇ! ನೀನು ಹೇಳುವುದೆಲ್ಲವೂ ನಿಜವೇ? ಎಂದು ಗದ್ಗದ ಧ್ವನಿಯಿಂದ ಕೇಳಿದಳು.

೨೦. ಈ ಮಾತನ್ನು ಕೇಳಿ ಇಂದುಮತಿಯು, ಎಲೈ ಮೇನಕೆಯೇ, ನಿನ್ನ ಮಾತು ಅಮೃತದಂತಿದೆ. ಪ್ರಿಯವಾದುದು. ಮನಸ್ಸಿಗೆ ಪ್ರೋತ್ಸಾಹವನ್ನು ಮಾಡುತ್ತಿದೆ. ಇಂತಹ ಮಾತನ್ನು ಹೇಳಿದವಳಿಗೆ ಸರ್ವಸ್ವವನ್ನೂ ಕೊಡುವುದು ಹಾಗಿರಲಿ. ಪ್ರಾಣವನ್ನೇ ಕೊಟ್ಟರೂ ಸಾಲದು.

೨೧-೨೨. ಹೀಗೆಂದು ಆ ಮೇನಕೆಗೆ ಹೇಳಿ, ರಾಜನನ್ನು ಕುರಿತು ಎಲೈ! ಮಹಾನುಭಾವನೇ, ನಿನ್ನ ಮಗನು ಬಂದನಂತೆ. ಹೀಗೆಂದು ಈ ಅಪ್ಸರಸ್ತ್ರೀಯು ಹೇಳುತ್ತಾಳೆ ಎಂದು ಗಂಡನಿಗೆ ಹೇಳಿ ಸಂತೋಷದಿಂದ ಸುಮ್ಮನಾದಳು.

೨೩-೨೪. ರಾಜನು ಈ ಮಾತನ್ನು ಕೇಳಿ ಪೂರ್ವದಲ್ಲೇ ನಾರದನು " ರಾಜನೇ, ಮಗನನ್ನು ಕುರಿತು ಯೋಚಿಸಬೇಡ. ಆ ರಾಕ್ಷಸನನ್ನು ಕೊಂದು ಬರುತ್ತಾನೆ" ಎಂದು ಹೇಳಿದ್ದನು. ಎಂದು ಹೆಂಡತಿಗೆ ಹೇಳಿದನು.

ಸಂಜಾತಂ ಸತ್ಯಮೇವಂ ಹಿ ಮುನಿನಾ ಭಾಷಿತಂ ಪುರಾ ।
ಅನ್ಯಥಾ ವಚನಂ ತಸ್ಯ ಕಥಂ ದೇವಿ ಭವಿಷ್ಯತಿ ॥ ೨೫ ॥

ದತ್ತಾತ್ರೇಯೋ ಮುನಿಶ್ರೇಷ್ಠಃ ಸಾಕ್ಷಾದ್ದೇವೋ ಜನಾರ್ದನಃ ।
ಶುಶ್ರೂಷಿತೋ ಮಯಾ ದೇವಿ ತ್ವಯಾ ಚ ತಪಸಾ ಪುರಾ ॥ ೨೬ ॥

ಪುತ್ರರತ್ನಂ ತೇನ ದತ್ತಂ ವಿಷ್ಣುತೇಜಸ್ಸಮನ್ವಿತಂ ।
ಸದಾ ಹನಿಷ್ಯತಿ ಪರಂ ದಾನವಂ ಪಾಪಚೇತನಂ ॥ ೨೭ ॥

ಸರ್ವದೈತ್ಯಪ್ರಹರ್ತಾ ಚ ಪ್ರಜಾಪಾಲೋ ಮಹಾಬಲಃ ।
ದತ್ತಾತ್ರೇಯೇಣ ಮೇ ದತ್ತೋ ವೈಷ್ಣವಾಂಶಸ್ಸುತೋತ್ತಮಃ ॥ ೨೮ ॥

ಏವಂ ಸಂಭಾಷ್ಯ ತಾಂ ದೇವೀಂ ರಾಜಾ ಚೇಂದುಮತೀಂ ತದಾ ।
ಮಹೋತ್ಸವಂ ತತಶ್ಚಕ್ರೇ ಪುತ್ರಸ್ಯಾಗಮನಂ ಪ್ರತಿ ॥ ೨೯ ॥

ಹರ್ಷೇಣ ಮಹತಾವಿಷ್ಟೋ ವಿಷ್ಣುಂ ಸಂಸ್ಮಾರ ವೈ ಪುನಃ ॥ ೩೦ ॥

---

೨೫. ಎಲೈ! ದೇವಿಯೇ, ಪೂರ್ವದಲ್ಲಿ ಆ ನಾರದನು ಹೇಳಿದುದು ಸತ್ಯವಾಯಿತು. ಅವನ ಮಾತು ಹೇಗೆತಾನೇ ಸುಳ್ಳಾದೀತು?

೨೬-೨೮. ಮುನಿಶ್ರೇಷ್ಠನೂ, ಪ್ರತ್ಯಕ್ಷನಾದ ವಿಷ್ಣುವೂ ಆದ ದತ್ತಾತ್ರೇಯನನ್ನು ನಾನೂ ನೀನೂ ತಪಸ್ಸಿನಿಂದ ಸೇವಿಸಿದೆವು. ಆತನು ವಿಷ್ಣುತೇಜಸ್ಸಿನಿಂದ ಕೂಡಿದ ಪುತ್ರರತ್ನವನ್ನು ಕೊಟ್ಟನು. ಅವನು ಶತ್ರುಗಳನ್ನು ಯಾವಾಗಲೂ ಸದೆಬಡಿಯುತ್ತಾನೆ ಈ ಪಾಪಿಯಾದ ಹುಂಡನನ್ನೂ ಕೊಲ್ಲುತ್ತಾನೆ. ಎಲ್ಲಾ ರಾಕ್ಷಸರನ್ನೂ ನಾಶಮಾಡುತ್ತಾನೆ. ಮಹಾಬಲಿಷ್ಠನಾಗಿ ಪ್ರಜಾರಕ್ಷಕನಾಗುತ್ತಾನೆ. ಅಂತಹ ವೈಷ್ಣವಾಂಶದಿಂದ ಕೂಡಿದ ಮಗನನ್ನೇ ದತ್ತಾತ್ರೇಯನು ಕೊಟ್ಟಿದ್ದಾನೆ.

೨೯-೩೦. ರಾಜನು ಇಂದುಮತಿಗೆ ಹೀಗೆಂದು ಹೇಳಿ ಸಂತೋಷದಿಂದ ವಿಷ್ಣುವನ್ನು ಸ್ಮರಿಸುತ್ತ ಮಗನು ಬರುವನೆಂದು ತಿಳಿದು ಅದಕ್ಕೆ ಬೇಕಾದ ಸಂತೋಷದ ಕೆಲಸಗಳನ್ನೆಲ್ಲಾ ಮಾಡಿಸಿದನು.

**ಅರ್ಚೋಪಪನ್ನಂ ಸುರಸಂಘಯುಕ್ತ**
**ಮಾನಂದರೂಪಂ ಪರಮಾರ್ಥಮೇಕಂ ।**
**ಕ್ಲೇಶಾಪಹಂ ಸೌಖ್ಯಪ್ರದಂ ನರಾಣಾಂ**
**ಸದ್ವೈಷ್ಣವಾನಾಮಿಹ ಮೋಕ್ಷದಂ ಪರಂ　　॥ ೩೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಷೋಡಶಾಧಿಕಶತತಮೋಧ್ಯಾಯಃ**



---

೩೧. ಪೂಜೆಗೆ ಯೋಗ್ಯನಾದ, ಸುರರ ಗುಂಪಿನಿಂದ ಕೂಡಿದ, ಆನಂದರೂಪನಾದ, ಪರಮಾರ್ಥನೂ, ಅದ್ವಿತೀಯನೂ, ಆಗಿರುವ, ಕ್ಲೇಶಗಳನ್ನು ನಿವಾರಿಸುವ, ಸುಖವನ್ನು ಈಯುವ, ವಿಷ್ಣುಭಕ್ತರಿಗೆ ಮೋಕ್ಷವನ್ನು ಕೊಡುವ ಆ ವಿಷ್ಣುವನ್ನು ಸ್ಮರಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತದಶಾಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ನಹುಷಃ ಪ್ರಿಯಯಾ ಸಾರ್ಧಂ ತಯಾ ಚೈವಾಪಿ ರಂಭಯಾ ।
ಐಂದ್ರೇಣಾಪಿ ಸುದಿವ್ಯೇನ ಸ್ಯಂದನೇನ ವರೇಣ ಚ ॥ ೧ ॥

ನಾಗಾಹ್ವಯಂ ಪುರಂ ಪ್ರಾಪ್ತಃ ಸರ್ವಶೋಭಾಸಮನ್ವಿತಂ ।
ದಿವ್ಯಮಂಡಪಯುಕ್ತಂ ಚ ಭವನೈರುಪಶೋಭಿತಂ ॥ ೨ ॥

ಹೇಮತೋರಣಗೇಹೈಶ್ಚ ಪತಾಕಾಭಿರಲಂಕೃತಂ ।
ನಾನಾವಾದಿತ್ರಸಂಘೋಷೈರ್ವಂದಿಚಾರಣಶೋಭಿತಂ ॥ ೩ ॥

ದೇವರೂಪೋಪಮೈಃ ಪುಣ್ಯೈಃ ಪುರುಷೈಸ್ಸಮಲಂಕೃತಂ ।
ನಾರೀಭಿರ್ದಿವ್ಯರೂಪಾಭಿರ್ಗಜಾಶ್ವೈಃ ಸ್ಯಂದನೈಸ್ತಥಾ ॥ ೪ ॥

---

## ನೂರ ಹದಿನೇಳನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ನಹುಷನು ಹೆಂಡತಿಯೊಡನೆ ಆ ರಂಭೆಯನ್ನೂ ಕರೆದುಕೊಂಡು ಮಾತಲಿಯೊಡನೆ ಇಂದ್ರನ ರಥದಲ್ಲಿ ಸಮಸ್ತ ಕಲ್ಯಾಣಗಳಿಂದ ಕೂಡಿದ ಹಸ್ತಿನಾವತಿಯನ್ನು ಹೊಕ್ಕನು.

೨-೫. ಉತ್ತಮವಾದ ಚಪ್ಪರಗಳಿಂದಲೂ, ಒಳ್ಳೆಯ ಮನೆಗಳಿಂದ ಕೂಡಿರುವ ಚಿನ್ನದ ತೋರಣಗಳಿಂದಲೂ, ಪತಾಕೆಗಳಿಂದಲೂ ಅಲಂಕರಿಸಲ್ಪಟ್ಟ, ಬಗೆಬಗೆಯ ವಾದ್ಯಧ್ವನಿಗಳುಳ್ಳ, ಹೊಗಳಭಟರಿಂದ ಶೋಭಿತವಾದ, ದೇವತೆಗಳಂತಿರುವ ಪುರುಷರಿಂದ ಕೂಡಿರುವ, ಉತ್ತಮವಾದ ಸ್ತ್ರೀಯರುಳ್ಳ, ಆನೆಕುದುರೆಗಳಿಂದ ಶೋಭಾಯ

**ನಾನಾಮಂಗಳಶಬ್ದೈಶ್ಚ ವೇದಧ್ವನಿಸಮಾಕುಲಂ ।**
**ಗೀತವಾದಿತ್ರಶಬ್ದೈಶ್ಚ ವೀಣಾವೇಣುಸ್ವನೈಸ್ತಥಾ ॥ ೫ ॥**

**ಸರ್ವಶೋಭಾಸಮಾಕೀರ್ಣಂ ವಿವೇಶ ಸ ಪುರೋತ್ತಮಂ ।**
**ವೇದಮಂಗಳಘೋಷೈಶ್ಚ ಬ್ರಾಹ್ಮಣೈರಭಿಪೂಜಿತಃ ॥ ೬ ॥**

**ದದರ್ಶ ಪಿತರಂ ವೀರೋ ಮಾತರಂ ತಾಂ ಸುಪುಣ್ಯಕಾಂ ।**
**ಹರ್ಷೇಣ ಮಹತಾವಿಷ್ಟಃ ಪಿತುಃ ಪಾದೌ ನನಾಮ ಸಃ ॥ ೭ ॥**

**ಅಶೋಕಸುಂದರೀ ಸಾ ತು ತಯೋಃ ಪಾದೌ ಪುನಃ ಪುನಃ ।**
**ನನಾಮ ಭಕ್ತ್ಯಾ ಭಾವೇನ ಚೋಭಯೋಸ್ಸಾ ವರಾನನಾ ॥ ೮ ॥**

**ರಂಭಾ ಚ ಸಾ ನನಾಮಾಪ್ಯದರ್ಶಯತ್ಪ್ರೀತಿಮುತ್ತಮಾಂ ।**
**ನಮಸ್ಕೃತ್ವಾ ಸಮಾಭಾಷ್ಯ ಸ್ವಗುರುಂ ನೃಪನಂದನಃ ॥ ೯ ॥**

**ಅನಾಮಯಂ ಚ ಪಪ್ರಚ್ಛ ಮಾತರಂ ಪಿತರಂ ಪ್ರತಿ ।**
**ಏವಮುಕ್ತೋ ಮಹಾಭಾಗಃ ಸಾನಂದಪುಲಕೋದ್ಗಮಃ ॥ ೧೦ ॥**

---

ಮಾನವಾದ ಉತ್ತಮವಾದ ರಥಗಳುಳ್ಳ, ಮಂಗಳಧ್ವನಿಗಳಿಂದಲೂ, ವೇದಘೋಷ ದಿಂದಲೂ ಕೂಡಿದ ಹಾಡು, ವಾದ್ಯ, ವೀಣೆ, ಕೊಳಲುಗಳ ಧ್ವನಿಯಿಂದ ಕೂಡಿದ, ಈ ರೀತಿ ಎಲ್ಲಾ ರೀತಿಯಲ್ಲೂ ಉತ್ತಮವಾದ ಆ ಪಟ್ಟಣವನ್ನು ಪ್ರವೇಶಿಸಿದನು.

೬-೭. ವೇದೋಕ್ತವಾದ ಮಂಗಳಧ್ವನಿಯಿಂದ ಕೂಡಿದ ಬ್ರಾಹ್ಮಣರಿಂದ ಗೌರವಿಸಲ್ಪಟ್ಟು ತಾಯಿತಂದೆಗಳನ್ನು ನೋಡಿದನು. ಅತ್ಯಂತ ಸಂತೋಷವುಳ್ಳವ ನಾಗಿ ಅವರ ಪಾದಗಳಿಗೆ ವಂದಿಸಿದನು.

೮. ಆ ಅಶೋಕಸುಂದರಿಯು ಅವರ ಪಾದಗಳನ್ನು ಭಕ್ತಿಯಿಂದ ನಮಿಸಿ ದಳು. ರಂಭೆಯೂ ಕೂಡ ನಮಸ್ಕರಿಸಿ ತನ್ನ ವಿಶ್ವಾಸವನ್ನು ತೋರ್ಪಡಿಸಿದಳು.

೯. ತಾಯಿತಂದೆಗಳನ್ನು ನಮಸ್ಕರಿಸಿ ಅವರ ಯೋಗಕ್ಷೇಮವನ್ನು ವಿಚಾರಿ ಸಿದನು.

೧೦. ಮಗನು ಹೀಗೆ ವಿಚಾರಿಸಿದುದನ್ನು ಕೇಳಿ ಸಂತೋಷದಿಂದ ರೋಮಾಂಚ ವನ್ನು ಹೊಂದಿ ಮಗನನ್ನು ಕುರಿತು ಇಂತೆಂದನು.

॥ ಆಯುರುವಾಚ ॥

ಅದ್ಯೈವ ವ್ಯಾಧಯೋ ನಷ್ಟಾ ದುಃಖಶೋಕಾವುಭೌ ಗತೌ ।
ಭವತೋ ದರ್ಶನಾತ್ಪುತ್ರ ಸಂತುಷ್ಟಂ ಹೃಷ್ಯತೇ ಜಗತ್ ॥ ೧೧ ॥

ಕೃತಕೃತ್ಯೋಽಸ್ಮಿ ಸಂಜಾತಸ್ತ್ವಯಿ ಜಾತೇ ಮಹೌಜಸಿ ।
ಸ್ವವಂಶೋದ್ಧಾರಣಂ ಕೃತ್ವಾ ಹ್ಯಹಮೇವ ಸಮುದ್ಧೃತಃ ॥ ೧೨ ॥

॥ ಇಂದುಮತ್ಯುವಾಚ ॥

ಪರ್ವಣೀ ಪ್ರಾಪ್ಯ ಚೇಂದೋಸ್ತು ತೇಜೋ ದೃಷ್ಟ್ವಾ ಮಹೋದಧಿಃ ।
ವೃದ್ಧಿಂ ಯಾತಿ ಮಹಾಭಾಗ ತಥಾಹಂ ತವ ದರ್ಶನಾತ್ ॥ ೧೩ ॥

ವರ್ಧಿತಾಸ್ಮಿ ಸುಹೃಷ್ಟಾಸ್ಮಿ ಹ್ಯಾನಂದೇನ ಸಮಾಕುಲಾ ।
ದರ್ಶನಾತ್ತೇ ಮಹಾಭಾಗ ಧನ್ಯಾ ಜಾತಾಸ್ಮಿ ಮಾನದ ॥ ೧೪ ॥

ಏವಂ ಸಂಭಾಷ್ಯ ತಂ ಪುತ್ರಮಾಲಿಂಗ್ಯ ತನಯೋತ್ತಮಂ ।
ಶಿರಸ್ಯಾಘ್ರಾಯ ತಸ್ಯಾಪಿ ವತ್ಸಂ ಧೇನುರ್ಯಥಾ ಸ್ವಕಂ ॥ ೧೫ ॥

---

೧೧-೧೨. ಆಯುರಾಜನು ಹೇಳಿದನು:—ಎಲೈ! ಮಗನೇ, ಈಗ ನನ್ನ ರೋಗಗಳು ಹೋದವು. ದುಃಖಶೋಕಗಳೂ ಹೋದುವು. ಸಂತುಷ್ಟನಾದೆ. ನೀನು ಹುಟ್ಟಿದುದರಿಂದ ಕೃತಕೃತ್ಯನಾದೆ. ನೀನು ನನ್ನ ವಂಶವನ್ನುದ್ಧರಿಸಿ ನನ್ನನ್ನೂ ಮೇಲಕ್ಕೆತ್ತಿದೆ.

೧೩-೧೪. ಇಂದುಮತಿಯು ಹೇಳಿದಳು:—ಚಂದ್ರನು ಹುಟ್ಟುವ ಸಮಯವನ್ನೂ ಅವನ ಕಾಂತಿಯನ್ನೂ ಕಂಡು ಸಮುದ್ರವು ಸಂತೋಷಗೊಂಡು ವೃದ್ಧಿಹೊಂದುವಂತೆ ನಾನು ಸಂತೋಷದಿಂದ ಹಿಗ್ಗಿದ್ದೇನೆ. ನಿನ್ನ ದರ್ಶನದಿಂದ ಧನ್ಯಳಾಗಿದ್ದೇನೆ.

೧೫. ಈ ರೀತಿ ಮಗನನ್ನು ಮಾತನಾಡಿಸಿ ಮುದ್ದಿಟ್ಟು, ತಲೆಯನ್ನು ಮೂಸಿ ನೋಡಿ, ಹಸುವು ಕರುವನ್ನು ನೋಡಿ ಸಂತೋಷಪಡುವಂತೆ ಸಂತೋಷಪಟ್ಟಳು.

**ಅಭಿನಂದ್ಯ ಸುತಂ ಪ್ರಾಪ್ತಂ ನಹುಷಂ ದೇವರೂಪಕಂ ।**
**ಆಶೀರ್ಭಿಸ್ಸರ್ವಪುಣ್ಯಾಭಿರ್ದೇವೀ ಚೇಂದುಮತೀ ತಥಾ ॥ ೧೬ ॥**

**॥ ಸೂತ ಉವಾಚ ॥**

**ಅಥಾಸೌ ಮಾತರಂ ಪುಣ್ಯಂ ದೇವೀಮಿಂದುಮತೀಂ ಸುತಃ ।**
**ಕಥಯಾಮಾಸ ವೃತ್ತಾಂತಂ ಯಥಾ ಚಾಹವಮಾತ್ಮನಃ ॥ ೧೭ ॥**

**ಸ್ವಭಾರ್ಯಾಯಾಸ್ತಥೋತ್ಪತ್ತಿಂ ಪ್ರಾಪ್ತಿಂ ಚೈವ ಮಹಾಯಶಾಃ ।**
**ಹುಂಡೇನಾಪಿ ಯಥಾ ಯುದ್ಧಂ ಹುಂಡಸ್ಯಾಪಿ ನಿಪಾತನಂ ॥ ೧೮ ॥**

**ಸಮಾಸೇನ ಸಮಸ್ತಂ ತದಾಖ್ಯಾತಂ ಸ್ವಯಮೇವ ಹಿ ।**
**ಮಾತಾಪಿತ್ರೋರ್ಯಥಾ ಚಾಗ್ರೇ ತಯೋರಾನಂದದಾಯಕಂ ॥ ೧೯ ॥**

**ಮಾತಾಪಿತರಾವಾಕರ್ಣ್ಯ ಪುತ್ರಸ್ಯಾಪಿ ಪರಾಕ್ರಮಂ ।**
**ಹರ್ಷೇಣ ಮಹತಾವಿಷ್ಟೌ ಸಂಜಾತೌ ಪೂರ್ಣಮಾನಸೌ ॥ ೨೦ ॥**

**ನಹುಷೋ ಧನುರಾದಾಯ ಇಂದ್ರಸ್ಯ ಸ್ಯಂದನೇನ ಚ ।**
**ಜಿಗಾಯ ಪೃಥಿವೀಂ ಸರ್ವಾಂ ಸಪ್ತದ್ವೀಪಾಂ ಸಪತ್ತನಾಂ ॥ ೨೧ ॥**

---

೧೬. ಈ ರೀತಿ ದೇವರೂಪನಾದ ನಹುಷನನ್ನು ಹೊಂದಿ, ಇಂದುಮತಿಯು ಸಂತೋಷಪಟ್ಟು ಅನೇಕ ಆಶೀರ್ವಾದಗಳಿಂದ ಆಶೀರ್ವದಿಸಿದಳು.

೧೭. ಸೂತನು ಹೇಳಿದನು:—ಅನಂತರ ಮಗನಾದ ನಹುಷನು ತಾಯಿಗೆ ತನ್ನ ವಿಷಯಗಳನ್ನೂ, ತಾನು ಮಾಡಿದ ಯುದ್ಧವನ್ನೂ ವಿವರಿಸಿದನು.

೧೮-೧೯. ನಹುಷನು ತಾಯಿತಂದೆಗಳಿಗೆ, ತನ್ನ ಹೆಂಡತಿಯ ಉತ್ಪತ್ತಿ, ಆಕೆಯು ತನಗೆ ಲಭ್ಯಳಾದುದು, ಹುಂಡನೊಡನೆ ಯುದ್ಧ, ಅವನ ವಧೆ, ಇವೆಲ್ಲವನ್ನೂ ತಿಳಿಸಿದನು.

೨೦. ತಾಯಿತಂದೆಗಳು ಅದನ್ನು ಕೇಳಿ ಸಂತೋಷದಿಂದ ತುಂಬಿದರು.

೨೧. ನಹುಷನು ಧನುಸ್ಸನ್ನು ಹಿಡಿದು, ಇಂದ್ರನ ರಥದೊಡನೆ ಹೋಗಿ ಸಪ್ತ ದ್ವೀಪಗಳಿಂದ ಕೂಡಿದ ಪೃಥಿವಿಯನ್ನು ಜಯಿಸಿದನು. ಧನದಿಂದ ಕೂಡಿದ ಆ ಭೂಮಿಯನ್ನು ತಾಯಿತಂದೆಗಳಿಗೆ ಸಮರ್ಪಿಸಿದನು.

ಪಿತ್ರೋಸ್ಸಮರ್ಪಯಾಮಾಸ ವಸುಪೂರ್ಣಾಂ ವಸುಂಧರಾಂ ।
ಪಿತರಂ ಹರ್ಷಯನ್ನಿತ್ಯಂ ದಾನಧರ್ಮೈಸ್ಸುಕರ್ಮಭಿಃ ॥ ೨೨ ॥

ಪಿತರಂ ಯಾಜಯಾಮಾಸ ರಾಜಸೂಯಾದಿಭಿಸ್ತಥಾ ।
ಮಹಾಯಜ್ಞೈಸ್ಸದಾನೈಶ್ಚ ವ್ರತೈರ್ನಿಯಮಸಂಯಮೈಃ ॥ ೨೩ ॥

ಸುದಾನೈರ್ಯಶಸಾ ಪುಣ್ಯೈರ್ಯಜ್ಞೈಃ ಪುಣ್ಯಮಹೋದಯೈಃ ।
ಸುಸಂಪೂರ್ಣೌ ಕೃತೌ ತೌ ತು ಪಿತರೌ ಚಾಯುಸೂನುನಾ ॥ ೨೪ ॥

ಅಥ ದೇವಾಸ್ಸಮಾಗತ್ಯ ನಾಗಾಹ್ವಯಪುರೋತ್ತಮಂ ।
ಅಭ್ಯಷಿಂಚನ್ಮಹಾತ್ಮಾನಂ ನಹುಷಂ ವೀರಮರ್ದನಂ ॥ ೨೫ ॥

ಮುನಿಭಿಸ್ಸಹ ಸಿದ್ಧೈಶ್ಚ ಹ್ಯಾಯುನಾನೇನ ಭೂಭುಜಾ ।
ಅಭಿಷಿಚ್ಯ ಸ್ವರಾಜ್ಯೇ ತಂ ಸಮೇತಂ ಶಿವಕನ್ಯಯಾ ॥ ೨೬ ॥

ಭಾರ್ಯಾಯುಕ್ತಸ್ಸುಕಾಯೇನ ಆಯೂ ರಾಜಾ ಮಹಾಯಶಾಃ ।
ದಿವಂ ಜಗಾಮ ಧರ್ಮಾತ್ಮಾ ದೈವೈಸ್ಸಿದ್ಧೈಸ್ಸುಪೂಜಿತಃ ॥ ೨೭ ॥

---

೨೨. ದಾನಧರ್ಮಗಳಿಂದ ತಾಯಿತಂದೆಗಳನ್ನು ಸಂತೋಷಪಡಿಸಿದನು.

೨೩-೨೪. ತಂದೆಯ ಕೈಯಲ್ಲಿ ರಾಜಸೂಯಾದಿ ಯಾಗಗಳನ್ನು ಮಾಡಿಸಿದನು. ಅವರುಗಳು ಮಾಡಬೇಕಾದ ವ್ರತ, ನಿಯಮ, ದಾನ, ಪುಣ್ಯಕೆಲಸಗಳೆಲ್ಲವನ್ನೂ ಮಾಡಿಸಿ, ಅವರ ಜನ್ಮವನ್ನು ಸಾರ್ಥಕಪಡಿಸಿ ಸಂತೋಷಪಡಿಸಿದನು.

೨೫-೨೬. ಆ ಮೇಲೆ ದೇವತೆಗಳು ಆ ಹಸ್ತಿನಾವತಿಗೆ ಬಂದು, ಮುನಿಗಳೊಡನೆಯೂ, ಸಿದ್ಧರೊಡನೆಯೂ ಕೂಡಿ ಆ ನಹುಷನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದರು. ಆಯುರಾಜನೂ ಕೂಡ ಎಲ್ಲರೊಡನೆಯೂ ಆ ಶಿವಕನ್ಯೆಯೊಡನೆ ನಹುಷನನ್ನು ಅಭಿಷೇಕ ಮಾಡಿದನು.

೨೭. ಆ ಆಯುರಾಜನು ಹೆಂಡತಿಯೊಡನೆ ಸ್ವರ್ಗವನ್ನು ಹೊಂದಿದನು. ಅಲ್ಲಿ ದೇವತೆಗಳು ಆತನನ್ನು ಗೌರವಿಸಿದರು.

ಐಂದ್ರಂ ಪದಂ ಪರಿತ್ಯಜ್ಯ ಬ್ರಹ್ಮಲೋಕಂ ಗತಃ ಪುನಃ ।
ಹರಲೋಕಂ ಜಗಾಮಾಥ ಸ ರಾಜಾ ದೇವಪೂಜಿತಃ ॥ ೨೮ ॥

ಸ್ವಕರ್ಮಭಿರ್ಮಹಾರಾಜಃ ಸುಪುತ್ರಸ್ಯಾಪಿ ತೇಜಸಾ ।
ಹರೇರ್ಲೋಕಂ ಜಗಾಮಾಥ ಸ ರಾಜಾ ಭಕ್ತಸತ್ತಮಃ ॥ ೨೯ ॥

ಪುರುಷೈಃ ಪುಣ್ಯಕರ್ಮಾಖ್ಯೈರೀದೃಶೇ ಪುಣ್ಯ ಉತ್ತಮೇ ।
ಯತಿತವ್ಯಂ ಮಹಾಭಾಗ ಕಿಮನ್ಯೈಶ್ಶೋಕಕಾರಕೈಃ ॥ ೩೦ ॥

ಜಾತೋ ಯಥಾ ಸ ಧರ್ಮಾತ್ಮಾ ನಹುಷಃ ಪಿತೃತಾರಕಃ ।
ಕುಲಸ್ಯ ಧರ್ತಾ ಸರ್ವಸ್ಯ ಜ್ಞಾನವಿಜ್ಞಾನಸಂಯುತಃ ॥ ೩೧ ॥

ಏತತ್ತೇ ಸರ್ವಮಾಖ್ಯಾತಂ ಚರಿತಂ ತಸ್ಯ ಧೀಮತಃ ।
ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ವದ ಪುತ್ರ ಕಪಿಂಜಲ ॥ ೩೨ ॥

---

೨೮. ಅನಂತರ ಇಂದ್ರಲೋಕವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೋದನು. ಅದನ್ನು ಬಿಟ್ಟು ವೈಕುಂಠಕ್ಕೆ ಹೋದನು.

೨೯. ಬಳಿಕ ಭಕ್ತೋತ್ತಮನಾದ ಆ ರಾಜನು ತನ್ನ ಪುಣ್ಯಕರ್ಮಫಲದಿಂದಲೂ, ಮಗನ ಪ್ರಭಾವದಿಂದಲೂ ಅಲ್ಲಿಂದ ವಿಷ್ಣುಲೋಕಕ್ಕೂ ಹೋದನು.

೩೦. ಪುಣ್ಯವಂತರಾದ ಮನುಷ್ಯರು ಈ ರೀತಿಯಾದ ಉತ್ತಮಪುಣ್ಯಕ್ಕೆ ಪ್ರಯತ್ನಿಸಬೇಕು. ದುಃಖವನ್ನು ಕೊಡುವ ಮಿಕ್ಕ ಪುಣ್ಯಗಳಿಂದ ಉಪಯೋಗವಿಲ್ಲ.

೩೧. ನಹುಷನು ಹೇಗೆ ಹುಟ್ಟಿ, ಧರ್ಮಾತ್ಮನಾಗಿ ತಾಯಿತಂದೆಗಳನ್ನುದ್ಧರಿಸಿ, ಕುಲವನ್ನು ಉದ್ಧರಿಸಿ, ಜ್ಞಾನವಿಜ್ಞಾನದಿಂದ ಕೂಡಿದನೋ ಅದೆಲ್ಲವನ್ನೂ ವಿವರಿಸಿದೆನು.

೩೨. ಆ ಶೂರನಾದ ನಹುಷನ ಕಥೆಯನ್ನು ಹೇಳಿದನು. ನಿನಗೆ ಇನ್ನೇನನ್ನು ಹೇಳಲಿ? ಕಪಿಂಜಲನೇ ಕೇಳು.

ಏವಂ ವಿಧಂ ಪುಣ್ಯತಮಂ ಚರಿತ್ರಂ
ವರಿಷ್ಠಮೇತದ್ಯಶಸಾ ಸಮೇತಂ।
ಆಯೋಽಸ್ಸತಸ್ಯಾಪಿ ಶೃಣೋತಿ ಮರ್ತ್ಯೋ
ಭೋಗಾನ್ಸ ಭುಕ್ತ್ವೈತಿ ಪದಂ ಮುರಾರೇಃ ॥ ೩೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಸಪ್ತದಶಾಧಿಕಶತತಮೋಧ್ಯಾಯಃ



---

೩೩. ಈ ರೀತಿಯಾದ ಪುಣ್ಯತಮವಾದ, ಉತ್ತಮವಾದ, ಯಶಸ್ಕರವಾದ ನಹುಷನ ಚರಿತ್ರೆಯನ್ನು ಕೇಳಿದವನು ಈ ಲೋಕದಲ್ಲಿ ಉತ್ತಮ ಭೋಗಗಳನ್ನು ಅನುಭವಿಸಿ, ಕೊನೆಯಲ್ಲಿ ವೈಕುಂಠವನ್ನು ಹೊಂದುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಾದಶಾಧಿಕಶತತಮೋಽಧ್ಯಾಯಃ

॥ ಕಪಿಂಜಲ ಉವಾಚ ॥

ಗಂಗಾಮುಖೇ ಪುರಾ ತಾತ ರೋದಮಾನಾ ವರಾಂಗನಾ ।
ನೇತ್ರಾಭ್ಯಾಮಶ್ರುಬಿಂದೂನಿ ಪತಂತಿ ಚ ಮಹಾಬಲೇ ॥ ೧ ॥

ಗಂಗಾಮಧ್ಯೇ ನಿಮಜ್ಜಂತಿ ಭವಂತಿ ಕಮಲಾನಿ ಚ ।
ಪುಣ್ಯಾನಿ ಹೃದ್ಯರೂಪಾಣಿ ಸುಗಂಧೀನಿ ಮಹಾಂತಿ ಚ ॥ ೨ ॥

ಅಸ್ಥಿಶೇಷೋಽಥ ಪುರುಷೋ ಜಟಾಚೀರಧರಃ ಪುನಃ ।
ತಾನಿ ಸೌಗಂಧ್ಯಯುಕ್ತಾನಿ ಪದ್ಮಾನಿ ವಿಚಿನೋತಿ ಸಃ ॥ ೩ ॥

ಹೇಮವರ್ಣಾನಿ ದಿವ್ಯಾನಿ ಶಿವಂ ನೀತ್ವಾ ಸಮರ್ಚಯೇತ್ ।
ಸಾ ಕಾ ನಾರೀ ಸಮಾಚಕ್ಷ್ವ ಸ ವಾ ಕೋ ಹಿ ಮಹಾಮತೇ ॥ ೪ ॥

---

## ನೂರ ಹದಿನೆಂಟನೆಯ ಅಧ್ಯಾಯವು

೧-೩. ಕಪಿಂಜಲನು ಹೇಳಿದನು:—ಎಲೈ! ತಂದೆಯೇ, ಗಂಗಾಮುಖದಲ್ಲಿ ಒಬ್ಬ ಹೆಂಗಸು ಅಳುತ್ತಿದ್ದಳು. ಅವಳ ಕಣ್ಣಿನಿಂದ ಬಿದ್ದ ಕಂಬನಿಯು ನೀರಿನಲ್ಲಿ ಬೀಳುತ್ತಿತ್ತು. ಬಿದ್ದು ಮುಳುಗಿದೊಡನೆಯೇ ಅವು ವಾಸನೆಗಳಿಂದ ಕೂಡಿದ ಕಮಲಗಳಾಗಿ ಹುಟ್ಟುತ್ತಿದ್ದವು. ಕೃಶನಾಗಿ ಜಟೆ, ನಾರುಮಡಿಗಳನ್ನು ಧರಿಸಿದವನೊಬ್ಬನು ಆ ಕಮಲಗಳನ್ನು ಕೊಯ್ದು ಶಿವನನ್ನು ಪೂಜಿಸುತ್ತಿದ್ದನು.

೪-೫. ಆ ಹೆಂಗಸಾರು? ಆ ಗಂಡಸು ತಾನೆ ಯಾವನು? ಅವನು ಶಿವನನ್ನು

ಅರ್ಚಯಿತ್ವಾ ಶಿವಂ ಚಾಪಿ ಕಸ್ಮಾತ್ತ್ವಂ ಪಶ್ಚಾತ್ಪ್ರರೋದಿತಿ ।
ಏತನ್ಮೇ ಸರ್ವಮಾಚಕ್ಷ್ವ ಯದ್ಯಹಂ ತವ ವಲ್ಲಭಃ ॥ ೫ ॥

॥ ಕುಂಜಲ ಉವಾಚ ॥

ಶೃಣು ವತ್ಸ ಪ್ರವಕ್ಷ್ಯಾಮಿ ವೃತ್ತಾಂತಂ ದೇವನಿರ್ಮಿತಂ ।
ಚರಿತಂ ಸರ್ವಪಾಪಘ್ನಂ ವಿಷ್ಣೋಶ್ಚೈವ ಮಹಾತ್ಮನಃ ॥ ೬ ॥

ಯೋಽಸೌ ಹುಂಡೋ ಮಹಾವೀರ್ಯೋ ನಹುಷೇಣ ಹತೋ ರಣೇ ।
ತಸ್ಯ ಪುತ್ರೋ ಮಹಾವೀರ್ಯೋ ವಿಹುಂಡಸ್ತಪಸಾನ್ವಿತಃ ॥ ೭ ॥

ನಿಹತಂ ಪಿತರಂ ಶ್ರುತ್ವಾ ಸಾಮಾತ್ಯಂ ಸಪರಿಚ್ಛದಂ ।
ಆಯುಪುತ್ರೇಣ ಧೀರೇಣ ನಹುಷೇಣ ಬಲೀಯಸಾ ॥ ೮ ॥

ತಪಶ್ಚಚಾರ ಸಂಕ್ರುದ್ಧೋ ದೇವಾನ್ ಹಂತುಂ ಸಮುದ್ಯತಃ ।
ಪೌರುಷಂ ತಸ್ಯ ದುಷ್ಟಸ್ಯ ತಪಸಾ ವರ್ಧಿತಸ್ಯ ಚ ॥ ೯ ॥

ಜಾನಂತಿ ದೇವಾಸ್ಸರ್ವೇ ತು ದುಸ್ಸಹಂ ಸಮರಾಂಗಣೇ ।
ಹುಂಡಾತ್ಮಜೋ ವಿಹುಂಡಸ್ತು ತ್ರೈಲೋಕ್ಯಂ ಹಂತುಮಿಚ್ಛತಿ ॥ ೧೦ ॥

---

ಪೂಜಿಸಿ ಆಮೇಲೆ ಏಕೆ ಅಳುತ್ತಿದ್ದನು? ನನ್ನ ಮೇಲೆ ನಿನಗೆ ಪ್ರೀತಿಯಿದ್ದರೆ ಇವೆಲ್ಲವನ್ನೂ ನನಗೆ ಹೇಳು.

೬. ಕುಂಜಲನು ಹೇಳಿದನು:—ಸರ್ವಪಾಪವಿನಾಶಕವಾದ ದೇವನಿರ್ಮಿತವಾದ ವಿಷ್ಣುವಿನ ಚರಿತ್ರೆಯನ್ನು ಹೇಳುತ್ತೇನೆ. ಕೇಳು.

೭-೮. ನಹುಷನಿಂದ ಕೊಲ್ಲಲ್ಪಟ್ಟ ಹುಂಡನಿಗೆ ವಿಹುಂಡನೆಂಬೊಬ್ಬ ಮಗನಿದ್ದನು. ತನ್ನ ತಂದೆಯು ನಹುಷನಿಂದ ಕೊಲ್ಲಲ್ಪಟ್ಟುದನ್ನು ತಿಳಿದು ಉಗ್ರವಾದ ತಪಸ್ಸನ್ನು ಮಾಡಿದನು. ಮತ್ತು ದೇವತೆಗಳನ್ನು ಕೊಲ್ಲಲು ಮೊದಲು ಮಾಡಿದನು.

೯-೧೦. ಆ ವಿಹುಂಡನ ಶೌರ್ಯವನ್ನೂ, ತಪಸ್ಸಿನ ಶಕ್ತಿಯನ್ನೂ, ಅವನು ರಣದಲ್ಲಿ ಜಯಿಸಲಸಾಧ್ಯವೆಂಬುದನ್ನೂ ಎಲ್ಲರೂ ಬಲ್ಲರು. ಈ ವಿಹುಂಡನಾದರೋ ಮೂರು ಲೋಕವನ್ನೂ ನಾಶಮಾಡಲು ಇಚ್ಛಿಸುತ್ತಿರುವನು

**ಪಿತುರ್ವೈರಂ ಕರಿಷ್ಯಾಮಿ ಹನಿಷ್ಯೇ ಮಾನವಾನ್ ಸುರಾನ್ ।**
**ಏವಂ ಸಮುದ್ಯತಃ ಪಾಪೀ ದೇವಬ್ರಾಹ್ಮಣಕಂಟಕಃ ॥ ೧೧ ॥**

**ಉಪದ್ರವಂ ಸಮಾರೇಭೇ ಪ್ರಜಾಃ ಪೀಡಯತೇ ಚ ಸಃ ।**
**ತಸ್ಯೈವ ತೇಜಸಾ ದಗ್ಧಾ ದೇವಾಶ್ಚೇಂದ್ರಪುರೋಗಮಾಃ ॥ ೧೨ ॥**

**ಶರಣಂ ದೇವದೇವಸ್ಯ ಜಗ್ಮುರ್ವಿಷ್ಣೋರ್ಮಹೌಜಸಃ ।**
**ದೇವದೇವಂ ಜಗನ್ನಾಥಂ ಶಂಖಚಕ್ರಗದಾಧರಂ ॥ ೧೩ ॥**

**ಊಚುಶ್ಚ ಪಾಹಿ ನೋ ನಿತ್ಯಂ ವಿಹುಂಡಸ್ಯ ಮಹಾಭಯಾತ್ ॥ ೧೪ ॥**

**॥ ವಿಷ್ಣುರುವಾಚ ॥**

**ವರ್ಧಂತು ದೇವಾಸ್ಸರ್ವೇ ತು ಸುಸುಖೇನ ಮಹೇಶ್ವರಾಃ ।**
**ವಿಹುಂಡಂ ನಾಶಯಿಷ್ಯಾಮಿ ಪಾಪಿನಂ ದೇವಕಂಟಕಂ ॥ ೧೫ ॥**

**ಏವಮಾಭಾಷ್ಯ ತಾನ್ದೇವಾನ್ ಮಾಯಾಂ ಕೃಷ್ಣೋ ವಿಧಾಯ ಚ ।**
**ಸ್ವಯಮೇವ ಸ್ಥಿತಸ್ತತ್ರ ನಂದನೇ ಸುಮಹಾಯಶಾಃ ॥ ೧೬ ॥**

---

೧೧. ತನ್ನ ತಂದೆಯನ್ನು ಕೊಂದವರ ವೈರವನ್ನು ತೀರಿಸಿಕೊಳ್ಳಲು ಪ್ರತೀಕಾರ ಮಾಡುತ್ತೇನೆಂದು ದೇವತೆಗಳನ್ನೂ, ಮನುಷ್ಯರನ್ನೂ ಕೊಲ್ಲಲುದ್ಯುಕ್ತನಾಗಿ ದೇವ ಬ್ರಾಹ್ಮಣರನ್ನು ಪೀಡಿಸುತ್ತ ಪ್ರಜೆಗಳೆಲ್ಲರನ್ನೂ ತೊಂದರೆಪಡಿಸುತ್ತಿದ್ದನು.

೧೨. ಆ ವಿಹುಂಡನ ವೀರ್ಯದಿಂದ ನೊಂದ ಇಂದ್ರನೇ ಮುಂತಾದ ದೇವತೆಗಳು ದೇವದೇವನಾದ ವಿಷ್ಣುವನ್ನು ಶರಣುಹೊಂದಿದರು.

೧೩-೧೪. ದೇವದೇವನಾದ ಜಗನ್ನಾಥನನ್ನು ಕುರಿತು, ವಿಹುಂಡನ ಭಯದಿಂದ ನಮ್ಮನ್ನು ಕಾಪಾಡೆಂದು ಕೇಳಿಕೊಂಡರು.

೧೫. ವಿಷ್ಣುವು ಹೇಳಿದನು:—ಎಲೈ ದೇವತೆಗಳಿರಾ, ನೀವೆಲ್ಲರೂ ಸುಖವಾಗಿರಿ. ಆ ದೇವಕಂಟಕನಾದ ವಿಹುಂಡನನ್ನು ನಾಶಮಾಡುತ್ತೇನೆ.

೧೬. ಹೀಗೆಂದು ದೇವತೆಗಳಿಗೆ ಹೇಳಿ, ಆ ವಿಷ್ಣುವು ಮಾಯೆಯನ್ನು ಪೊಂಡಿ ನಂದನವನದಲ್ಲಿದ್ದನು.

ಮಾಯಾಮಯಂ ಚಕಾರಾಥ ಸ್ವಕಂ ರೂಪಂ ಗುಣಾನ್ವಿತಂ ।
ವಿಷ್ಣುಮಾಯಾ ಮಹಾಭಾಗಾ ಸರ್ವವಿಶ್ವಪ್ರಮೋಹಿನೀ ॥ ೧೭ ॥

ಚಕಾರ ರೂಪಮತುಲಂ ವಿಷ್ಣೋರ್ಮಾಯಾ ಪ್ರಮೋಹಿನೀ ।
ವಿಹುಂಡಸ್ಯ ವಧಾರ್ಥಾಯ ರೂಪಲಾವಣ್ಯಶಾಲಿನೀ ॥ ೧೮ ॥

॥ ಕುಂಜಲ ಉವಾಚ ॥

ಸ ದೇವಾನಾಂ ವಧಾರ್ಥಾಯ ದಿವ್ಯಮಾರ್ಗಂ ಜಗಾಮ ಹ ।
ನಂದನೇ ತಪತೀಂ ಮಾಯಾಮಪಶ್ಯದ್ದಿತಿಜೇಶ್ವರಃ ॥ ೧೯ ॥

ತಯಾ ವಿಮೋಹಿತೋ ದೈತ್ಯಃ ಕಾಮಬಾಣಕೃತಾನ್ತರಃ ।
ಆತ್ಮನಾಶಂ ನ ಜಾನಾತಿ ಕಾಲರೂಪಾಂ ವರಸ್ತ್ರಿಯಂ ॥ ೨೦ ॥

ತಾಂ ದೃಷ್ಟ್ವಾ ತಪ್ತಹೇಮಾಭಾಂ ರೂಪದ್ರವಿಣಶಾಲಿನೀಂ ।
ಲುಬ್ಧೋ ವಿಹುಂಡಃ ಪಾಪಾತ್ಮಾ ತಾಮುವಾಚ ವರಾಂಗನಾಂ ॥ ೨೧ ॥

---

೧೭. ಆ ವಿಷ್ಣುವು ತನ್ನ ಮಾಯಾರೂಪವನ್ನು ಬಹು ಸುಂದರವಾದುದನ್ನಾಗಿಯೂ ಗುಣವುಳ್ಳದ್ದನ್ನಾಗಿಯೂ ಮಾಡಿದನು. ವಿಷ್ಣುಮಾಯೆಯು ಯಾವಾಗಲೂ ಪ್ರಪಂಚವನ್ನೇ ಮೋಹಿಸುತ್ತಿರುವಂತಿರುವುದಲ್ಲವೆ!

೧೮. ವಿಷ್ಣುವಿನ ಮಾಯೆಯು ಬಹು ಸುಂದರವಾಗಿ ರೂಪಲಾವಣ್ಯಗಳಿಂದ ಕೂಡಿಕೊಂಡು ವಿಹುಂಡನ ವಧೆಗೋಸ್ಕರ ಕಾದಿದ್ದಿತು.

೧೯. ಕುಂಜಲನು ಹೇಳಿದನು:—ದೇವತೆಗಳನ್ನು ಕೊಲ್ಲಲು ಆ ವಿಹುಂಡನು ದೇವಮಾರ್ಗವನ್ನು ಹೊಂದಿ, ನಂದನವನದಲ್ಲಿ ತಪಸ್ಸುಮಾಡುತ್ತಿದ್ದ ಆ ಮಾಯೆಯನ್ನು ನೋಡಿದನು.

೨೦. ಆ ವಿಹುಂಡನು ಅವಳಲ್ಲಿ ಮೋಹಿತನಾಗಿ ಕಾಮಬಾಣದಿಂದ ಹೊಡೆಯಲ್ಪಟ್ಟನು. ತನ್ನ ನಾಶವನ್ನೂ, ಆ ಯಮರೂಪಳಾದ ಹೆಂಗಸನ್ನೂ ತಿಳಿಯದವನಾದನು.

೨೧. ರೂಪವತಿಯಾದ ಆಕೆಯನ್ನು ನೋಡಿ ಆಕೆಯಲ್ಲಿ ವಿಹುಂಡನು ಆಸೆಪಟ್ಟು ಆಕೆಯನ್ನು ಕುರಿತು ಇಂತೆಂದನು.

**ಕಾಽಸಿ ಕಾಽಸಿ ವರಾರೋಹೇ ಮಮ ಚಿತ್ತಪ್ರಮಾಥಿನೀ ।**
**ಸಂಗಮಂ ದೇಹಿ ಮೇ ಭದ್ರೇ ರಕ್ಷ ರಕ್ಷ ವರಾನನೇ ॥ ೨೨ ॥**

**ಸಂಗಮಾತ್ರವ ದೇವೇಶಿ ಯಂ ಯಮಿಚ್ಛಸಿ ಸಾಂಪ್ರತಂ ।**
**ತಂ ತಂ ದದ್ಮಿ ಮಹಾಭಾಗೇ ದುರ್ಲಭಂ ದೇವದಾನವೈಃ ॥ ೨೩ ॥**

**॥ ಮಾಯೋವಾಚ ॥**

**ಮಾಮೇವ ಭೋಕ್ತುಮಿಚ್ಛಾ ಚೇದ್ದಾಯಂ ಮೇ ದೇಹಿ ದಾನವ ।**
**ಸಪ್ತಕೋಟಿಮಿತೈಶ್ಚೈವ ಪುಷ್ಪೈಃ ಪೂಜಯ ಶಂಕರಂ ॥ ೨೪ ॥**

**ಕಾಮೋದಸಂಭವೈರ್ದಿವ್ಯೈಃ ಸುಗಂಧೈರ್ದೇವದುರ್ಲಭೈಃ ।**
**ತೇಷಾಂ ಪುಷ್ಪಕೃತಾಂ ಮಾಲಾಂ ಮಮ ಕಂಠೇ ವಿಶೋಭಿತಾಂ ॥ ೨೫ ॥**

**ಆರೋಪಯ ಮಹಾಭಾಗ ಏತದ್ದಾಯಂ ಪ್ರದೇಹಿ ಮೇ ।**
**ತದಾಹಂ ಸುಪ್ರಿಯಾ ಭಾರ್ಯಾ ಭವಿಷ್ಯಾಮಿ ನ ಸಂಶಯಃ ॥ ೨೬ ॥**

---

೨೨. ಎಲೈ ಉತ್ತಮಾಂಗಿಯೇ, ನೀನಾರು? ನನ್ನ ಮನಸ್ಸನ್ನು ಸೆಳೆಯುತ್ತಿರುವಿಯಲ್ಲ? ನನಗೆ ನಿನ್ನ ಸಂಗಮವನ್ನು ಕೊಟ್ಟು, ನನ್ನನ್ನು ಕಾಪಾಡು.

೨೩. ನೀನು ನನಗೆ ಸಂಗಮವನ್ನು ಕೊಟ್ಟಿದ್ದಾದರೆ ನೀನು ಏನೇನನ್ನು ಅಪೇಕ್ಷಿಸುತ್ತೀಯೋ ಅವೆಲ್ಲವನ್ನೂ ಕೊಡುತ್ತೇನೆ. ದೇವದಾನವರಿಗೂ ಸಿಕ್ಕದಿದ್ದುದಾದರೂ ಸಂಪಾದಿಸಿ ತರುತ್ತೇನೆ.

೨೪–೨೬. ವಿಷ್ಣು ಮಾಯೆಯು ಹೇಳಿದಳು:—ಎಲೈ ದಾನವನೇ, ನನ್ನನ್ನು ನೀನು ಅನುಭವಿಸಬೇಕೆಂದು ಇಚ್ಛಿಸುವ ಪಕ್ಷದಲ್ಲಿ ನನಗೊಂದು ಮಾತುಕೊಡು. ಅದೇನೆಂದರೆ ಕಾಮೋದಕದಿಂದ ಹುಟ್ಟಿದ, ಸುಗಂಧವುಳ್ಳ, ದೇವದಾನವರಿಂದ ಹೊಂದಲಸಾಧ್ಯವಾದ ಏಳುಕೋಟಿ ತಾವರೆ ಹೂವುಗಳಿಂದ ಶಂಕರನನ್ನು ಪೂಜಿಸು. ಆಮೇಲೆ ಅವುಗಳನ್ನು ಮಾಲೆಯಾಗಿ ಕಟ್ಟಿ ನನ್ನ ಕತ್ತಿನಲ್ಲಿ ಹಾಕು. ಇವೇ ನೀನು ನನಗೆ ಮಾಡಿಕೊಡಬೇಕಾದ ಕೆಲಸದ ಮಾತು. ಆ ರೀತಿ ಮಾಡಿದರೆ ನಾನು ನಿನಗೆ ಪ್ರಿಯಳಾಗುತ್ತೇನೆ ಸಂಶಯವಿಲ್ಲ.

॥ ವಿಹುಂಡ ಉವಾಚ ॥

ಏವಂ ದೇವಿ ಕರಿಷ್ಯಾಮಿ ವರಂ ದದ್ಮಿ ಪ್ರಯಾಚಿತಂ ।
ವನಾನಿ ಯಾನಿ ಪುಣ್ಯಾನಿ ದಿವ್ಯಾನಿ ದಿತಿಜೇಶ್ವರಃ ॥ ೨೭ ॥

ಬಭ್ರಾಮ ಮನ್ಮಥಾವಿಷ್ಟೋ ನ ಪಶ್ಯತಿ ಚ ತದ್ದ್ರುಮಂ ।
ಕಾಮೋದಕಾಖ್ಯಂ ಪ್ರಪಚ್ಛ ಯತ್ರ ತತ್ರ ಗತಃ ಸ್ವಯಂ ॥ ೨೮ ॥

ಕಾಮೋದಕೋ ದ್ರುಮೋ ನಾಸ್ತಿ ವದಶ್ಯೇವಂ ಮಹಾಜನಃ ।
ಪೃಚ್ಛಮಾನಃ ಸ ದುಷ್ಟಾತ್ಮಾ ಕಾಮಬಾಣೈಃ ಪ್ರಪೀಡಿತಃ ॥ ೨೯ ॥

ಪಪ್ರಚ್ಛ ಭಾರ್ಗವಂ ಗತ್ವಾ ಭಕ್ತ್ಯಾ ನಮಿತಕಂಧರಃ ।
ಕಾಮೋದಕಂ ದ್ರುಮಂ ಬ್ರೂಹಿ ಕಾಂತಂ ಪುಷ್ಪಸಮನ್ವಿತಂ ॥ ೩೦ ॥

॥ ಶುಕ್ರ ಉವಾಚ ॥

ಕಾಮೋದಃ ಪಾದಪೋ ನಾಸ್ತಿ ಯೋಷಿದೇವಾಸ್ತಿ ದಾನವ ।
ಯದಾ ಸಾ ಹಸತೇ ಚೈವ ಪ್ರಸಂಗೇನ ಪ್ರಹರ್ಷಿತಾ ॥ ೩೧ ॥

---

೨೭. ವಿಹುಂಡನು ಹೇಳಿದನು:—ದೇವಿಯೇ, ಹಾಗೆಯೇ ಮಾಡುತ್ತೇನೆ. ನೀನು ಕೇಳಿದುದನ್ನು ಕೊಡುತ್ತೇನೆ. ಎಂದು ಹೇಳಿ ಆ ವಿಹುಂಡನು ಉತ್ತಮವಾದ ವನಗಳೆಲ್ಲವನ್ನೂ ಸುತ್ತಿದನು. ಅಂತಹ ಮರವು ಎಲ್ಲಿಯೂ ಸಿಕ್ಕಲಿಲ್ಲ.

೨೮. ತಾನು ಹೋದೆಡೆಯಲ್ಲೆಲ್ಲಾ ಕಾಮೋದಕವೆಂಬ ಮರವೆಲ್ಲಿದೆ? ಎಂದು ಎಲ್ಲರನ್ನೂ ಕೇಳುತ್ತಿದ್ದನು.

೨೯-೩೦. ಕೇಳಿದವರೆಲ್ಲರೂ ಕಾಮೋದಕವೆಂಬ ಮರವಿಲ್ಲವೆಂದು ಹೇಳುತ್ತಿದ್ದರು. ಕಾಮಬಾಣದಿಂದ ಹೊಡೆಯಲ್ಪಟ್ಟ ಈತನು ಶುಕ್ರನ ಬಳಿಗೆ ಹೋಗಿ ಭಕ್ತಿಯಿಂದ ತಲೆಬಾಗಿ, ಹೂಬಿಟ್ಟು ಮನೋಹರವಾದ ಕಾಮೋದಕವೆಂಬ ಮರವೆಲ್ಲಿರುವುದು? ಹೇಳು. ಎಂದು ಕೇಳಿದನು.

೩೧-೩೨. ಶುಕ್ರನು ಹೇಳಿದನು:—ಎಲೈ ವಿಹುಂಡನೆ, ಕಾಮೋದವೆಂಬ

**ಸುಹಾಸಾಜ್ಜಜ್ಞಿರೇ ದೈತ್ಯ ಸುಗಂಧಾನಿ ವರಾಣ್ಯಪಿ ।**
**ಸುಮಾನ್ಯೇತಾನಿ ದಿವ್ಯಾನಿ ಕಾಮೋದಾನಿ ನ ಸಂಶಯಃ ॥ ೩೨ ॥**

**ಅತಿಪೀತಾನಿ ಪುಷ್ಪಾಣಿ ಸೌರಭೇಣ ಯುತಾನ್ಯಪಿ ।**
**ತೇನಾಪ್ಯೇಕೇನ ಪುಷ್ಪೇಣ ಯಃ ಪೂಜಯತಿ ಶಂಕರಂ ॥ ೩೩ ॥**

**ತಸ್ಯೇಪ್ಸಿತಂ ಮಹಾಕಾಮಂ ಸಂಪೂರಯತಿ ಶಂಕರಃ ।**
**ತಸ್ಯಾಶ್ಚ ರೋದನಾದೇವ ಪ್ರಭವಂತಿ ನ ಸಂಶಯಃ ॥ ೩೪ ॥**

**ತಾದೃಶಾನ್ಯೇವ ಪುಷ್ಪಾಣಿ ಲೋಹಿತಾನಿ ಮಹಾಂತಿ ಚ ।**
**ಸೌರಭೇಣ ವಿನಾ ದೈತ್ಯ ತೇಷಾಂ ಸ್ಪರ್ಶಂ ನ ಕಾರಯೇತ್ ॥ ೩೫ ॥**

**ಏವಮಾಕರ್ಣ್ಯ ತಸ್ಯಾಪಿ ವಾಕ್ಯಂ ಶುಕ್ರಸ್ಯ ಭಾಷಿತಂ ।**
**ಉವಾಚ ಸಾ ತು ಕುತ್ರಾಸ್ತೇ ಕಾಮೋದಾ ಭೃಗುನಂದನ ॥ ೩೬ ॥**

**॥ ಶುಕ್ರ ಉವಾಚ ॥**

**ಗಂಗಾದ್ವಾರೇ ಮಹಾಪುಣ್ಯೇ ಸರ್ವಪಾತಕಶೋಧನೇ ।**
**ಕಾಮೋದಾಖ್ಯಂ ಪುರಂ ತತ್ರ ನಿರ್ಮಿತಂ ವಿಶ್ವಕರ್ಮಣಾ ॥ ೩೭ ॥**

---

ಮರವಿಲ್ಲ ಆ ಹೆಸರಿನ ಹೆಂಗಸೊಬ್ಬಳು ಇದ್ದಾಳೆ. ಅವಳು ಪ್ರಸಂಗದಿಂದ ನಕ್ಕರೂ ಕೂಡ ಅವಳಿಂದ ಕಾಮೋದವೆಂಬ ಪುಷ್ಪಗಳು ಹುಟ್ಟುತ್ತವೆ. ಸಂಶಯವಿಲ್ಲ.

೩೩. ಹಾಗೆ ನಗುವಾಗ ಹುಟ್ಟುವ ಪುಷ್ಪಗಳು ವಾಸನೆಯಾಗಿ ಬೆಳ್ಳಗಿರುತ್ತವೆ. ಅದೊಂದೇ ಒಂದು ಹೂವನ್ನು ಪೂಜಿಸಿದರೂ ಶಂಕರನು ಸಂತುಷ್ಟನಾಗಿ ಅವನಿಗೆ ಬೇಕಾದುದನ್ನು ಕೊಡುತ್ತಾನೆ. ಸಂಶಯವಿಲ್ಲ.

೩೪-೩೫. ಆಕೆಯು ಅತ್ತರೂ ಆ ರೀತಿಯಾಗಿ ಕೆಂಪು ಹೂಗಳು ಹುಟ್ಟುತ್ತವೆ. ಅವು ವಾಸನೆಯಾಗಿರುವುದಿಲ್ಲ. ಅವುಗಳನ್ನು ಸ್ಪರ್ಶಿಸಬಾರದು.

೩೬. ಶುಕ್ರನು ಹೇಳಿದ ಈ ಮಾತನ್ನು ಕೇಳಿ ಎಲೈ! ಭಾರ್ಗವನೇ, ಆಕೆಯು ಎಲ್ಲಿದ್ದಾಳೆ? ಎಂದು ಕೇಳಿದನು.

೩೭. ಶುಕ್ರನು ಹೇಳಿದನು:— ಸರ್ವಪಾಪವಿನಾಶಕವಾದ ಗಂಗಾದ್ವಾರದಲ್ಲಿ ಕಾಮೋದವೆಂಬ ಪಟ್ಟಣವನ್ನು ವಿಶ್ವಕರ್ಮನು ನಿರ್ಮಿಸಿದ್ದಾನೆ.

ಕಾಮೋದಪತ್ತನೇ ನಾರೀ ದಿವ್ಯಭೋಗೈರಲಂಕೃತಾ ।
ತಥಾ ಚಾಭರಣೈರ್ಭಾತಿ ಸರ್ವದೇವೈಸ್ಸುಪೂಜಿತಾ ॥ ೩೮ ॥

ತ್ವಯಾ ತತ್ರೈವ ಗಂತವ್ಯಂ ಪೂಜಿತವ್ಯಾ ವರಾಪ್ಸರಾಃ ।
ಉಪಾಯೇನಾಪಿ ಪುಣ್ಯೇನ ತಾಂ ಪ್ರಹಾಸಯ ದಾನವ ॥ ೩೯ ॥

ಏವಮುಕ್ತ್ವಾ ಸ ಯೋಗೀಂದ್ರಃ ಶುಕ್ರಸ್ತಂ ದಾನವಂ ಪ್ರತಿ ।
ವಿರರಾಮ ಮಹಾತೇಜಾಃ ಸ್ವಕಾರ್ಯಾಯೋದ್ಯತೋಽಭವತ್ ॥ ೪೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ಅಷ್ಟಾದಶಾಧಿಕಶತತಮೋಽಧ್ಯಾಯಃ



---

೩೮. ಆ ಕಾಮೋದಪಟ್ಟಣದಲ್ಲಿ ದಿವ್ಯಭೋಗಗಳಿಂದ ಕೂಡಿದ, ಆಭರಣಗಳಿಂದಲಂಕೃತಳಾದ, ದೇವತಾಪೂಜ್ಯಳಾದ ಆ ನಾರಿಯು ಇರುವಳು.

೩೯. ನೀನು ಆ ಊರಿಗೆ ಹೋಗು. ಅಲ್ಲಿರುವ ಅಪ್ಸರಸ್ತ್ರೀಯರನ್ನು ಗೌರವಿಸು. ಒಳ್ಳೊಳ್ಳೆಯ ಉಪಾಯಗಳಿಂದ ಆಕೆಯನ್ನು ನಗಿಸು.

೪೦. ಈ ರೀತಿಯಾಗಿ ಶುಕ್ರನು ಆ ವಿಹುಂಡನಿಗೆ ಹೇಳಿ, ಸುಮ್ಮನಾಗಿ ತನ್ನ ಕೆಲಸದಲ್ಲಿ ತೊಡಗಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕೋನವಿಂಶತ್ಯಧಿಕಶತತಮೋಽಧ್ಯಾಯಃ

---

॥ ಕಪಿಂಜಲ ಉವಾಚ ॥

ಏತಸ್ಯಾ ಹಸನಾತ್ತಾತ ಸುಪುಷ್ಪಾಣಿ ಭವಂತಿ ವೈ ।
ಪುಣ್ಯಾನಿ ದಿವ್ಯಗಂಧೀನಿ ದುರ್ಲಭಾನಿ ಸುರಾಸುರೈಃ ॥ ೧ ॥

ಕಸ್ಮಾತ್ತಾ ದೇವತಾಸ್ಸರ್ವಾಃ ಪ್ರವಾಂಛಂತಿ ಮಹಾಮತೇ ।
ಶಂಕರಸ್ತೋಷಮಾಯಾತಿ ಹಾಸ್ಯಪುಷ್ಪೈಸ್ಸುಪೂಜಿತಃ ॥ ೨ ॥

ಕೋ ಗುಣಸ್ತಸ್ಯ ಪುಷ್ಪಸ್ಯ ತನ್ಮೇ ಕಥಯ ವಿಸ್ತರಾತ್ ।
ಗಂಗಾಸಮಾಗಮೇ ಪುಣ್ಯೇ ವಾರಾಣಸ್ಯಾಶ್ಚ ಮಧ್ಯಗೇ ॥ ೩ ॥

ಕಾಮೋದಾ ಸಾ ಭವೇತ್ತಾತ ತು ಕಸ್ಯ ಪುತ್ರೀ ವರಾಂಗನಾ ।
ಹಾಸಾತ್ತಸ್ಯಾ ಮಹಾಭಾಗ ಪುಷ್ಪಾಣಿ ಪ್ರಭವಂತಿ ಚ ॥ ೪ ॥

---

## ನೂರ ಹತ್ತೊಂಭತ್ತನೆಯ ಅಧ್ಯಾಯವು

೧-೩. ಕಪಿಂಜಲನು ಹೇಳಿದನು:—ಎಲೈ ತಂದೆಯೇ, ಈಕೆ ನಗುವುದರಿಂದ ಚನ್ನಾಗಿಯೂ ವಾಸನೆಯಾಗಿಯೂ ಇರುವ ಹೂಗಳು ಹುಟ್ಟಲು ಕಾರಣವೇನು? ಎಲ್ಲಾ ದೇವತೆಗಳೂ ಅದನ್ನೇ ಏಕೆ ಅಪೇಕ್ಷಿಸುತ್ತಾರೆ? ಆ ನಗುವಿನ ಹೂವುಗಳನ್ನು ಪೂಜೆಮಾಡಿದರೆ ಶಂಕರನೇಕೆ ಸಂತುಷ್ಟನಾಗುತ್ತಾನೆ? ಆ ಹೂವಿನ ಗುಣಗಳೇನು? ಎಂಬುದನ್ನು ವಿಸ್ತಾರವಾಗಿ ಹೇಳು.

೪-೫. ವಾರಾಣಸಿಯ ಮಧ್ಯದಲ್ಲಿ ಗಂಗಾಸಮಾಗಮದಲ್ಲಿ ಇರುವ ಕಾಮೋದ

**ಕಿಂ ಗುಣಂ ತತ್ಫಲಂ ಬ್ರೂಹಿ ಸಕಲಂ ವಿಸ್ತರೇಣ ಚ ॥ ೫ ॥**

**॥ ಕುಂಜಲ ಉವಾಚ ॥**

**ಪುರಾ ದೇವೈರ್ಮಹಾದೈತ್ಯೈಃ ಕೃತ್ವಾ ಸೌಹಾರ್ದಮುತ್ತಮಂ ।**
**ಅಮೃತಾರ್ಥೇ ಪ್ರಮಥಿತಂ ಸಾಗರಕ್ಷೀರಮುದ್ಧೃತೈಃ ॥ ೬ ॥**

**ಮಥನಾದ್ದೇವದೈತ್ಯಾನಾಂ ಕನ್ಯಾರತ್ನಚತುಷ್ಟಯಂ ।**
**ವರುಣೇನ ದರ್ಶಿತಂ ಪೂರ್ವಂ ಸೋಮೇನೈವ ತಥಾ ಪುನಃ ॥ ೭ ॥**

**ಪಶ್ಚಾತ್ಪ್ರದರ್ಶಿತಂ ಪುಣ್ಯಮಮೃತಂ ಕಲಶಸ್ಥಿತಂ ।**
**ಕನ್ಯಾಚತುಷ್ಟಯಂ ತತ್ರ ದೇವಾನಾಂ ಹಿತಮಿಚ್ಛತಿ ॥ ೮ ॥**

**ಸುಲಕ್ಷ್ಮೀರ್ನಾಮ ಸಾ ಚೈಕಾ ದ್ವಿತೀಯಾ ವಾರುಣೀ ತಥಾ ।**
**ಕಾಮೋದಾಖ್ಯಾ ಹೃತಾ ಯಾ ಚ ಶ್ರೇಷ್ಠಾ ಚೈವ ಚತುರ್ಥಿಕಾ ॥ ೯ ॥**

**ತಾಸಾಂ ಮಧ್ಯೇ ವರಾ ಶ್ರೇಷ್ಠಾ ಪೂರ್ವಂ ಜಾತಾ ಮಹಾಮತೇ ।**
**ತುಲಸೀತಿ ಸಮಾಖ್ಯಾತಾ ಲೋಕೇ ಪೂಜ್ಯಾ ಸದೈವ ಹಿ ॥ ೧೦ ॥**

---

ನೆಂಬುವಳಾರು ? ಯಾರ ಮಗಳು ? ಅವಳು ನಗುವುದರಿಂದ ಏಕೆ ಹೂ ಹುಟ್ಟು ವುದು ? ಅದರ ಗುಣವೇನು ? ಎಲ್ಲವನ್ನೂ ಹೇಳು.

೬. ಕುಂಜಲನು ಹೇಳಿದನು:—ಪೂರ್ವದಲ್ಲಿ ದೇವದಾನವರು ಸ್ನೇಹ ಬೆಳಸಿ ಕೊಂಡು ಅಮೃತಕ್ಕೋಸ್ಕರ ಕ್ಷೀರಸಾಗರವನ್ನು ಕಡೆದರು. ಆ ಕಡೆತದಿಂದ ನಾಲ್ವರು ಹೆಣ್ಣುಮಕ್ಕಳು ಹುಟ್ಟಿದರು.

೭-೮. ವರುಣನು, ಸೋಮನು, ಮೊದಲು ಈ ನಾಲ್ಕು ಜನ ಹೆಣ್ಣುಮಕ್ಕಳನ್ನು ತೋರಿಸಿದರು. ಅನಂತರ ಬಿಂದಿಗೆಯಲ್ಲಿರುವ ಅಮೃತವನ್ನು ತೋರಿಸಿದರು. ಈ ನಾಲ್ವರು ಹೆಂಗಸರೂ ದೇವತೆಗಳಿಗೆ ಹಿತವನ್ನು ಬಯಸತಕ್ಕವರು.

೯-೧೦. ಅವರಲ್ಲಿ ಮೊದಲನೆಯವಳು ಲಕ್ಷ್ಮಿಯು. ಎರಡನೆಯವಳು ವಾರುಣಿಯು. ಮೂರನೆಯವಳು ಕಾಮೋದೆಯು. ನಾಲ್ಕನೆಯವಳು ಶ್ರೇಷ್ಠೆಯು. ಈ ರೀತಿ ನಾಲ್ವರು ಕನ್ಯೆಯರು ಹುಟ್ಟಿದರು. ಇವರುಗಳೊಳಗೆ ಈ ಶ್ರೇಷ್ಠೆ ಎಂಬು ವಳು ಉತ್ತಮಳಾದವಳು. ಇವಳೇ ತುಳಸಿಯು. ಲೋಕದಲ್ಲಿ ಯಾವಾಗಲೂ ಪೂಜ್ಯಳಾಗಿದ್ದಾಳೆ.

**ನಿಪಾನರೂಪಾ ಸರ್ವೇಷಾಂ ಪಯಃಫೇನಸಮುದ್ಭವಾ ।**
**ಅಮೃತಸ್ಯ ತರಂಗಾಚ್ಚ ಕಾಮೋದಾಖ್ಯಾ ಬಭೂವ ಹ　　॥ ೧೧ ॥**

**ಸೋಮೋ ರಾಜಾ ತಥಾ ಲಕ್ಷ್ಮೀರ್ಜಜ್ಞಾತೇ ತ್ವಮೃತಾದಪಿ ।**
**ತ್ರೈಲೋಕ್ಯಭೂಷಣಂ ಸೋಮಃ ಸಂಜಾತಶ್ಶಂಕರಸ್ಯ ಹಿ　　॥ ೧೨ ॥**

**ಮೃತ್ಯುರೋಗಹರಾ ಜಾತಾ ಸುರಾಣಾಂ ವಾರುಣೀ ತಥಾ ।**
**ಜ್ಯೇಷ್ಠಾ ಸುಪುಣ್ಯದಾ ಜಾತಾ ಲೋಕಾನಾಂ ಹಿತಮಿಚ್ಛತಾಂ　　॥ ೧೩ ॥**

**ಅಮೃತಾದುತ್ಥಿತಾ ದೇವೀ ಕಾಮೋದಾ ನಾಮ ಪುಣ್ಯದಾ ।**
**ವಿಷ್ಣೋಃ ಪ್ರೀತ್ಯೈ ಭವಿಷ್ಯೇ ತು ವೃಕ್ಷರೂಪಂ ಪ್ರಯಾಸ್ಯತಿ　　॥ ೧೪ ॥**

**ವಿಷ್ಣುಪ್ರೀತಿಕರೀ ಸಾ ತು ಭವಿಷ್ಯತಿ ಸದೈವ ಹಿ ।**
**ತುಲಸೀ ನಾಮ ಸಾ ಪುಣ್ಯಾ ಭವಿಷ್ಯತಿ ನ ಸಂಶಯಃ　　॥ ೧೫ ॥**

---

೧೧. ನೀರಿನ ನೊರೆಗಳಿಂದ ಹುಟ್ಟಿದ ಆ ವಾರುಣಿಯು ಎಲ್ಲರಿಗೂ ಕುಡಿಯುವುದಕ್ಕೆ ಯೋಗ್ಯಳಾದಳು. ಆ ನೀರಿನ ತೆರೆಗಳಿಂದ ಕಾಮೋದೆಯು ಹುಟ್ಟಿದಳು. ನೀರಿನಿಂದಲೇ ಚಂದ್ರನೂ ಲಕ್ಷ್ಮಿಯೂ ಹುಟ್ಟಿದರು.

೧೨. ಮೂರು ಲೋಕಗಳಿಗೂ ಅಲಂಕಾರಪ್ರಾಯನಾದ ಚಂದ್ರನು ಶಂಕರನಿಗೆ ಭೂಷಣನಾದನು.

೧೩. ವಾರುಣಿಯು ದೇವತೆಗಳಿಗೆ ರೋಗ ಸಾವುಗಳನ್ನು ನಾಶಮಾಡುವವಳಾದಳು. ಮೊದಲನೆಯ ಲಕ್ಷ್ಮಿಯು ಲೋಕಕ್ಕೆ ಹಿತೈಷಿಣಿಯಾಗಿ ಸಂಪತ್ತನ್ನು ಕೊಡುವವಳಾದಳು.

೧೪. ನೀರಿನಿಂದ ಹುಟ್ಟಿದ ಆ ಕಾಮೋದೆಯು ವಿಷ್ಣುವಿನ ಪ್ರೀತಿಗೋಸ್ಕರ ಮರವಾಗಿ ಆಗುತ್ತಾಳೆ.

೧೫. ಅವಳು ವಿಷ್ಣುವಿನ ಪ್ರೀತಿಗೆ ಯಾವಾಗಲೂ ಪಾತ್ರಳಾಗುತ್ತಾಳೆ. ಆಕೆಯು ತುಳಸಿ ಎಂಬ ಹೆಸರನ್ನು ಹೊಂದುತ್ತಾಳೆ. ಸಂಶಯವಿಲ್ಲ. ಆ ತುಳಸಿ ಯೊಡನೆ ವಿಷ್ಣುವು ರಮಿಸುತ್ತಾನೆ. ಸಂಶಯವಿಲ್ಲ.

ತಯಾ ಸಹ ಜಗನ್ನಾಥೋ ರಮಿಷ್ಯತಿ ನ ಸಂಶಯಃ ।
ತುಲಸ್ಯಾಃ ಪತ್ರಮೇಕಂ ಯೋ ನೀತ್ವಾ ಕೃಷ್ಣಾಯ ದಾಸ್ಯತೀ ॥ ೧೬ ॥

ಸ ಮೇನೇಽಸ್ಯೋಪಕಾರಂ ತು ಕಿಮಸ್ಮೈ ಪ್ರದದಾಮ್ಯಹಂ ।
ಇತ್ಯೇವಂ ಚಿಂತಯಿತ್ವಾ ತು ತಸ್ಯ ಪ್ರೀತಿಕರೋ ಭವೇತ್ ॥ ೧೭ ॥

ಏವಂ ಕಾಮೋದನಾಮ್ನ್ಯಾಸೌ ಪೂರ್ವಕನ್ಯಾಚತುಷ್ಟಯೇ ।
ಯದಾ ಸಾ ಹಸತೇ ದೇವೀ ಹರ್ಷಾದ್ಗದ್ಗದಭಾಷಿಣೀ ॥ ೧೮ ॥

ಸೌವರ್ಣಾನಿ ಸುಗಂಧೀನಿ ಮುಖಾತ್ತಸ್ಯಾಃ ಪತಂತಿ ಚ ।
ಅಮ್ಲಾನಾನಿ ಸುಪುಣ್ಯಾನಿ ತಾನಿ ಸಂಗೃಹ್ಯ ಯತ್ನತಃ ॥ ೧೯ ॥

ಯೋಽರ್ಚಯೇಚ್ಛಂಕರಂ ದೇವಂ ಬ್ರಹ್ಮಾಣಂ ಮಾಧವಂ ತಥಾ ।
ತಸ್ಯ ದೇವಾಃ ಪ್ರತುಷ್ಯಂತಿ ಯಂ ಯಮಿಚ್ಛತಿ ತತ್ಪ್ರದಾಃ ॥ ೨೦ ॥

ರೋದಿತ್ಯೇಷಾ ಯದಾ ಸಾ ಚ ಕೇನ ದುಃಖೇನ ದುಃಖಿತಾ ।
ನೇತ್ರಾಶ್ರುಭ್ಯೋ ಹಿ ತಸ್ಯಾಸ್ತು ಪ್ರಭವಂತಿ ಪತಂತಿ ಚ ॥ ೨೧ ॥

---

೧೬-೧೭. ತುಳಸಿಯ ಒಂದು ದಳವನ್ನಾದರೂ ಕೃಷ್ಣನಿಗೆ ಪೂಜಿಸಿದರೆ, ಆ ಕೃಷ್ಣನು ಇವನಿಗೆ ಏನು ಉಪಕಾರ ಮಾಡಲೆಂದು ಯೋಚಿಸುತ್ತಾ ಅವನಲ್ಲಿ ಪ್ರೀತಿಯನ್ನಿಡುತ್ತಾನೆ.

೧೮-೨೦. ಆ ನಾಲ್ಕುಜನ ಹೆಣ್ಣುಮಕ್ಕಳಲ್ಲಿ ಕಾಮೋದೆಯು ಈ ರೀತಿಯಾದವಳು. ಇವಳು ಸಂತೋಷದಿಂದ ನಗುತ್ತ ಗದ್ಗದ ಮಾತನಾಡುತ್ತಿದ್ದಾಗ ಅವಳ ಬಾಯಿನಿಂದ ಸುವಾಸನೆಯಾದ ಬಾಡದ ಹೂಗಳು ಉದುರುತ್ತವೆ. ಅದನ್ನು ಆರಿಸಿಕೊಂಡು ತ್ರಿಮೂರ್ತಿಗಳಲ್ಲಿ ಯಾವನನ್ನು ಪೂಜಿಸಿದರೂ ದೇವತೆಗಳೆಲ್ಲಾ ಅವನಿಗೆ ಪ್ರಸನ್ನರಾಗಿ ಕೇಳಿದುದನ್ನು ಕೊಡುತ್ತಾರೆ.

೨೧. ಇವಳು ಯಾವುದಾದರೂ ಕಾರಣದಿಂದ ಅತ್ತಾಗ ಕಣ್ಣೀರಿನಿಂದ ಹೂಗಳು ಹುಟ್ಟಿ ಬೀಳುತ್ತವೆ. ಅವು ಮನೋಹರವಾಗಿಯೂ ಅಸಾಧ್ಯವಾಗಿಯೂ ಇರುತ್ತವೆ.

**ತಾನಿ ಚೈವ ಮಹಾಭಾಗ ಹೃದ್ಯಾನಿ ಸುಮಹಾಂತಿ ಚ ।**
**ಸೌರಭೇಣ ವಿನಾ ತೈಸ್ತು ಯಃ ಪೂಜಯತಿ ಶಂಕರಂ ॥ ೨೨ ॥**

**ತಸ್ಯ ದುಃಖಂ ಚ ಸಂತಾಪೋ ಜಾಯತೇ ನಾತ್ರ ಸಂಶಯಃ ।**
**ಪುಷ್ಪೈಸ್ತು ತಾದೃಶೈರ್ದೇವಾನ್ ಸಕೃದರ್ಚತಿ ಪಾಪಧೀಃ ॥ ೨೩ ॥**

**ತಸ್ಯ ದುಃಖಂ ಪ್ರಕುರ್ವಂತಿ ದೇವಾಸ್ತತ್ರ ನ ಸಂಶಯಃ ।**
**ಏತತ್ತೇ ಸರ್ವಮಾಖ್ಯಾತಂ ಕಾಮೋದಾಖ್ಯಾನಮುತ್ತಮಂ ॥ ೨೪ ॥**

**ಅಥ ಕೃಷ್ಣೋ ವಿಚಿಂತ್ಯೈವ ದೃಷ್ಟ್ವಾ ವಿಕ್ರಮಸಾಹಸಂ ।**
**ವಿಹುಂಡಸ್ಯಾಪಿ ಪಾಪಸ್ಯ ಉದ್ಯಮಂ ಸಾಹಸಂ ತದಾ ॥ ೨೫ ॥**

**ನಾರದಂ ಪ್ರೇಷಯಾಮಾಸ ಮೋಹಯ್ಯೈನಂ ದುರಾಸದಂ ।**
**ನಾರದಸ್ತ್ವಥ ಸಂಶ್ರುತ್ಯ ವಾಕ್ಯಂ ವಿಷ್ಣೋರ್ಮಹಾತ್ಮನಃ ॥ ೨೬ ॥**

**ಗಚ್ಛಮಾನಂ ದುರಾತ್ಮಾನಂ ಕಾಮೋದಾಂ ಪ್ರತಿ ದಾನವಂ ।**
**ಗತ್ವಾ ತಮಾಹ ದೈತ್ಯೇಂದ್ರಂ ನಾರದಃ ಪ್ರಹಸನ್ನಿವ ॥ ೨೭ ॥**

---

೨೨. ಅವು ಅಷ್ಟು ಚನ್ನಾಗಿದ್ದರೂ ವಾಸನೆಯಿರುವುದಿಲ್ಲ. ಅಂತಹ ನಿರ್ಗಂಧ ಕುಸುಮಗಳಿಂದ ಅವರನ್ನು ಪೂಜಿಸಿದರೆ ಅವನಿಗೆ ದುಃಖವೂ ಸಂತಾಪವೂ ಉಂಟಾಗುತ್ತದೆ. ಸಂಶಯವಿಲ್ಲ.

೨೩-೨೪. ಆ ಹೂಗಳಿಂದ ದೇವತೆಗಳನ್ನು ಒಂದುಸಾರಿ ಪೂಜಿಸಿದರೂ ಸರಿ. ಅವನಿಗೆ ದೇವತೆಗಳು ದುಃಖವನ್ನು ಕೊಡುತ್ತಾರೆ. ಸಂಶಯವಿಲ್ಲ. ಕಾಮೋದೆಯ ಈ ವೃತ್ತಾಂತವೆಲ್ಲವನ್ನೂ ಹೇಳಿದ್ದೇನೆ.

೨೫. ಆ ಮೇಲೆ ಇದನ್ನು ಶ್ರೀ ಕೃಷ್ಣನು ಯೋಚಿಸಿ ವಿಹುಂಡನ ಸಾಹಸವನ್ನೂ, ಉದ್ಯೋಗವನ್ನೂ ತಿಳಿದು ನಾರದನನ್ನು, ವಿಹುಂಡನಿಗೆ ಬುದ್ಧಿ ಬದಲಾಯಿಸುವಂತೆ ಮಾಡಲು ಕಳುಹಿಸಿದನು.

೨೬-೨೭. ವಿಷ್ಣುವಿನ ಮಾತನ್ನು ನಾರದನು ಕೇಳಿ, ಕಾಮೋದೆಯನ್ನು ಕುರಿತು ಹೋಗುತ್ತಿರುವ, ದುಷ್ಟನಾದ ವಿಹುಂಡನ ಬಳಿಗೆ ಹೋಗಿ ನಗುತ್ತ ಇಂತೆಂದನು.

ಕ್ವ ಯಾಸಿ ತ್ವಂ ಹಿ ದೈತ್ಯೇಂದ್ರ ಸತ್ವರಸ್ತು ಸಮಾತುರಃ ।
ಸಾಂಪ್ರತಂ ಕೇನ ಕಾರ್ಯೇಣ ಕಸ್ಯಾರ್ಥಂ ಕೇನ ನೋದಿತಃ ॥ ೨೮ ॥

ಬ್ರಹ್ಮಾತ್ಮಜಂ ನಮಸ್ಕೃತ್ಯ ಪ್ರತ್ಯುವಾಚ ಕೃತಾಂಜಲಿಃ ।
ಕಾಮೋದಪುಷ್ಪಾರ್ಥಮಹಂ ಪ್ರಸ್ಥಿತೋಽಸ್ಮಿ ದ್ವಿಜೋತ್ತಮ ॥ ೨೯ ॥

ತಮುವಾಚ ಸ ಧರ್ಮಾತ್ಮಾ ಪುಷ್ಪೈಃ ಕಿಂ ತೇ ಪ್ರಯೋಜನಂ ।
ವಿಪ್ರವರ್ಯಂ ಪುನಃ ಪ್ರಾಹ ಕಾರ್ಯಕಾರಣಮಾತ್ಮನಃ ॥ ೩೦ ॥

ನಂದನಾಖ್ಯೇ ವನೇ ಪುಣ್ಯೇ ಕಾಚಿನ್ನಾರೀ ವರಾನನಾ ।
ತಸ್ಯಾ ದರ್ಶನಮಾತ್ರೇಣ ಗತೋಽಹಂ ಕಾಮವಶ್ಯತಾಂ ॥ ೩೧ ॥

ತಯಾ ಪ್ರೋಕ್ತೋಽಸ್ಮಿ ವಿಪ್ರೇಂದ್ರ ಪುಷ್ಪೈಃ ಕಾಮೋದಸಂಭವೈಃ ।
ಪೂಜಯಸ್ವ ಮಹಾದೇವಂ ಪುಷ್ಪೈಸ್ತೈಸ್ಸಪ್ತಕೋಟಿಭಿಃ ॥ ೩೨ ॥

ತತಸ್ತೇ ಸುಪ್ರಿಯಾ ಭಾರ್ಯಾ ಭವಿಷ್ಯಾಮಿ ನ ಸಂಶಯಃ ।
ತದರ್ಥಂ ಪ್ರಸ್ಥಿತೋಽಸ್ಮ್ಯದ್ಯ ಕಾಮೋದಾಖ್ಯಂ ಪುರಂ ಪ್ರತಿ ॥ ೩೩ ॥

---

೨೮. ಎಲೈ ದೈತ್ಯೇಂದ್ರನೇ, ಎಲ್ಲಿ ಹೋಗುತ್ತೀಯೆ? ಅವಸರದಿಂದ ಹೋಗುತ್ತಿರುವೆಯಲ್ಲ; ಏನು ಕೆಲಸ? ಯಾವುದಕ್ಕೋಸ್ಕರ? ಯಾರು ಹೇಳಿದರು?

೨೯. ಆ ವಿಹುಂಡನು ನಾರದನನ್ನು ನಮಸ್ಕರಿಸಿ ಕೈಮುಗಿದುಕೊಂಡು, ಎಲೈ ನಾರದನೇ, ಕಾಮೋದ ಪುಷ್ಪಕ್ಕೋಸ್ಕರ ಹೋಗುತ್ತಿದ್ದೇನೆ ಎಂದನು.

೩೦. ಆಗ ನಾರದನು ಈ ಪುಷ್ಪಗಳಿಂದ ನಿನಗೇನು ಪ್ರಯೋಜನವೆಂದನು. ಆಗ ಆ ವಿಹುಂಡನು ತನ್ನ ಕೆಲಸದ ಕಾರಣಗಳನ್ನು ಹೇಳಿದನು.

೩೧. ನಂದನವನದಲ್ಲಿ ಓರ್ವ ಸುಂದರಿಯನ್ನು ನೋಡಿದೆನು. ನೋಡಿದೊಡನೆಯೇ ಕಾಮಬಾಧೆಗೊಳಗಾದೆನು.

೩೨-೩೩. ಕಾಮೋದೆಯಿಂದ ಹುಟ್ಟಿದ ಹೂಗಳನ್ನು ಏಳು ಕೋಟಿಗಳನ್ನು ಆರಿಸಿ ಅದರಿಂದ ಮಹಾದೇವನನ್ನು ಪೂಜಿಸಿ ನನಗೆ ಹಾರ ಕಟ್ಟಿಕೊಟ್ಟರೆ ಆಗ ನಿನಗೆ ಪ್ರೀತಿಪಾತ್ರಳಾಗುವೆನು ಎಂದಳು. ಅದಕ್ಕೋಸ್ಕರ ಕಾಮೋದಪುರಕ್ಕೆ ಹೊರಟಿದ್ದೇನೆ. ಎಂದು ವಿಹುಂಡನು ಹೇಳಿದನು.

ತಾಮಹಂ ಕಾಮಯಿಷ್ಯಾಮಿ ಸಿಂಧುಜಾಂ ಶೃಣು ಸತ್ತಮ ।
ಮನೋಹರೈರ್ಮಹಾಹಾಸ್ಯೈರ್ಹಾಸಯಿಷ್ಯಾಮ್ಯಹಂ ಪುನಃ ॥ ೩೪ ॥

ಪ್ರೀತಾ ಸತೀ ಮಹಾಭಾಗ ಹಸಿಷ್ಯತಿ ಪುನಃ ಪುನಃ ।
ತದ್ಧಾಸ್ಯಂ ಗದ್ಗದಂ ವಿಪ್ರ ಮಮ ಕಾರ್ಯಪ್ರವರ್ಧನಂ ॥ ೩೫ ॥

ತಸ್ಯಾ ಹಾಸ್ಯಾತ್ಪತಿಷ್ಯಂತಿ ದಿವ್ಯಾನಿ ಕುಸುಮಾನಿ ಚ ।
ತೈಸ್ತು ದೇವಮುಮಾಕಾಂತಂ ಪೂಜಯಿಷ್ಯಾಮಿ ಸಾಂಪ್ರತಂ ॥ ೩೬ ॥

ತೇನ ಪೂಜಾಪ್ರದಾನೇನ ತುಷ್ಟೋ ದಾಸ್ಯತಿ ಮೇ ಫಲಂ ।
ಈಶ್ವರಃ ಸರ್ವಭೂತೇಶಃ ಶಂಕರೋ ಲೋಕಭಾವನಃ ॥ ೩೭ ॥

॥ ನಾರದ ಉವಾಚ ॥

ತತ್ರ ದೈತ್ಯ ನ ಗಂತವ್ಯಂ ಕಾಮೋದಾಖ್ಯೇ ಪುರೋತ್ತಮೇ ।
ವಿಷ್ಣುರಸ್ತಿ ಸ ಮೇಧಾವೀ ಸರ್ವದೇವಜಯಾವಹಃ ॥ ೩೮ ॥

ಯೇನೋಪಾಯೇನ ಪುಷ್ಪಾಣಿ ಕಾಮೋದಾಖ್ಯಾನಿ ದಾನವ ।
ತವ ಹಸ್ತೇ ಪ್ರಯಾಸ್ಯಂತಿ ತದುಪಾಯಂ ವದಾಮ್ಯಹಂ ॥ ೩೯ ॥

---

೩೪. ಆ ಸಮುದ್ರರಾಜನ ಮಗಳನ್ನು ನಾನು ಮೋಹಿಸಿದ್ದೇನೆ. ಆದ್ದರಿಂದ ಆಕೆಯನ್ನು ಮನೋಹರವಾದ ಹಾಸ್ಯದ ಮಾತುಗಳಿಂದ ನಗಿಸುತ್ತೇನೆ.

೩೫. ಆಕೆಯು ಸಂತೋಷಪಟ್ಟು ಬಾರಿಬಾರಿಗೂ ನಗುತ್ತಾಳೆ. ಆ ನಗುವೂ ಗದ್ಗದವಾದ ಮಾತೂ ನನ್ನ ಕೆಲಸವನ್ನು ಆಗಮಾಡುತ್ತವೆ.

೩೬. ಅವಳ ನಗುವಿನಿಂದ ಒಳ್ಳೆಯ ಹೂಗಳು ಬೀಳುತ್ತವೆ. ಅವುಗಳಿಂದ ಸ್ವಾಮಿಯಾದ ಶಿವನನ್ನು ಪೂಜಿಸುತ್ತೇನೆ.

೩೭. ಆ ಪೂಜೆಯಿಂದ ತುಷ್ಟನಾಗಿ ಈಶ್ವರನು ನನಗೆ ಫಲವನ್ನು ಕೊಡು ತ್ತಾನೆ.

೩೮. ನಾರದನು ಹೇಳಿದನು:—ಎಲೈ ದೈತ್ಯನೇ, ಅಲ್ಲಿಗೆ ಹೋಗಬೇಡ. ಅಲ್ಲಿ ಜಯಶೀಲನಾದ ವಿಷ್ಣುವಿರುವನು.

೩೯. ಯಾವ ಉಪಾಯವನ್ನು ಮಾಡಿದರೆ ಆ ಕಾಮೋದೆಯ ಹೂಗಳು ನಿನ್ನ ಕೈಗೆ ಬರುತ್ತವೋ ಆ ಉಪಾಯವನ್ನು ಹೇಳುತ್ತೇನೆ. ಕೇಳು.

ಗಂಗಾತೋಯೇಷು ದಿವ್ಯಾನಿ ಪತಿತಾನಿ ನ ಸಂಶಯಃ ।
ಪ್ರವಾಹಸ್ಯ ಜಲೈಃ ಪುಣ್ಯೈರಾಗಮಿಷ್ಯಂತಿ ಸಾಂಪ್ರತಂ ॥ ೪೦ ॥

ತಾನಿ ತ್ವಂ ಪ್ರತಿಗೃಹಾಣ ಸುಹೃದ್ಯಾನಿ ಮಹಾಂತಿ ಚ ।
ಗೃಹೀತ್ವಾ ತಾನಿ ಪುಷ್ಪಾಣಿ ಸಾಧಯಸ್ವ ಹಿ ವಾಂಛಿತಂ ॥ ೪೧ ॥

ನಾರದೋ ದಾನವಶ್ರೇಷ್ಠಂ ಮೋಹಯಿತ್ವಾ ತತಃ ಪುನಃ ।
ಚಿಂತಯಾಮಾಸ ಧರ್ಮಾತ್ಮಾ ಕಥಂ ಕಾರ್ಯಂ ಮಯಾಧುನಾ ॥ ೪೨ ॥

ಕಥಮಶ್ರೂಣಿ ಸಾ ಮುಂಚೇತ್ ಕೇನೋಪಾಯೇನ ದುಃಖಿತಾ ।
ಚಿಂತಯಾನಸ್ಯ ತಸ್ಯೈವಂ ಕ್ಷಣಂ ವೈ ನಾರದಸ್ಯ ಚ ॥
ತತೋ ಬುದ್ಧಿಸ್ಸಮುತ್ಪನ್ನಾ ಕಾಮೋದಾಖ್ಯಂ ಪುರಂ ಗತಃ ॥ ೪೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ಏಕೋನವಿಂಶತ್ಯಧಿಕಶತತಮೋಽಧ್ಯಾಯಃ

---

೪೦-೪೧. ಆಕೆಯ ಹೂಗಳು ಗಂಗೆಯ ನೀರಿನಲ್ಲಿ ಬಿದ್ದು ಪ್ರವಾಹದಿಂದ ಕೊಚ್ಚಿಕೊಂಡು ಬರುತ್ತವೆ. ಅವು ಉತ್ತಮವಾಗಿ ಚನ್ನಾಗಿರುತ್ತವೆ. ಅವನ್ನು ತೆಗೆದುಕೊಂಡು ಶಂಕರನನ್ನು ಪೂಜಿಸಿ ನಿನ್ನ ಇಷ್ಟಾರ್ಥವನ್ನು ಸಾಧಿಸಿಕೋ.

೪೨. ನಾರದನು ಆ ದಾನವನಿಗೆ ಇಂತೆಂದು ಹೇಳಿ ಈಗ ಮುಂದಿನ ಕಾರ್ಯ ಕ್ಕೋಸ್ಕರ ಯೋಚಿಸಿದನು.

೪೩. ಆಕೆಯು ದುಃಖಗೊಂಡು ಸಂಕಟದಿಂದ ಹೇಗೆತಾನೆ ಅತ್ತು ಕಣ್ಣೀರನ್ನು ಬಿಟ್ಟಾಳು. ಎಂದು ಯೋಚಿಸುತ್ತಿರಲು ನಾರದನಿಗೆ ಒಂದು ವಿಧವಾದ ಉಪಾಯವು ಹೊಳೆದು ಕಾಮೋದಪುರಕ್ಕೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವಿಂಶತ್ಯಧಿಕಶತತಮೋಽಧ್ಯಾಯಃ

॥ ಕುಂಜಲ ಉವಾಚ ॥

ಕಾಮೋದಾಖ್ಯಂ ಪುರಂ ದಿವ್ಯಂ ಸರ್ವದೇವಸಮಾಕುಲಂ ।
ಸರ್ವಕಾಮಸಮೃದ್ಧ್ಯರ್ಥಮಪಶ್ಯನ್ನಾರದಸ್ತತಃ ॥ ೧ ॥

ಕಾಮೋದಾಯಾ ಗೃಹಂ ಪ್ರಾಪ್ಯ ಪ್ರವಿವೇಶ ದ್ವಿಜೋತ್ತಮಃ ।
ಕಾಮೋದಾಂ ತು ತತೋ ದೃಷ್ಟ್ವಾ ಸರ್ವಕಾಮಸಮಾಕುಲಾಂ ॥ ೨ ॥

ತಯಾ ಸಂಪೃಚ್ಛಿತೋ ವಿಪ್ರಃ ಸುವಾಕ್ಯೈಸ್ಸ್ವಾಗತಾದಿಭಿಃ ।
ದಿವ್ಯಾಸನೇ ಸಮಾರೂಢಸ್ತಾಂ ಪಪ್ರಚ್ಛ ದ್ವಿಜೋತ್ತಮಃ ॥ ೩ ॥

---

## ನೂರ ಇಪ್ಪತ್ತನೆಯ ಅಧ್ಯಾಯವು

೧. ಕುಂಜಲನು ಹೇಳಿದನು:—ಸಮಸ್ತ ದೇವತೆಗಳಿಂದ ಕೂಡಿದ, ಎಲ್ಲಾ ವಿಷಯದಲ್ಲಿಯೂ ಸಮೃದ್ಧಿಯನ್ನು ಹೊಂದಿರುವ ಕಾಮೋದವೆಂಬ ಪಟ್ಟಣವನ್ನು ನಾರದನು ನೋಡಿದನು.

೨. ಅಲ್ಲಿ ಕಾಮೋದೆಯ ಮನೆಯನ್ನು ನೋಡಿ ಆ ನಾರದನು ಒಳಹೊಕ್ಕನು. ಅಲ್ಲಿ ಎಲ್ಲಾ ಇಚ್ಛೆಗಳಿಂದಲೂ ಪರಿಪೂರ್ಣಳಾದ ಆ ಕಾಮೋದೆಯನ್ನು ನೋಡಿದನು.

೩. ಆಕೆಯು ಆತನನ್ನು ಪ್ರಿಯವಾದ ಮಾತಿನಿಂದ ಸ್ವಾಗತವನ್ನು ಕೇಳಿದಳು. ಅನಂತರ ಉತ್ತಮವಾದ ಪೀಠದಲ್ಲಿ ಕುಳಿತುಕೊಂಡನು. ಆ ಮೇಲೆ ಆಕೆಯನ್ನು ಕುರಿತು ಇಂತೆಂದನು.

ಸುಖೇನ ಸ್ಥೀಯತೇ ಭದ್ರೇ ವಿಷ್ಣುತೇಜಸ್ಸಮುದ್ಭವೇ ।
ಅನಾಮಯಂ ಚ ಪ್ರಪಚ್ಛ ಆಶೀರ್ಭಿರಭಿನಂದ್ಯ ತಾಂ ॥ ೪ ॥

॥ ಕಾಮೋದೋವಾಚ ॥

ಪ್ರಸಾದಾದ್ಭವತಾಂ ವಿಷ್ಣೋಃ ಸುಖೇನ ವರ್ತಯಾಮ್ಯಹಂ ।
ಕಥಯಸ್ವ ಮಹಾಭಾಗ ತ್ವಂ ಪ್ರಶ್ನೋತ್ತರಕಾರಣಂ ॥ ೫ ॥

ಮಹಾಮೋಹಸ್ಸಮುತ್ಪನ್ನೋ ಹ್ಯಕಸ್ಮಾನ್ಮುನಿಪುಂಗವ ।
ವ್ಯಾಪಕಸ್ಸರ್ವಲೋಕಾನಾಂ ಮಮಾಂಗಮತಿನಾಶಕಃ ॥ ೬ ॥

ತಸ್ಮಾನ್ನಿದ್ರಾ ಸಮುತ್ಪನ್ನಾ ಯಥಾ ಮರ್ತ್ಯೇ ಪ್ರವರ್ತತೇ ।
ಸುಪ್ತಯಾ ತು ಮಯಾ ದೃಷ್ಟಃ ಸ್ವಪ್ನೋ ವೈ ದಾರುಣೋ ಮುನೇ ॥ ೭ ॥

ಕೇನಾಪ್ಯುಕ್ತಂ ಸಮೇತ್ಯೈವಂ ಪುರತೋ ಮೇ ದ್ವಿಜೋತ್ತಮ ।
ಅವ್ಯಕ್ತೋ ಯೋ ಹೃಷಿಕೇಶಃ ಸಂಸಾರಂ ಸ ಗಮಿಷ್ಯತಿ ॥ ೮ ॥

---

೪. ಅವಳನ್ನು ಆಶೀರ್ವದಿಸಿ, ಅಮ್ಮಾ! ಇಲ್ಲಿ ಎಲ್ಲ ಸೌಖ್ಯವೂ ಇವೆಯೇ? ನೀನು ಆರೋಗ್ಯದಿಂದಿರುವೆಯಾ? ಎಂದು ಕೇಳಿದನು.

೫. ಕಾಮೋದೆಯು ಹೇಳಿದಳು :—ಎಲೈ ನಾರದನೇ, ತಮ್ಮ ಮತ್ತು ವಿಷ್ಣುವಿನ ಪ್ರಸಾದದಿಂದ ಸುಖವಾಗಿದ್ದೇನೆ. ದಯವಿಟ್ಟು ತಮ್ಮ ಪ್ರಶ್ನೋತ್ತರಗಳ ಕಾರಣವನ್ನು ತಿಳಿಸಿ.

೬. ಅಕಸ್ಮಾತ್ತಾಗಿ ಸರ್ವ ಜನಗಳನ್ನು ವ್ಯಾಪಿಸಿರುವ, ನನ್ನ ಬುದ್ಧಿಯನ್ನು ನಾಶಪಡಿಸುವ ಮಹಾಮೋಹವು ಉಂಟಾಗಿದೆ.

೭. ಮನುಷ್ಯರಿಗೆ ಉಂಟಾಗುವಂತೆಯೇ ಆ ಮೋಹದಿಂದ ನಿದ್ರೆಯು ಬಂದಿತು. ಅನಂತರ ಮಲಗಿದ ಮೇಲೆ ಉಗ್ರವಾದ ಸ್ವಪ್ನವನ್ನು ಕಂಡೆನು.

೮. ಸ್ವಾಮಿಯಾದ ಹೃಷಿಕೇಶನು ಸಂಸಾರಿಯಾಗುವನೆಂದು ಯಾವನೋ ಒಬ್ಬನು ಕನಸಿನಲ್ಲಿ ನನ್ನೆದುರಿಗೆ ಹೇಳಿದನು.

**ತದಾಪ್ರಭೃತಿ ದುಃಖೇನ ವ್ಯಾಪಿತಾಸ್ಮಿ ಮಹಾಮತೇ ।**
**ತನ್ಮೇ ತ್ವಂ ಕಾರಣಂ ಬ್ರೂಹಿ ಭವಾನ್ ಜ್ಞಾನವತಾಂ ವರಃ ॥ ೯ ॥**

**॥ ನಾರದ ಉವಾಚ ॥**

**ವಾತಿಕಃ ಪೈತ್ತಿಕಶ್ಚೈವ ಕಫಜಃ ಸಾನ್ನಿಪಾತಿಕಃ ।**
**ಸ್ವಪ್ನಃ ಪ್ರವರ್ತತೇ ಭದ್ರೇ ಮಾನವೇಷು ನ ಸಂಶಯಃ ॥ ೧೦ ॥**

**ನ ಜಾಯತೇ ಚ ದೇವೇಷು ಸ್ವಪ್ನೋ ನಿದ್ರಾ ಚ ಸುಂದರಿ ।**
**ಆದಿತ್ಯೋದಯವೇಳಾಯಾಂ ದೃಶ್ಯತೇ ಸ್ವಪ್ನ ಉತ್ತಮಃ ॥ ೧೧ ॥**

**ಸ ಸ್ವಪ್ನೋ ಮಾನವಾನಾಂ ಚ ಪುಣ್ಯಸ್ಯ ಫಲದಾಯಕಃ ।**
**ಅನ್ಯಚ್ಚೈವ ಪ್ರವಕ್ಷ್ಯಾಮಿ ಸ್ವಪ್ನಸ್ಯ ಕಾರಣಂ ಶುಭೇ ॥ ೧೨ ॥**

**ಮಹಾವಾತೋಲ್ಬಣೇ ಚೈವ ಚಲಂತ್ಯಾಪೋ ವರಾನನೇ ।**
**ತ್ರುಟಂತ್ಯಂಬುಕಣಾಃ ಸೂಕ್ಷ್ಮಾಸ್ತಸ್ಮಾದುದಕಸಂಚಯಾತ್ ॥ ೧೩ ॥**

---

೯. ಅದು ಮೊದಲ್ಗೊಂಡು ದುಃಖಿತಳಾಗಿದ್ದೇನೆ. ನೀನು ಜ್ಞಾನಿಗಳಲ್ಲಿ ಶ್ರೇಷ್ಠನಾದುದರಿಂದ ಅದಕ್ಕೆ ಕಾರಣವನ್ನು ದಯವಿಟ್ಟು ಹೇಳು.

೧೦. ನಾರದನು ಹೇಳಿದನು:—ವಾತದಿಂದಲೂ, ಪಿತ್ತದಿಂದಲೂ, ಕಫದಿಂದಲೂ, ಸನ್ನಿಪಾತದಿಂದಲೂ ಮನುಷ್ಯರಲ್ಲಿ ಸ್ವಪ್ನವು ಉಂಟಾಗುತ್ತದೆ. ದೇವತೆಗಳಿಗೆ ಸ್ವಪ್ನವಾಗಲಿ ನಿದ್ರೆಯಾಗಲಿ ಉಂಟಾಗುವುದಿಲ್ಲ.

೧೧-೧೨. ಸೂರ್ಯೋದಯದಲ್ಲಿ ಕಾಣುವ ಸ್ವಪ್ನವು ಉತ್ತಮವಾದುದು. ಆ ಸ್ವಪ್ನವು ಮನುಷ್ಯರಿಗೆ ಅವರ ಕರ್ಮದ ಫಲವನ್ನು ಕೊಡುತ್ತದೆ. ಸ್ವಪ್ನ ಬೀಳುವುದಕ್ಕೆ ಮತ್ತೊಂದು ಕಾರಣವನ್ನು ಹೇಳುತ್ತೇನೆ. ಕೇಳು.

೧೩. ಗಾಳಿಯು ಅತಿಯಾಗಿ ಬೀಸಿದರೆ ನೀರು ಅಲ್ಲಾಡುತ್ತದೆ. ಆಗ ಆ ನೀರಿನಿಂದ ಸಣ್ಣಸಣ್ಣ ನೀರಿನ ಕಣಗಳು ಮೇಲಕ್ಕೆ ಹಾರುತ್ತವೆ.

ಬಹಿರೇವ ಪತಂತ್ಯೇಶೇ ನಿರ್ಮಲಾಂಬುಕಣಾಶ್ಶುಭೇ ।
ಪುನರ್ಲಯಂ ಪ್ರಯಾಂತ್ಯೇತೇ ದೃಶ್ಯಾದೃಶ್ಯಾ ಭವಂತಿ ತೇ ॥ ೧೪ ॥

ತದ್ವತ್ಸ್ವಪ್ನಸ್ಯ ವೈ ಭಾವಃ ಕಥ್ಯತೇ ಶೃಣು ಭಾಮಿನಿ ।
ಆತ್ಮಾ ಶುದ್ಧೋ ನ ರಕ್ತಸ್ತು ರಾಗದ್ವೇಷವಿವರ್ಜಿತಃ ॥ ೧೫ ॥

ಪಂಚಭೂತಾತ್ಮಕಾನಾಂ ಚ ಮುಷಿತ್ವೈವ ಸುನಿಶ್ಚಲಃ ।
ಷಡ್ವಿಂಶತಿಸುತತ್ತ್ವಾನಾಂ ಮಧ್ಯೇ ಚೈವ ವಿರಾಜತೇ ॥ ೧೬ ॥

ಶುದ್ಧಾತ್ಮಾ ಕೇವಲೋ ನಿತ್ಯಃ ಪ್ರಕೃತೇಸ್ಸಂಗತಿಂ ಗತಃ ।
ತದ್ಭಾವೈರ್ವಾಯುರೂಪೈಶ್ಚ ಚಲತೇ ಸ್ಥಾನತೋ ಯದಾ ॥ ೧೭ ॥

ಆತ್ಮನಸ್ತೇಜಸಶ್ಚೈವ ಪ್ರತಿತೇಜಃ ಪ್ರಜಾಯತೇ ।
ಅಂತರಾತ್ಮಾ ಶುಭಂ ನಾಮ ತಸ್ಯ ಏವ ಪ್ರಕಥ್ಯತೇ ॥ ೧೮ ॥

ಪಯಸಶ್ಚ ಯಥಾಽ ಭಿನ್ನಾ ಭವಂತ್ಯಂಬುಕಣಾಶ್ಶುಭೇ ।
ಆತ್ಮನಸ್ತು ತಥಾ ತೇಜೋ ಹ್ಯಂತರಾತ್ಮಾ ಪ್ರಕಥ್ಯತೇ ॥ ೧೯ ॥

---

೧೪. ಆ ನಿರ್ಮಲವಾದ ಕಣಗಳು ನೀರಿನಿಂದ ಹೊರಗೆ ಬೀಳುತ್ತವೆ. ನಾಶವಾಗಿ ಕಂಡೂ ಕಾಣದಂತಿರುತ್ತವೆ. ಅದೇ ರೀತಿ ಸ್ವಪ್ನದ ರೀತಿಯೂ ಕೂಡ ಎಂಬುದಾಗಿ ತಿಳಿ.

೧೫. ಆತ್ಮನು ಶುದ್ಧನು. ಅವನು ಯಾರೊಡನೆಯೂ ಸೇರುವುದಿಲ್ಲ. ಪಂಚಭೂತಶರೀರದಿಂದಲೂ ಕದ್ದು ಬೇರೆಯಾಗಿ ನಿರ್ಮಲವಾಗಿದ್ದಾನೆ.

೧೬. ಇಪ್ಪತ್ತಾರು ತತ್ವಗಳ ಮಧ್ಯದಲ್ಲಿದ್ದುಕೊಂಡು ಪ್ರಕಾಶಿಸುತ್ತಾನೆ.

೧೭. ಶುದ್ಧನಾದ ಆತ್ಮನು ಪ್ರಕೃತಿಯ ಸಂಗಡ ಸೇರಿದರೆ ವಾಯುರೂಪದಿಂದ ಆತನು ತನ್ನ ಸ್ಥಾನದಿಂದ ಚಲಿಸುತ್ತಾನೆ. ಈಗ ಆತ್ಮತೇಜಸ್ಸಿನಿಂದ ಪ್ರತಿತೇಜಸ್ಸು ಹುಟ್ಟುತ್ತದೆ.

೧೮. ಆ ತೇಜಸ್ಸಿಗೆ ಅಂತರಾತ್ಮವೆಂದು ಹೆಸರು ಬರುತ್ತದೆ.

೧೯. ನೀರಿನ ಕಣಗಳನ್ನು ನೀರಿನಿಂದ ಬೇರೆಯಾದುವೆಂದು ಹೇಳುವಂತೆ ಆ ಆತ್ಮನ ಪ್ರತಿತೇಜಸ್ಸನ್ನು ಅಂತರಾತ್ಮನೆಂದೆನ್ನುತ್ತೇವೆ.

**ಸ ಹಿ ಪೃಥ್ವೀ ಸ ವೈ ವಾಯುಃ ಸ ಚಾಪ್ಯಾಕಾಶ ಏವ ಹಿ ।**
**ಸ ವೈ ತೇಜಶ್ಚ ದಿವ್ಯಂ ತು ಏತೇ ಪಂಚ ಪುರಾ ಕೃತಾಃ　　॥ ೨೦ ॥**

**ಆತ್ಮನಸ್ತೇಜಸೋ ಭೂತಾ ಮಲರೂಪಾ ಮಹಾತ್ಮನಃ ।**
**ತಸ್ಯಾಪಿ ಸಂಗತಿಂ ಪ್ರಾಪ್ಯ ಏಕತ್ವಂ ಚ ಪ್ರಯಾಂತಿ ತೇ　　॥ ೨೧ ॥**

**ಆತ್ಮಾಭಾವಪ್ರದೋಷೇಣ ನಾಶಯಂತಿ ವರಾನನೇ ।**
**ಮೃತ್ಪಿಂಡಮನ್ಯಮಿಚ್ಛಂತಿ ವಾರಂ ವಾರಂ ವರಾನನೇ　　॥ ೨೨ ॥**

**ತೇಷಾಂ ಕ್ರೀಡಾವಿಹಾರೋಽಯಂ ಸೃಷ್ಟಿಸಂಬಂಧಕಾರಣಂ ।**
**ಉದಕಸ್ಯ ತರಂಗಸ್ತು ಜಾಯತೇ ಚ ವಿಲೀಯತೇ　　॥ ೨೩ ॥**

**ಪುನರ್ಭೂತಿಃ ಪುನರ್ಹಾನಿಸ್ತಥಾ ದೃಶ್ಯಃ ಪುನಃ ಪುನಃ ।**
**ಅಪಾಂ ರೂಪಸ್ಯ ದೃಷ್ಟಾಂತಂ ತದ್ವದೇಷಾಂ ನ ಸಂಶಯಃ　　॥ ೨೪ ॥**

---

೨೦. ಆ ಆತ್ಮನೇ ಭೂಮಿ, ನೀರು, ಗಾಳಿ, ಬೆಳಕು, ಆಕಾಶಗಳನ್ನು ಸೃಷ್ಟಿಸಿದ್ದಾನೆ.

೨೧. ಅವು ಆತ್ಮನ ತೇಜೋರೂಪವಾದುವು. ಪರಮಾತ್ಮನ ಕೊಳಕುರೂಪವಾದುವು. ಅವು ಆತ್ಮನ ಸಹವಾಸವನ್ನು ಹೊಂದಿ ಒಂದಾಗುತ್ತವೆ.

೨೨. ಆತ್ಮನು ಅಲ್ಲಿಲ್ಲದಾಗ ಆ ಪಂಚಭೂತಗಳೂ ಬೇರೆಬೇರೆಯಾಗುತ್ತವೆ. ಹೀಗೆಯೇ ಬಾರಿಬಾರಿಗೂ ಬೇರೆಯಾದ ದೇಹವನ್ನು ಅಥವಾ ಸೇರುವಿಕೆಯನ್ನು ಹೊಂದುತ್ತವೆ. ಆ ಆತ್ಮಪ್ರಕೃತಿಗಳ ಆಟವೇ ಈ ಸೃಷ್ಟಿಯ ಕಾರಣವಾಗಿದೆ.

೨೩-೨೪. ನೀರಿನ ಅಲೆಗಳು ಹುಟ್ಟುತ್ತವೆ, ನಾಶವಾಗುತ್ತವೆ, ಮತ್ತೆ ಹುಟ್ಟುವವು, ಮತ್ತೆ ನಾಶವಾಗುವುವು, ತಿರುಗಿಯೂ ಕಾಣುವುದು. ನೀರಿನ ರೂಪವೇ ಇದಕ್ಕೆ ಸರಿಯಾದ ಉದಾಹರಣೆಯು. ಅದರಂತೆಯೇ ಈ ಪಂಚಭೂತಗಳು ಸೇರುತ್ತವೆ, ಬೇರೆಯಾಗುತ್ತವೆ; ಸೇರುತ್ತವೆ, ಬೇರೆಯಾಗುತ್ತವೆ. ಇದರಲ್ಲಿ ಸಂದೇಹವಿಲ್ಲ.

ಆತ್ಮಾ ನ ನಶ್ಯತೇ ದೇವಿ ತೇಜೋ ವಾಯುರ್ನ ನಶ್ಯತಿ ।
ನ ನಶ್ಯತೋ ಧರಾಕಾಶೌ ನ ನಶ್ಯಂತ್ಯಾಪ ಏವ ಚ ॥ ೨೫ ॥

ಪಂಚೈವ ಆತ್ಮನಾ ಸಾರ್ಧಂ ಪ್ರಭವಂತಿ ಪ್ರಯಾಂತಿ ಚ ।
ಆತ್ಮಾದಯೋ ಹ್ಯಮೀ ಭದ್ರೇ ನಿತ್ಯರೂಪಾ ನ ಸಂಶಯಃ ॥ ೨೬ ॥

ಪಿಂಡ ಏವ ಪ್ರಣಶ್ಯೇತ ತೇಷಾಂ ಸಂಜಾತ ಏವ ಚ ।
ವಿಷಯಾಣಾಂ ಸುದೋಷೈಶ್ಚ ರಾಗದ್ವೇಷಾದಿಭಿರ್ಹತಃ ॥ ೨೭ ॥

ಪ್ರಾಣಾಃ ಪ್ರಯಾಂತಿ ವೈ ಪಿಂಡಾತ್ಪಂಚ ಪಂಚಾತ್ಮಕಾ ದ್ವಿಜಾಃ ।
ಪಿಂಡಾಂತೇ ವಸತೇ ಆತ್ಮಾ ಪ್ರತಿರೂಪಃ ಸ್ಥಿತಃ ಸ ಚ ॥ ೨೮ ॥

ಅಂತರಾತ್ಮಾ ಯಥಾ ಚಾಗ್ನೇಃ ಸ್ಫುಲಿಂಗಸ್ತು ಪ್ರಕಾಶತೇ ।
ತಥಾ ಪ್ರಕಾಶಮಾಯಾತಿ ದೃಶ್ಯಾದೃಶ್ಯಃ ಪ್ರಜಾಯತೇ ॥ ೨೯ ॥

---

೨೫. ಆತ್ಮ, ತೇಜಸ್ಸು, ಗಾಳಿ, ಭೂಮಿ, ಆಕಾಶ, ನೀರು, ಇವು ಒಂದೂ ನಾಶವಾಗುವುದಿಲ್ಲ.

೨೬. ಈ ಪಂಚಭೂತಗಳೂ ಆತ್ಮದೊಡನೆ ಒಂದಾಗುತ್ತವೆ, ಬೇರೆಯಾಗುತ್ತವೆ. ಆತ್ಮ, ಪಂಚಭೂತಗಳು ಇವಕ್ಕೆ ನಾಶವಿಲ್ಲ. ಇವು ನಿತ್ಯಗಳೆಂಬುದರಲ್ಲಿ ಸಂಶಯವಿಲ್ಲ.

೨೭. ವಿಷಯಗಳಲ್ಲಿರುವ ದೋಷಗಳಿಂದಲೂ, ರಾಗದ್ವೇಷಗಳಿಂದಲೂ ಕೆಟ್ಟು ಹೋದ ಆ ಪಂಚಭೂತಗಳ ಪಿಂಡ ಮಾತ್ರ ನಾಶವಾಗುತ್ತದೆ. ಅದು ಸಮೂಹದಲ್ಲಿರುವುದು ಬೇರೆಯಾಗುವುದು ಮಾತ್ರ.

೨೮. ಆ ಪಿಂಡದಿಂದ ಪ್ರಾಣಿಗಳು ಹೊರಟುಹೋಗುತ್ತವೆ. ಆ ಐದು ಬೇರೆ ಬೇರೆಯಾಗುತ್ತವೆ. ಪಿಂಡ ಹೋದ ಮೇಲೂ ಆ ಆತ್ಮನೂ ಪ್ರತಿ ರೂಪವೂ ಇದ್ದೇ ಇರುತ್ತದೆ.

೨೯. ಬೆಂಕಿಯಿಂದ ಹೊರಹೊಮ್ಮುವ ಕಿಡಿಯಂತೆ ಅಂತರಾತ್ಮನು ಪ್ರಕಾಶಿತ್ತಾನೆ. ಅವನು ಕಂಡೂ ಕಾಣದಂತಿರುವನು.

**ಶುದ್ಧಶ್ಚಾತ್ಮಾ ಪರಂ ಬ್ರಹ್ಮ ಸದಾ ಜಾಗರ್ತಿ ನಿತ್ಯಶಃ ।**
**ಅಂತರಾತ್ಮಾ ಪ್ರಬದ್ಧಸ್ತು ಪ್ರಕೃತೇಶ್ಚ ಮಹಾಗುಣೈಃ ॥ ೩೦ ॥**

**ಅನ್ನಾಹಾರೈಸ್ತು ಸಂಪುಷ್ಟೈರಂತರಾತ್ಮಾ ಸುಖಂ ವ್ರಜೇತ್ ।**
**ಸುಸುಖಾಜ್ಜಾಯತೇ ಮೋಹಸ್ತಸ್ಮಾನ್ಮನಃ ಪ್ರಮುಹ್ಯತಿ ॥ ೩೧ ॥**

**ಪಶ್ಚಾತ್ಸಂಜಾಯತೇ ನಿದ್ರಾ ತಾಮಸೀ ಲಯವರ್ಧಿನೀ ।**
**ನಾಡೀಮಾರ್ಗೇಣ ಯಸ್ಸೂರ್ಯೋ ಮೇರುಮುಲ್ಲಂಘ್ಯ ಗಚ್ಛತಿ ॥ ೩೨ ॥**

**ತದಾ ರಾತ್ರಿಃ ಪ್ರಜಾಯೇತ ಯಾವನ್ನೋದಯತೇ ರವಿಃ ।**
**ವಿಷಯಾಂಧಕಾರೈರ್ಮುಕ್ತಸ್ತ್ವಂತರಾತ್ಮಾ ಪ್ರಕಾಶತೇ ॥ ೩೩ ॥**

**ಭಾವೈಸ್ತತ್ತ್ವಾತ್ಮಕಾನಾಂ ತು ಪಂಚಭಾವೈಸ್ತು ಪ್ರೇಷಿತೈಃ ।**
**ಪೂರ್ವಜನ್ಮಸ್ಥಿತೈಃ ಪಿಂಡೈರಂತರಾತ್ಮಾ ಪ್ರಗೃಹ್ಯತೇ ॥ ೩೪ ॥**

---

೩೦. ಆತ್ಮನು ಶುದ್ಧನು, ಪರಬ್ರಹ್ಮನು. ಯಾವಾಗಲೂ ಎಚ್ಚರದಿಂದಿರುತ್ತಾನೆ. ಅಂತರಾತ್ಮನು ಪ್ರಕೃತಿಯ ಗುಣಗಳಿಂದ ಕಟ್ಟಲ್ಪಟ್ಟಿದ್ದಾನೆ.

೩೧. ಅನ್ನಾದ್ಯಾಹಾರಗಳನ್ನು ಸೇವಿಸುವುದರಿಂದ ಅಂತರಾತ್ಮನು ಸುಖಿಯಾಗುತ್ತಾನೆ. ಹೆಚ್ಚು ಸುಖದಿಂದ ಮೋಹವುಂಟಾಗುತ್ತದೆ. ಅದರಿಂದ ಮನಸ್ಸು ಅಜ್ಞಾನದಲ್ಲಿ ಬೀಳುತ್ತದೆ.

೩೨-೩೩. ಅನಂತರ ತಮೋರೂಪವಾದ ನಿದ್ರೆಯೂ ಉಂಟಾಗುತ್ತದೆ. ಲಯವನ್ನು ಹೆಚ್ಚಿಸುತ್ತದೆ. ಸೂರ್ಯನು ಅವನ ಮಾರ್ಗದಿಂದ ಮೇರುವನ್ನು ದಾಟಿದಾಗ ಅವನು ಉದಯವಾಗುವವರೆಗೂ ರಾತ್ರಿಯಾಗಿರುತ್ತದೆ. ವಿಷಯವೆಂಬ ಅಂಧಕಾರದಿಂದ ಬಿಡಲ್ಪಟ್ಟರೆ ಆತ್ಮನು ಪ್ರಕಾಶಿಸುತ್ತಾನೆ.

೩೪. ತತ್ತ್ವಾತ್ಮಗಳು ಪಂಚಭೂತಗಳ ಭಾವದಿಂದ ಪ್ರೇರಿತವಾಗಿ ಹಿಂದಿನ ಜನ್ಮದ ವಾಸನೆಯ ಆ ಪಿಂಡಗಳಿಂದ ಅಂತರಾತ್ಮನು ಹಿಡಿಯಲ್ಪಟ್ಟು ಸಿಕ್ಕಿಕೊಳ್ಳುತ್ತಾನೆ.

ಸ ಚ ಪಶ್ಯತಿ ವೈ ಸ್ಥಾನಮುಚ್ಚಾವಚಂ ಶುಭಾನನೇ ।
ಸಂಸಾರೇ ಅಂತರಾತ್ಮಾ ವೈ ದೋಷೈರ್ಬದ್ಧಃ ಪ್ರಣೀಯತೇ ॥ ೩೫ ॥

ಕಾಯಂ ರಕ್ಷತಿ ಜೀವಾತ್ಮಾ ಪಶ್ಚಾತಿಷ್ಠತಿ ನಿತ್ಯಶಃ ॥ ೩೬ ॥

ಉದಾನಃ ಸ್ಫುರತೇ ತೀವ್ರಸ್ತಸ್ಮಾಚ್ಛಬ್ದಃ ಪ್ರಜಾಯತೇ ।
ಶುಷ್ಕಾ ಭಸ್ತ್ರಾ ಯಥಾ ಶ್ವಾಸಂ ಕುರುತೇ ವಾಯುಪೂರಿತಾ ॥ ೩೭ ॥

ತದ್ವಚ್ಛಬ್ದವಹಾಚ್ಛ್ವಾಸಮುದಾನಃ ಕುರುತೇ ಬಲಾತ್ ।
ಆತ್ಮನಸ್ತು ಪ್ರಭಾವೇನ ಹ್ಯುದಾನೋ ಬಲವಾನ್ಭವೇತ್ ॥ ೩೮ ॥

ಏವಂ ಕಾಯಃ ಪ್ರಮುಗ್ಧಸ್ತು ಮೃತಕಲ್ಪಃ ಪ್ರಜಾಯತೇ ।
ತತೋ ನಿದ್ರಾ ಮಹಾಮಾಯಾ ತಸ್ಯಾಂಗೇಷು ಪ್ರಯಾತಿ ಸಾ ॥ ೩೯ ॥

ಹೃದಿ ಕಂಠೇ ತಥಾ ಚಾಸ್ಯೇ ನಾಸಿಕಾಗ್ರೇ ಪ್ರತಿಷ್ಠತಿ ।
ಬಾಹೂ ನಿಕುಚ್ಯ ಸಂತಿಷ್ಠೇದ್ಧೃದ್ಗತಾಂ ನಾಭಿಮಂಡಲೇ ॥ ೪೦ ॥

---

೩೫-೩೬. ಆ ಹಿಡಿಯಲ್ಪಟ್ಟ ಅಂತರಾತ್ಮನು ನಾನಾ ವಿಧವಾದ ಆಸ್ಥಾನಗಳನ್ನು ನೋಡುತ್ತಾನೆ. ಹೀಗಿರಲು ಸಂಸಾರದಲ್ಲಿ ಅಂತರಾತ್ಮನು ದೋಷಗಳಿಂದ ಕಟ್ಟಲ್ಪಟ್ಟು ಆ ದೇಹದಲ್ಲಿ ಸಿಕ್ಕಿಸಲ್ಪಟ್ಟು ದೇಹವನ್ನು ಕಾಪಾಡುತ್ತಾನೆ. ಆಮೇಲೆ ಅದನ್ನು ಕಾಪಾಡುತ್ತ ಯಾವಾಗಲೂ ಅಲ್ಲೇ ನಿಲ್ಲುತ್ತಾನೆ.

೩೭. ಒಣಗಿದ ತಿದಿಯು ಗಾಳಿ ತುಂಬಿದರೆ ಉಸಿರಾಡಿಸುವಂತೆ ಉದಾನ ವಾಯುವು ವೇಗವಾಗಿ ಆಡುತ್ತದೆ. ಅದರಿಂದ ಶಬ್ದವಾಗುತ್ತದೆ.

೩೮. ಉದಾನವು ಬಹಳವಾಗಿ ಶಬ್ದಮಾಡಲು ಅದೇ ಶ್ವಾಸವಾಗುತ್ತದೆ. ಆ ಆತ್ಮನ ಪ್ರಭಾವದಿಂದ ಉದಾನವೇ ಬಲಿಷ್ಠವಾಗಿ ಕೂಗುತ್ತದೆ.

೩೯. ಮೋಹ ಹೊಂದಿದ ದೇಹವು ಸತ್ತಂತೆ ಆಗುತ್ತದೆ. ಆಗ ಆ ಅಂಗಗಳಲ್ಲಿ ಮಾಯಾರೂಪವಾದ ನಿದ್ರೆಯು ವ್ಯಾಪಿಸುತ್ತದೆ

೪೦. ಹೃದಯ, ಬಾಯಿ ಮೂಗಿನ ತುದಿ, ಇವುಗಳಲ್ಲಿ ಆ ಶ್ವಾಸವು ಕಾಣುತ್ತದೆ. ನಾಭಿಮಂಡಲದಲ್ಲಿದ್ದು ಹೃದಯವನ್ನು ಹೊಂದಿ ತೋಳುಗಳನ್ನು ಎಳೆದು ಸಂಕೋಚಮಾಡಿ ಕಂಠದ ಬಳಿಗೆ ಬರುತ್ತದೆ.

**ಆತ್ಮನಸ್ತು ಪ್ರಭಾವಾಚ್ಚ ಉದಾನೋ ನಾಮ ಮಾರುತಃ ।**
**ಪ್ರಜಾಯತೇ ಮಹಾತೀವ್ರೋ ಬಲರೋಧಂ ಕರೋತಿ ಸಃ ॥ ೪೧ ॥**

**ಯಥಾ ರಜ್ಜುಪ್ರಬಂಧಸ್ತು ದಾರುಕೀಲಧರಃ ಸ್ಥಿತಃ ।**
**ತಥಾ ಚಾತ್ಮಾ ಸುಸಂಲಗ್ನಃ ಪ್ರಾಣವಾಯುರ್ನ ಸಂಶಯಃ ॥ ೪೨ ॥**

**ಅಂತರಾತ್ಮಪ್ರಸಕ್ತಸ್ತು ಪ್ರಾಣವಾಯುಶ್ಚ ಭಾಸನೇ ।**
**ಬುದ್ಧಿವಿದ್ರೋಹಿತೋ ಭದ್ರೇ ಅಂತರಾತ್ಮಾ ಪ್ರಧಾವತಿ ॥ ೪೩ ॥**

**ಪೂರ್ವಜನ್ಮಾರ್ಜಿತಾನ್ ವಾಸಾನ್ ಸ್ಮೃತ್ವಾ ತತ್ರ ಪ್ರಧಾವತಿ ।**
**ತತ್ರ ಸಂಸ್ಥೋ ಮಹಾಪ್ರಾಜ್ಞಃ ಸ್ವೇಚ್ಛಯಾ ರಮತೇ ಪುನಃ ॥ ೪೪ ॥**

**ಏವಂ ನಾನಾವಿಧಾನ್ ಸ್ವಪ್ನಾನಂತರಾತ್ಮಾ ಪ್ರಪಶ್ಯತಿ ।**
**ಉತ್ತಮಾಂಶ್ಚ ವಿರುದ್ಧಾಂಶ್ಚ ಕರ್ಮಯುಕ್ತಾನ್ವರಾನನೇ ॥ ೪೫ ॥**

**ಗಿರೀಂಸ್ತಥಾ ಸುದುರ್ಗಾಂಶ್ಚ ಬಹೂನುಚ್ಚಾವಚಾಂಸ್ತಥಾ ।**
**ತದೇವ ವಾತಿಕಂ ವಿದ್ಧಿ ಕಫವತ್ತದ್ವದಾಮ್ಯಹಂ ॥ ೪೬ ॥**

---

೪೧. ಆತ್ಮನ ಪ್ರಭಾವದಿಂದ ಉದಾನವೆಂಬ ಗಾಳಿಯು ಮಹಾ ವೇಗವುಳ್ಳದ್ದಾಗಿ ಬಲವನ್ನು ನಿಲ್ಲಿಸುತ್ತದೆ.

೪೨. ಹಗ್ಗದ ಗಂಟು ಮರದ ಗೂಟವನ್ನು ಅವಲಂಬಿಸಿ ಬಿಗಿಯಾಗಿರುವಂತೆ ಪ್ರಾಣವಾಯುವು ಆತ್ಮನಲ್ಲಿ ಅಂಟಿಕೊಂಡಿರುತ್ತದೆ. ಸಂಶಯವಿಲ್ಲ.

೪೩. ಅಂತರಾತ್ಮನಲ್ಲಿ ಅಂಟಿಕೊಂಡಿರುವ ಪ್ರಾಣವಾಯುವು ಬುದ್ಧಿಭ್ರಮಿತವಾದಾಗ ಆ ಅಂತರಾತ್ಮನು ಓಡಾಡುತ್ತಾನೆ.

೪೪. ಪೂರ್ವಜನ್ಮದ ವಾಸನೆಯನ್ನು ಸ್ಮರಿಸಿಕೊಂಡು ಆ ಅಂತರಾತ್ಮನು ಅಲ್ಲಲ್ಲಿಗೆ ಓಡಾಡುತ್ತಾ ಸ್ವೇಚ್ಛೆಯಾಗಿ ಓಡಾಡಿಕೊಂಡು ರಮಿಸುತ್ತಾನೆ.

೪೫. ಆಗ ಅಂತರಾತ್ಮನು ನಾನಾ ಬಗೆಯಾದ ಸ್ವಪ್ನಗಳನ್ನು ನೋಡುತ್ತಾನೆ. ಆ ಸ್ವಪ್ನಗಳು ಕರ್ಮಕ್ಕನುಗುಣವಾಗಿ ಒಳ್ಳೆಯವಾಗಿಯೂ ಕೆಟ್ಟವಾಗಿಯೂ ಇರುತ್ತವೆ.

೪೬. ಬೆಟ್ಟಗಳೂ, ದುರ್ಗಗಳೂ, ಗುಡ್ಡಗಳೂ, ಹಳ್ಳತಿಟ್ಟುಗಳನ್ನು ಕಾಣುತ್ತಾನೆ ಅದೇ ವಾತದಿಂದುಂಟಾಗುವ ಸ್ವಪ್ನವೆಂದು ತಿಳಿ. ಕಫಸ್ವಪ್ನವನ್ನು ಹೇಳುತ್ತೇನೆ.

ಜಲಂ ನದೀಂ ತಟಾಗಾಂಶ್ಚ ಪಯಃಸ್ಥಾನಾನಿ ಪಶ್ಯತಿ ।
ಅಗ್ನಿಂ ಚ ಪಶ್ಯತೇ ದೇವಿ ಬಹುಕಾಂಚನಮುತ್ತಮಂ ॥ ೪೭ ॥

ತದೇವ ಪೈತ್ತಿಕಂ ವಿದ್ಧಿ ಭಾವ್ಯಂ ಚೈವ ವದಾಮ್ಯಹಂ ।
ಪ್ರಭಾತೇ ದೃಶ್ಯತೇ ಸ್ವಪ್ನೋ ಭವ್ಯೋ ವಾಭವ್ಯ ಏವ ಚ ॥ ೪೮ ॥

ಕರ್ಮಯುಕ್ತೋ ವರಾರೋಹೇ ಲಾಭಾಲಾಭಪ್ರಕಾಶಕಃ ।
ಸ್ವಪ್ನಸ್ಯಾಪಿ ಅವಸ್ಥಾನಂ ಕಥಿತಂ ವರವರ್ಣಿನಿ ॥ ೪೯ ॥

ತದ್ಭಾವ್ಯಂ ತು ವರಾರೋಹೇ ವಿಷ್ಣೋಶ್ಚೈವ ಭವಿಷ್ಯತಿ ।
ತನ್ನಿಮಿತ್ತಂ ತ್ವಯಾ ದೃಷ್ಟೋ ದುಸ್ಸ್ವಪ್ನಃ ಸ ತು ಪ್ರೇಕ್ಷಿತಃ ॥ ೫೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ ವಿಂಶಾಧಿಕಶತತಮೋಧ್ಯಾಯಃ

---

೪೭. ನೀರು, ಹೊಳೆ, ಕೆರೆ ಮುಂತಾದ ನೀರಿನ ಸ್ಥಾನಗಳನ್ನು ನೋಡಿದರೆ ಅದು ಕಫವೃದ್ಧಿಯಿಂದಾಗುವ ಸ್ವಪ್ನವು. ಬೆಂಕಿ, ಚಿನ್ನ ಮುಂತಾದುವನ್ನು ನೋಡಿದರೆ ಅದು ಪಿತ್ಥದ ಸಂಬಂಧವಾದುದು, ಇವುಗಳಲ್ಲಿ ಆಗತಕ್ಕದ್ದನ್ನು ಹೇಳುತ್ತೇನೆ.

೪೮-೪೯. ಬೆಳಗಿನ ಹೊತ್ತಿನಲ್ಲಿ ಒಳ್ಳೆಯ ಅಥವಾ ಕೆಟ್ಟ ಸ್ವಪ್ನವನ್ನು ಮನುಷ್ಯನು ಕಾಣುತ್ತಾನೆ. ಅದು ತನ್ನ ಕರ್ಮಕ್ಕನುಗುಣವಾಗಿ ಲಾಭನಷ್ಟಗಳನ್ನು ತೋರಿಸುತ್ತದೆ. ಆ ಸ್ವಪ್ನವು ಸ್ಥಿರವಾದುದು. ಅದರಂತೆ ನಡೆಯುತ್ತದೆಂದು ಹೇಳಲ್ಪಟ್ಟಿದೆ.

೫೦. ಆ ಬೆಳಗಿನ ಸ್ವಪ್ನವು ವಿಷ್ಣುವಿಗೂ ಬಿಟ್ಟಿದ್ದಲ್ಲ. ಫಲವನ್ನು ಕೊಟ್ಟೇ ಕೊಡುತ್ತದೆ. ಅದೇ ಕಾರಣದಿಂದ ನೀನು ದುಃಸ್ವಪ್ನವನ್ನು ನೋಡಿರಬೇಕು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕವಿಂಶಾಧಿಕಶತತಮೋऽಧ್ಯಾಯಃ

॥ ಕಾಮೋದೋವಾಚ ॥

ನ ವಿದುರ್ದೇವತಾಸ್ಸರ್ವಾ ಯಸ್ಯಾಂತಂ ರೂಪಮೇವ ಹಿ ।
ಯಸ್ಮಿಂಲ್ಲೀನಸ್ತು ಸರ್ವೋऽಯಂ ಸ ವಿಶ್ವಾತ್ಮಾ ಪ್ರಕಥ್ಯತೇ ॥ ೧ ॥

ಯಸ್ಯ ಮಾಯಾಪ್ರಮುಗ್ಧಸ್ತು ಸಂಸಾರಃ ಶೃಣು ನಾರದ ।
ಕಸ್ಮಾತ್ಪ್ರಯಾತಿ ಸಂಸಾರಂ ಮಮ ಸ್ವಾಮೀ ಜಗತ್ಪತಿಃ ॥ ೨ ॥

ಪಾಪೈಶ್ಚಾಪಿ ಸುಪುಣ್ಯೈಶ್ಚ ನರೋ ಬದ್ಧಸ್ತು ಕರ್ಮಭಿಃ ।
ಸಂಸಾರಂ ಸರತೇ ವಿಪ್ರ ಹರಿಃ ಕಸ್ಮಾದ್ವ್ರಜೇದ್ವದ ॥ ೩ ॥

---

## ನೂರ ಇಪ್ಪತ್ತೊಂದನೆಯ ಅಧ್ಯಾಯವು

೧. ಕಾಮೋದೆಯು ಹೇಳಿದಳು:—ಯಾವನ ಕೊನೆ ಮೊದಲನ್ನೂ ರೂಪವನ್ನೂ ದೇವತೆಗಳು ತಿಳಿದಿಲ್ಲವೋ, ಯಾವನಲ್ಲಿ ಈ ಪ್ರಪಂಚವೆಲ್ಲವೂ ಅಡಗಿದೆಯೋ ಅವನೇ ವಿಶ್ವಾತ್ಮನಾದ ವಿಷ್ಣುವು, ಎಂದೆನಿಸುತ್ತಾನೆ.

೨. ಯಾವನ ಮಾಯೆಯಿಂದ ಮೋಹಗೊಂಡು, ಪ್ರಾಣಿಯು ಸಂಸಾರವನ್ನು ಹೊಂದುತ್ತಾನೋ ಅವನೇ ವಿಷ್ಣುವು. ಅಂತಹ ಮಹಾತ್ಮನು. ಅಂತಹ ಜಗತ್ಪತಿಯಾದ ನನ್ನ ಸ್ವಾಮಿಯು ಏಕೆ ಸಂಸಾರವನ್ನು ಹೊಂದುತ್ತಾನೆ? (ಸಂಸಾರವೆಂದರೆ ಜನನ ಮರಣಗಳು).

೩. ಪಾಪವಾಗಲಿ ಪುಣ್ಯವಾಗಲಿ ಆ ಕರ್ಮಗಳು ನರನನ್ನು ಬಂಧಿಸುತ್ತವೆ. ಹರಿಗೆ ಅಂತಹ ಲೋಪವೊಂದೂ ಇಲ್ಲದುದರಿಂದ ಅವನೇಕೆ ಸಂಸಾರವನ್ನು ಹೊಂದುತ್ತಾನೆ?

॥ ನಾರದ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಯತ್ಕೃತಂ ತೇನ ವಿಷ್ಣುನಾ ।
ಭೃಗೋರಗ್ರೇ ಪ್ರತಿಜ್ಞಾತಂ ಯಜ್ಞರಕ್ಷಾಂ ಕರೋಮ್ಯಹಂ ॥ ೪ ॥

ಇಂದ್ರಸ್ಯ ವಚನಾತ್ಸದ್ಯೋ ಗತೋಽಸೌ ದಾನವೈಸ್ಸಹ ।
ಯೋದ್ಧುಂ ವಿಹಾಯ ಗೋವಿಂದೋ ಭೃಗೋಶ್ಚೈವ ಮಖೋತ್ತಮಂ ॥ ೫ ॥

ಮಖಂ ತ್ಯಕ್ತ್ವಾ ಗತೇ ದೇವಿ ಪಶ್ಚಾತ್ತೈರ್ದಾನವೋತ್ತಮೈಃ ।
ಆಗತ್ಯ ಧ್ವಂಸಿತಸ್ಸರ್ವಃ ಸ ಯಜ್ಞಃ ಪಾಪಚೇತನೈಃ ॥ ೬ ॥

ಹರಿಂ ಕ್ರುದ್ಧಸ್ತು ಯೋಗೀಂದ್ರಃ ಶಶಾಪ ಭೃಶಮೇವ ತಂ ।
ದಶ ಜನ್ಮನಿ ಭುಂಕ್ಷ್ವ ತ್ವಂ ಮಚ್ಛಾಪಕಲುಷೀಕೃತಃ ॥ ೭ ॥

ಕರ್ಮಣಶ್ಚಾಸ್ಯ ಸಂಭೋಗಂ ಸಭೋಕ್ಷ್ಯತಿ ಜನಾರ್ದನಃ ।
ತನ್ನಿಮಿತ್ತಂ ತ್ವಯಾ ದೇವಿ ದುಸ್ಸ್ವಪ್ನಃ ಪ್ರಸಮೀಕ್ಷಿತಃ ॥ ೮ ॥

---

೪. ನಾರದನು ಹೇಳಿದನು:—ಆ ವಿಷ್ಣುವು ಮಾಡಿದುದನ್ನು ಹೇಳುತ್ತೇನೆ. ಕೇಳು. ಭೃಗುವಿನ ಎದುರಿನಲ್ಲಿ ಯಜ್ಞವನ್ನು ನಾನು ರಕ್ಷಿಸುತ್ತೇನೆಂದು ಪ್ರತಿಜ್ಞೆ ಮಾಡಿದನು.

೫. ಇಂದ್ರನ ಮಾತಿನಂತೆ ರಾಕ್ಷಸರೊಡನೆ ಯುದ್ಧಮಾಡಲು ಆ ಯಜ್ಞರಕ್ಷೆ ಮಾಡುವುದನ್ನು ಬಿಟ್ಟು ಹೋದನು.

೬. ಆ ವಿಷ್ಣುವು ಯಾಗವನ್ನು ಬಿಟ್ಟು ಹೋದೊಡನೆಯೇ ದಾನವರು ಬಂದು ಆ ಯಾಗವನ್ನು ನಾಶಪಡಿಸಿದರು.

೭. ಆಗ ಭೃಗುವು ಕೋಪಗೊಂಡು, ಎಲೈ ವಿಷ್ಣುವೇ ನನ್ನ ಶಾಪದಿಂದ ಪಾಪವನ್ನು ಹೊಂದಿ ಹತ್ತು ಜನ್ಮಗಳನ್ನು ಅನುಭವಿಸು; ಎಂದು ಶಪಿಸಿದನು.

೮. ಆ ಪಾಪವನ್ನು ವಿಷ್ಣುವು ಅನುಭವಿಸಬೇಕು. ಆದ್ದರಿಂದಲೇ ನಿನಗೆ ದುಸ್ಸ್ವಪ್ನವು ಕಂಡಿತು.

**ಇತ್ಯುಕ್ತ್ವಾ ತಾಂ ಗತೋ ವಿಪ್ರೋ ಬ್ರಹ್ಮಲೋಕಂ ಸ ನಾರದಃ ।**
**ಕೃಷ್ಣಸ್ಯಾಪಿ ಸುದುಃಖೇನ ದುಃಖಿತಾ ಸಾಽಭವತ್ತದಾ ॥ ೯ ॥**

**ರುರೋದ ಕರುಣಂ ಬಾಲಾ ಹಾಹೇತಿ ವದತೀ ಮುಹುಃ ।**
**ಗಂಗಾತೀರೋಪವಿಷ್ಟಾ ಸಾ ಜಲಾಂತೇ ಶೃಣು ನಂದನ ॥ ೧೦ ॥**

**ಸ್ವನೇತ್ರಾಭ್ಯಾಂ ತಥಾಶ್ರೂಣಿ ದುಃಖೇನಾಪಿ ಪ್ರಮುಂಚತಿ ।**
**ತಾನ್ಯಶ್ರೂಣಿ ಪ್ರಮುಕ್ತಾನಿ ಗಂಗಾತೋಯೇ ಪತಂತ್ಯಪಿ ॥ ೧೧ ॥**

**ಜಲೇಷ್ವೇವ ನಿಮಜ್ಜಂತಸ್ತಸ್ಯಾಶ್ಚಾಪ್ಯಶ್ರುಬಿಂದವಃ ।**
**ಸಂಭವಂತಿ ಪುನಸ್ತಾತ ಪದ್ಮರೂಪಾಣಿ ತಾನಿ ಚ ॥ ೧೨ ॥**

**ಗಂಗಾತೋಯಪ್ರಯುಕ್ತಾನಿ ವಾಹಿತಾನಿ ಪ್ರಯಾಂತಿ ವೈ ।**
**ದದೃಶೇ ದಾನವಶ್ರೇಷ್ಠೋ ವಿಷ್ಣುಮಾಯಾಪ್ರಮೋಹಿತಃ ॥ ೧೩ ॥**

**ದುಃಖಜಾನಿ ನ ಜಾನಾತಿ ಮುನಿನಾ ಕಥಿತಾನ್ಯಪಿ ।**
**ಹರ್ಷೇಣ ಮಹತಾವಿಷ್ಟಃ ಪರಿಜಗ್ರಾಹ ಸೋಽಸುರಃ ॥ ೧೪ ॥**

---

೯. ಹೀಗೆಂದು ಹೇಳಿ ಆ ನಾರದನು ಬ್ರಹ್ಮಲೋಕಕ್ಕೆ ಹೋದನು. ಆಕೆಯೂ ಕೂಡ ವಿಷ್ಣುವಿನ ಆ ದುಃಖದಿಂದ ದುಃಖಗೊಂಡಳು.

೧೦. ಆಗ ಆಕೆಯು ಗಂಗೆಯ ದಡದಲ್ಲಿ ಕುಳಿತು ಹಾಹಾ ಎಂಬದಾಗಿ ಅಳುವುದಕ್ಕೆ ಮೊದಲಿಟ್ಟಳು.

೧೧. ದುಃಖಪಡುತ್ತಾ ಕಣ್ಣೀರನ್ನು ಸುರಿಸುತ್ತಿದ್ದಾಳೆ. ಆ ಕಣ್ಣೀರು ಗಂಗೆಯ ನೀರಿನಲ್ಲಿ ಬೀಳುತ್ತವೆ.

೧೨. ಆ ಕಣ್ಣೀರಿನ ಹನಿಗಳು ನೀರಿನಲ್ಲಿ ಮುಳುಗಿ ಪದ್ಮಗಳಾಗುತ್ತವೆ.

೧೩. ಗಂಗೆಯ ನೀರಿನ ಪ್ರವಾಹದ ಸೆಳೆತದಿಂದ ಕೊಚ್ಚಿಕೊಂಡು ಆ ಕಮಲಗಳು ಹೋಗುತ್ತವೆ. ಅದನ್ನು ಆ ವಿಷ್ಣುಮಾಯೆಗೆ ಅಧೀನನಾದ ಈ ದಾನವನು ನೋಡುತ್ತಾನೆ.

೧೪. ನಾರದನು ಹೇಳಿದ್ದರೂ ಕೂಡ ಇವು ದುಃಖದಿಂದ ಹುಟ್ಟಿದುವೆಂದು ತಿಳಿದುಕೊಳ್ಳದೇ ಹೋದನು. ಆದ್ದರಿಂದ ಸಂತೋಷದಿಂದ ಕೂಡಿ ಅವನ್ನು ತೆಗೆದುಕೊಂಡನು.

ಪದ್ಮೈಸ್ತೈ ಪುಷ್ಪಿತೈಸ್ಸೋಽಪಿ ಪೂಜಯೇದ್ಗಿರಿಜಾಪ್ರಿಯಂ ।
ಸಪ್ತಕೋಟಿಭಿರ್ದೈತ್ಯೇಂದ್ರೋ ವಿಷ್ಣುಮಾಯಾಹೃತಾಂತರಃ ॥ ೧೫ ॥

ಅಥ ಕ್ರುದ್ಧಾ ಜಗದ್ಧಾತ್ರೀ ಶಂಕರಂ ವಾಕ್ಯಮಬ್ರವೀತ್ ।
ಪಶ್ಯೈತಸ್ಯ ವಿಕರ್ಮತ್ವಂ ದಾನವಸ್ಯ ತು ದುರ್ಮತೇಃ ॥ ೧೬ ॥

ಶೋಕೋತ್ಪನ್ನೈಃ ಪ್ರಫುಲ್ಲೈಶ್ಚ ಭವಂತಂ ಪರಿಪೂಜಯೇತ್ ।
ಪ್ರಾಪ್ಯತೇ ದುಃಖಸಂತಾಪಂ ಮುದಂ ಪ್ರಾಪ್ತುಂ ನ ಚಾರ್ಹತಿ ॥ ೧೭ ॥

॥ ಈಶ್ವರ ಉವಾಚ ॥

ಸತ್ಯಮುಕ್ತಂ ತ್ವಯಾ ಭದ್ರೇ ಅನೇನ ಪಾಪಕಾರಿಣಾ ।
ಸತ್ಯೋದ್ಯಮಃ ಪರಿತ್ಯಕ್ತಃ ಕಾಮೋದಾರ್ಥಂ ಕೃತಃ ಪುರಾ ॥ ೧೮ ॥

ಶೋಕಜಾನಿ ಪ್ರಫುಲ್ಲಾನಿ ಗಂಗಾತೋಯಗತಾನ್ಯಪಿ ।
ಅಯಮೇಷ ಪ್ರಗೃಹ್ಣಾತಿ ಕಾಮಕಲಿತಚೇತನಃ ॥ ೧೯ ॥

---

೧೫. ಆ ಪದ್ಮಗಳು ಹೂಬಿಟ್ಟುದನ್ನು ನೋಡಿ ವಿಷ್ಣುಮಾಯೆಗೊಳಗಾಗಿ ಏಳು ಕೋಟಿ ಆ ಪದ್ಮಗಳಿಂದ ಈಶ್ವರನನ್ನು ಪೂಜಿಸಿದನು.

೧೬-೧೭. ಆಗ ಕೋಪಗೊಂಡ ಪಾರ್ವತಿಯು ಶಂಕರನನ್ನು ಕುರಿತಿಂತೆಂದಳು. ಈ ದುಷ್ಟ ದಾನವನ ಅಯೋಗ್ಯತನವನ್ನು ನೋಡಿದೆಯಾ? ದುಃಖದಿಂದ ಹುಟ್ಟಿದ ಕಮಲದ ಹೂಗಳಿಂದ ಪೂಜಿಸುತ್ತಿರುವನಲ್ಲ? ಆದ್ದರಿಂದ ಈತನು ದುಃಖವನ್ನು ಹೊಂದುತ್ತಾನೆಯೇ ಹೊರತು ಸಂತೋಷವನ್ನು ಹೊಂದಲು ಯೋಗ್ಯನಲ್ಲ.

೧೮. ಈಶ್ವರನು ಹೇಳಿದನು:—ಪ್ರಿಯಳೇ, ನೀನು ಹೇಳಿದುದು ಸರಿ. ಈ ಪಾಪಿಯು ಕಾಮೋದೆಗೋಸ್ಕರ ಸತ್ಯದ ದಾರಿಯನ್ನು ಬಿಟ್ಟನು.

೧೯. ದುಃಖದಿಂದುತ್ಪನ್ನವಾದ ಹೂಗಳನ್ನು ಗಂಗಾ ಪ್ರವಾಹದಲ್ಲಿದ್ದರೂ ಕಾಮಿಯಾದ ಈತನು ತೆಗೆದುಕೊಳ್ಳುತ್ತಾನೆ.

**ಪೂಜಯೇಚ್ಚಾಪಿ ದುಷ್ಟಾತ್ಮಾ ಶೋಕಸಂತಾಪಕಾರಕೈಃ ।**
**ದುಃಖಜೈಃ ಶೋಕಜೈಃ ಪುಷ್ಪೈಸ್ತೈಸ್ತು ಶ್ರೇಯಃ ಕಥಂ ಭವೇತ್ ॥ ೨೦ ॥**

**ಯಾದೃಶೇನಾಪಿ ಭಾವೇನ ಮಾಮೇವ ಪರಿಪೂಜಯೇತ್ ।**
**ತಾದೃಶೇನಾಪಿ ಭಾವೇನ ಅಸ್ಯ ಸಿದ್ಧಿರ್ಭವಿಷ್ಯತಿ ॥ ೨೧ ॥**

**ಮನ್ಯೇ ಧ್ಯಾನವಿಹೀನೋಽಯಂ ಕಾಮೋದಾಸ್ಯಸ್ತಮಾನಸಃ ।**
**ಸಂಜಾತಃ ಪಾಪಚಾರಿತ್ರೋ ಜಹಿ ದೇವಿ ಸ್ವತೇಜಸಾ ॥ ೨೨ ॥**

**ಏವಮಾಕರ್ಣ್ಯ ತದ್ವಾಕ್ಯಂ ಶಂಭೋಶ್ಚೈವ ಮಹಾತ್ಮನಃ ।**
**ಅಸ್ಯೈವ ಸಂಕ್ಷಯಂ ಶಂಭೋ ಕರಿಷ್ಯೇ ತವ ಶಾಸನಾತ್ ॥ ೨೩ ॥**

**ಏವಮುಕ್ತ್ವಾ ತತೋ ದೇವೀ ತಸ್ಯಾಪಿ ವಧಕಾಂಕ್ಷಯಾ ।**
**ವರ್ತತೇ ಹಿ ವಿತುಂಡಸ್ಯ ವಧೋಪಾಯಂ ವಿಚಿಂತಯೇತ್ ॥ ೨೪ ॥**

---

೨೦. ಶೋಕಸಂತಾಪಗಳನ್ನುಂಟುಮಾಡುವ ಹೂಗಳಿಂದ ಪೂಜೆ ಮಾಡುತ್ತಿದ್ದಾನೆ. ದುಃಖದಿಂದಲೂ, ಶೋಕದಿಂದಲೂ ಹುಟ್ಟಿದ ಹೂಗಳಿಂದ ಹೇಗೆ ಒಳ್ಳೆಯದಾದೀತು?

೨೧. ಆದರೆ ಯಾವ ಭಾವದಿಂದ ನನ್ನನ್ನು ಪೂಜಿಸುತ್ತಿರುವನೋ ಆ ಭಾವದಿಂದಲೇ ಅವನಿಗೆ ಸಿದ್ಧಿಯುಂಟಾಗುತ್ತದೆ.

೨೨. ಆದರೆ ಈತನು ಕಾಮೋದೆಯಲ್ಲಿ ಮನಸ್ಸಿಟ್ಟು ನನ್ನ ಧ್ಯಾನದಲ್ಲಿ ವಿಮುಖನಾಗಿದ್ದಾನೆ. ಆದ್ದರಿಂದ ಪಾಪಿಯಾದನು. ನೀನು ನಿನ್ನ ತೇಜಸ್ಸಿನಿಂದ ಕೊಂದುಹಾಕು.

೨೩. ಶಂಭುವಿನ ಈ ಮಾತನ್ನು ಕೇಳಿ ಎಲೈ ಶಂಭುವೇ, ನಿನ್ನ ಅಪ್ಪಣೆಯಂತೆ ಈತನನ್ನು ಕೊಲ್ಲುತ್ತೇನೆ.

೨೪. ಹೀಗೆಂದು ಆ ದೇವಿಯು ಹೇಳಿ ಅವನನ್ನು ವಧಿಸಬೇಕೆಂದು ಅಪೇಕ್ಷೆಯಿಂದ ಆ ವಿಹುಂಡನ ವಧೋಪಾಯವನ್ನು ಯೋಚಿಸಿದಳು.

ಕೃತ್ವಾ ಮಾಯಾಮಯಂ ರೂಪಂ ಬ್ರಾಹ್ಮಣಸ್ಯ ಮಹಾತ್ಮನಃ ।
ಪೂಜಯೇಚ್ಛಂಕರಂ ನಾಥಂ ಸುಪುಷ್ಪೈಃ ಪಾರಿಜಾತಕೈಃ ॥ ೨೫ ॥

ಸಮೇತ್ಯ ದಾನವಃ ಪಾಪೋ ದಿವ್ಯಾಂ ಪೂಜಾಂ ವಿನಾಶಯೇತ್ ।
ಕಾಮಾಕುಲಸ್ಸದುಃಖಾರ್ತಸ್ತದ್ಗತೋ ಭಾವತತ್ಪರಃ ॥ ೨೬ ॥

ವಿಷ್ಣೋಶ್ಚೈವ ಮಹಾಮಾಯಾಂ ಪೂರ್ವದೃಷ್ಟಾಂ ಸ ದಾನವಃ ।
ಸಸ್ಮಾರ ಚಾಪಿ ವೈ ನಿತ್ಯಂ ಕಾಮಬಾಣಪ್ರಪೀಡಿತಃ ॥ ೨೭ ॥

ತಸ್ಯಾಃ ಸ್ಮರಣಮಾತ್ರೇಣ ಕಂದರ್ಪೇಣ ಬಲೀಯಸಾ ।
ವಿರಹಾಕುಲದುಃಖಾರ್ತೋ ದೈವತ್ಯೈರ್ಹಿ ಮುಹುರ್ಮುಹುಃ ॥ ೨೮ ॥

ಕಾಲಕೃಷ್ಟಸ್ಸದುಷ್ಟಾತ್ಮಾ ಶೋಕಜಾತಾನಿ ತಾನಿ ಸಃ ।
ಪರಿಗೃಹ್ಯ ಸಮಾಯಾತಃ ಪೂಜನಾರ್ಥಂ ಮಹೇಶ್ವರಂ ॥ ೨೯ ॥

---

೨೫. ಆಗ ಮಾಯಾಬ್ರಾಹ್ಮಣನ ರೂಪವನ್ನು ಆಕೆಯು ತಾಳಿ ಪಾರಿಜಾತದ ಒಳ್ಳೆಯ ಹೂಗಳಿಂದ ಶಂಕರನನ್ನು ತಾನು ಪೂಜಿಸುತ್ತಿದ್ದಳು.

೨೬. ಕಾಮಿಯಾದ ಆತನು ದುಃಖದಿಂದ ಆ ವಿಷ್ಣುಮಾಯೆಯಲ್ಲಿ ಆಸಕ್ತನಾಗಿ ಅದೇ ಮನಸ್ಸಿನಿಂದಿದ್ದು ಆ ಬ್ರಾಹ್ಮಣನು ಮಾಡಿದ ದಿವ್ಯವಾದ ಪೂಜೆಯನ್ನು ನಾಶಮಾಡುತ್ತಿದ್ದನು.

೨೭. ಆ ದಾನವನು ಪೂರ್ವದಲ್ಲಿ ನೋಡಿದ್ದ ಆ ವಿಷ್ಣುವಿನ ಮಾಯೆಯನ್ನೇ ಕಾಮಿಯಾಗಿ ನಿತ್ಯವೂ ಸ್ಮರಿಸುತ್ತಿದ್ದನು.

೨೮. ತನ್ನ ದುರದೃಷ್ಟದಿಂದ ಆಕೆಯನ್ನು ಸ್ಮರಿಸಿಕೊಂಡರೂ ಕೂಡಲೇ ಕಾಮಾಗ್ನಿಯು ಹೆಚ್ಚಿ ದುಃಖಿಸುತ್ತಿದ್ದನು.

೨೯. ಯಮನಿಂದ ಎಳೆಯಲ್ಪಟ್ಟ ಆ ದಾನವನು ಮಹೇಶ್ವರನ ಪೂಜೆಗೋಸ್ಕರ ದುಃಖದಿಂದ ಹುಟ್ಟಿದ ಹೂಗಳನ್ನು ತೆಗೆದುಕೊಂಡು ಬಂದನು.

ದೇವ್ಯಾ ಕೃತಾಂ ಹಿ ತಾಂ ಪೂಜಾಂ ಸುಪುಷ್ಪೈಃ ಪಾರಿಜಾತಕೈಃ ।
ತಾನಿ ನೀತ್ವಾ ತು ಲೋಭೇನ ಶೋಕಜೈಃ ಪರಿಪೂಜಯೇತ್ ॥ ೩೦ ॥

ನೇತ್ರಾಭ್ಯಾಂ ತಸ್ಯ ದುಷ್ಟಸ್ಯ ಬಿಂದವೋಽಶ್ರುಸಮುದ್ಭವಾಃ ।
ಅವಿರಳಾಸ್ತತೋ ವತ್ಸ ಪತಂತಿ ಲಿಂಗಮಸ್ತಕೇ ॥ ೩೧ ॥

ದೇವೀ ಬ್ರಾಹ್ಮಣರೂಪೇನ ತಮುವಾಚ ಮಹಾಮತೇ ।
ಕೋ ಭವಾನ್ಪೂಜಯೇದ್ದೇವಂ ಶೋಕಾಕುಲಮನಾಸ್ಸದಾ ॥ ೩೨ ॥

ಪತಂತ್ಯಶ್ರೂಣಿ ದೇವಸ್ಯ ಮಸ್ತಕೇ ಶೋಕಜಾನಿ ತೇ ।
ಅಪವಿತ್ರಾಣಿ ಮೇ ಬ್ರೂಹಿ ಏತದರ್ಥಂ ಮಮಾಗ್ರತಃ ॥ ೩೩ ॥

॥ ವಿಹುಂಡ ಉವಾಚ ॥

ಪೂರ್ವಂ ದೃಷ್ಟಾ ಮಯಾ ನಾರೀ ಸರ್ವಸೌಭಾಗ್ಯಸಂಪದಾ ।
ಸರ್ವಲಕ್ಷಣಸಂಪನ್ನಾ ಕಾಮಸ್ಯಾಯತನಂ ಮಹತ್ ॥ ೩೪ ॥

---

೩೦. ದೇವಿಯು ಮಾಡಿದ ಸುಪುಷ್ಪದ ಪೂಜೆಯನ್ನು ತೆಗೆದುಹಾಕಿ, ಆಶೆಪಟ್ಟು ಶೋಕದ ಹೂವುಗಳಿಂದ ಪೂಜಿಸಿದನು.

೩೧. ಅವನ ಕಣ್ಣುಗಳಿಂದ ದುಃಖದಿಂದ ಉತ್ಪನ್ನವಾದ ಕಣ್ಣೀರಿನ ಬಿಂದುಗಳು ಧಾರೆಯಾಗಿ ಆ ಲಿಂಗದ ಮೇಲೆ ಬೀಳುತ್ತಿದ್ದವು.

೩೨. ದೇವಿಯು ಬ್ರಾಹ್ಮಣ ರೂಪದಿಂದ ಆತನನ್ನು ಕುರಿತು ಇಂತೆಂದಳು. ಶೋಕದಿಂದ ಕೂಡಿದ ಮನಸ್ಸಿನಿಂದ ಪೂಜಿಸುತ್ತಿರುವೆಯಲ್ಲ? ನೀನಾರು?

೩೩. ನಿನ್ನ ದುಃಖದಿಂದ ಕಣ್ಣೀರು ಅಪವಿತ್ರವಾದದು. ಅದು ದೇವರ ತಲೆಯ ಮೇಲೆ ಬೀಳುತ್ತದೆ. ಆದುದರಿಂದ ಕೇಳುತ್ತೇನೆ. ಹೇಳು.

೩೪. ವಿಹುಂಡನು ಹೇಳಿದನು :—ಸರ್ವಸೌಭಾಗ್ಯಗಳಿಂದಲೂ ಕೂಡಿದ ಲಕ್ಷಣವತಿಯಾದ, ಮನ್ಮಥನಿಗೆ ತೌರೂರಾದ ಒಬ್ಬ ಹೆಂಗಸನ್ನು ಮೊದಲು ನೋಡಿದೆನು.

ತಸ್ಯಾ ಮೋಹೇನ ಸಂದಗ್ಧಃ ಕಾಮೇನಾಕುಲತಾಂ ಗತಃ ।
ತಯಾ ಪ್ರೋಕ್ತಂ ಹಿ ಸಂಭೋಗೇ ದೇಹಿ ಮೇ ದಾಯಮುತ್ತಮಂ ॥ ೩೫ ॥

ಕಾಮೋದಸಂಭವೈಃ ಪುಷ್ಪೈಃ ಪೂಜಯಸ್ವ ಮಹೇಶ್ವರಂ ।
ತೇಷಾಂ ಪುಷ್ಪಕೃತಾಂ ಮಾಲಾಂ ಮಮ ಕಂಠೇ ಪರಿಕ್ಷಿಪ ॥ ೩೬ ॥

ಕೋಟಿಭಿಸ್ಸಪ್ತಸಂಖ್ಯಾಕೈಃ ಪೂಜಯಸ್ವ ಮಹೇಶ್ವರಂ ।
ತದರ್ಥಂ ಪೂಜಯಾಮ್ಯೇವ ಈಶ್ವರಂ ಫಲದಾಯಕಂ ॥ ೩೭ ॥

ಕಾಮೋದಸಂಭವೈಃ ಪುಷ್ಪೈರ್ದುರ್ಲಭೈರ್ದೇವದಾನವೈಃ ॥ ೩೮ ॥

॥ ದೇವ್ಯುವಾಚ ॥

ಕ್ವ ತೇ ಭಾವಃ ಕ್ವ ತೇ ಧ್ಯಾನಂ ಕ್ವ ತೇ ಜ್ಞಾನಂ ದುರಾತ್ಮನಃ ।
ಈಶ್ವರಸ್ಯಾಪಿ ಸಂಬಂಧೋ ನಾಸ್ತಿ ಕಿಂಚಿತ್ತ್ವಯೈವ ಹಿ ॥ ೩೯ ॥

ಕಾಮೋದಾಯಾ ವರಂ ರೂಪಂ ಕೀದೃಶಂ ವದ ಸಾಂಪ್ರತಂ ।
ಕ್ವ ಲಬ್ಧಾನಿ ಸುಪುಷ್ಪಾಣಿ ಹಾಸ್ಯಾತ್ತಸ್ಯಾ ಭವಾನಿ ಚ ॥ ೪೦ ॥

---

೩೫. ಅವಳನ್ನು ಮೋಹಿಸಿ ಕಾಮನ ಬಾಣಕ್ಕೆ ಈಡಾದೆನು. ಆಕೆಯು ತನಗೆ ಒಂದು ಉತ್ತಮವಾದ ಪದಾರ್ಥವನ್ನು ಕೊಡಬೇಕೆಂದಳು.

೩೬-೩೭. ಅದೇನೆಂದರೆ, ಕಾಮೋದೆಯಿಂದುಂಟಾದ ಹೂಗಳಿಂದ ಈಶ್ವರನನ್ನು ಪೂಜಿಸಬೇಕು. ಆ ಹೂಗಳ ಸಂಖ್ಯೆಯು ಏಳುಕೋಟಿಯಿರಬೇಕು. ಪೂಜಿಸಿದ ನಂತರ ಅವುಗಳನ್ನು ಮಾಲೆಕಟ್ಟಿ ತನ್ನ ಕತ್ತಿಗೆ ಹಾಕಬೇಕು ಎಂದು.

೩೮. ಅದಕ್ಕೋಸ್ಕರ ದೇವದಾನವರಿಂದ ಹೊಂದಲಸಾಧ್ಯವಾದ ಆ ಕಾಮೋದ ಪುಷ್ಪಗಳಿಂದ ಫಲದಾಯಕನಾದ ಶಂಕರನನ್ನು ಪೂಜಿಸುತ್ತಿದ್ದೇನೆ.

೩೯. ದೇವಿಯು ಹೇಳಿದಳು :—ದುಷ್ಟನಾದ ನಿನ್ನ ಅಭಿಪ್ರಾಯವೆಲ್ಲಿದೆ? ನಿನ್ನ ಧ್ಯಾನವೆಲ್ಲಿ? ನಿನ್ನ ಜ್ಞಾನ ತಾನೆ ಯಾರ ಮೇಲಿದೆ? ಈಶ್ವರನಿಗೂ ನಿನಗೂ ಸ್ವಲ್ಪವೂ ಸಂಬಂಧವೇ ಇಲ್ಲವಲ್ಲ.

೪೦. ಕಾಮೋದೆಯ ರೂಪವು ಹೇಗಿದೆ ಎಂಬುದನ್ನು ಈಗ ಹೇಳು ಆಕೆಯ ನಗುವಿನಿಂದ ಹುಟ್ಟಿದ ಹೂಗಳು ನಿನಗೆಲ್ಲಿ ಸಿಕ್ಕಿದುವು?

॥ ವಿಹುಂಡ ಉವಾಚ ॥

ಭಾವಂ ಧ್ಯಾನಂ ನ ಜಾನಾಮಿ ನ ದೃಷ್ಟ್ವಾ ಸಾ ಮಯಾ ಕದಾ ।
ಗಂಗಾತೋಯಗತಾನ್ಯೇವ ಪರಿಗೃಹ್ಣಾಮಿ ನಿತ್ಯಶಃ ॥ ೪೧ ॥

ತೈರಹಂ ಪೂಜಯಾಮ್ಯೇಕಂ ಶಂಕರಂ ಹಿ ವದಾಮ್ಯಹಂ ।
ಮಮಾಗ್ರೇ ಕಥಿತಂ ವಿಪ್ರ ಶುಕ್ರೇಣಾಪಿ ಮಹಾತ್ಮನಾ ॥ ೪೨ ॥

ವಚನಾತ್ತಸ್ಯ ದೇವಸ್ಯ ಪೂಜಯಾಮಿ ದಿನೇ ದಿನೇ ।
ಏತತ್ತೇ ಸರ್ವಮಾಖ್ಯಾತಂ ಯಚ್ಚ ಪೃಷ್ಟೋಽಸ್ಮಿ ಸಾಂಪ್ರತಂ ॥ ೪೩ ॥

॥ ದೇವ್ಯುವಾಚ ॥

ಕಾಮೋದಾರೋದನಾತ್ಪುಷ್ಪೈರ್ದುಃಖೇನಾಥ ಸಮುದ್ಭವೈಃ ।
ಲಿಂಗಮರ್ಚಯಸೇ ಪಾಪ ಪಾಪಭಾವೇನ ನಿತ್ಯಶಃ ॥ ೪೪ ॥

ಯಾದೃಶೇನಾಪಿ ಭಾವೇನ ಪುಷ್ಪೈಶ್ಚ ಯಾದೃಶೈಸ್ತಥಾ ।
ಅರ್ಚಿತೋ ದೇವದೇವೇಶಸ್ತಾದೃಶಂ ಫಲಮಾಪ್ನುಹಿ ॥ ೪೫ ॥

---

೪೧. ವಿಹುಂಡನು ಹೇಳಿದನು:—ಭಾವವೂ ಧ್ಯಾನವೂ ನನಗೆ ತಿಳಿಯದು. ಆ ಕಾಮೋದೆಯನ್ನು ನಾನು ಒಂದು ಸಲವಾದರೂ ನೋಡಿಯೇ ಇಲ್ಲ. ಗಂಗೆಯ ಪ್ರವಾಹದಲ್ಲಿ ಈ ಹೂಗಳನ್ನು ನಿತ್ಯವೂ ತರುತ್ತೇನೆ.

೪೨. ಅವುಗಳಿಂದ ಶಂಕರನನ್ನು ಪೂಜಿಸುತ್ತೇನೆ. ಅದನ್ನು ಮಾತ್ರ ಹೇಳಬಲ್ಲೆ. ಶುಕ್ರಾಚಾರ್ಯರು ನನಗೆ ಈ ವಿಷಯವನ್ನು ಹೇಳಿದರು.

೪೩. ಆ ಶುಕ್ರನ ಮಾತಿನಂತೆ ನಿತ್ಯವೂ ಪೂಜೆ ಮಾಡುತ್ತೇನೆ. ನೀನು ಕೇಳಿದುದರಿಂದ ಈಗ ಹೇಳಿದೆ.

೪೪. ದೇವಿಯು ಹೇಳಿದಳು:—ಕಾಮೋದೆಯ ಅಳುವಿನಿಂದ ಹುಟ್ಟಿದ ಹೂಗಳಿಂದ ಪಾಪಭಾವದಿಂದ ಕೂಡಿಕೊಂಡು ಲಿಂಗವನ್ನು ಪೂಜಿಸುತ್ತಿರುವೆಯಲ್ಲ!

೪೫. ಯಾವ ರೀತಿಯಾದ ಭಾವದಿಂದಲೂ ಯಾವ ರೀತಿಯಾದ ಪುಷ್ಪಗಳಿಂದಲೂ ದೇವದೇವನಾದ ಶಂಕರನನ್ನು ಪೂಜಿಸುತ್ತೀಯೋ ಅಂತಹ ಫಲವನ್ನು ಹೊಂದುವಿ.

ದಿವ್ಯಪೂಜಾಂ ವಿನಾಶ್ಯೈವಂ ಶೋಕಪುಷ್ಪೈಸ್ಸಮರ್ಚಯೇತ್ ॥
ಏತದ್ದೋಷಸ್ತ್ವಯೈವಾದ್ಯ ಸಮುತ್ಪನ್ನಸ್ಸುದಾರುಣಃ ॥ ೪೬ ॥

ತಸ್ಮಾದ್ದಂಡಂ ಪ್ರದಾಸ್ಯಾಮಿ ಭುಂಕ್ಷ್ವ ಸ್ವಕರ್ಮಜಂ ಫಲಂ ।
ತಸ್ಯ ವಾಕ್ಯಂ ಸಮಾಕರ್ಣ್ಯ ಕಾಲಕೃಷ್ಟೋಽಭ್ಯಭಾಷತ ॥ ೪೭ ॥

ರೇ ರೇ ದುಷ್ಟ ಅನಾಚಾರ ಮಮ ಕರ್ಮಪ್ರದೂಷಕ ।
ಹನ್ಮಿ ತ್ವಾಮಿಹ ಖಡ್ಗೇನ ಅನೇನಾಪಿ ನ ಸಂಶಯಃ ॥ ೪೮ ॥

ಇತ್ಯುಕ್ತ್ವಾ ಬ್ರಾಹ್ಮಣಂ ತಂ ಸ ನಿಶಿತಂ ಖಡ್ಗಮಾದದೇ ।
ಹಂತುಕಾಮಸ್ಸ್ವಶಕ್ತ್ಯಾ ಚ ಅಭ್ಯಧಾವತ ದಾನವಃ ॥ ೪೯ ॥

ಸಾ ದೇವೀ ವಿಪ್ರರೂಪೇಣ ಸಂಕ್ರುದ್ಧಾ ಪರಮೇಶ್ವರೀ ।
ಸ್ವಸ್ಥಾನಮಾಗತಂ ದೃಷ್ಟ್ವಾ ಹುಂಕಾರಂ ವಿಸಸರ್ಜ ಹ ॥ ೫೦ ॥

---

೪೬. ನಾನು ಮಾಡಿದ ಉತ್ತಮ ಪೂಜೆಯನ್ನು ನಾಶಮಾಡಿ ಶೋಕಪುಷ್ಪದಿಂದ ಪೂಜೆ ಮಾಡುತ್ತಿದ್ದೀಯೆ. ದಾರುಣವಾದ ಈ ದೊಡ್ಡ ದೋಷವು ನಿನ್ನಲ್ಲಿ ಹುಟ್ಟಿದೆ.

೪೭. ಆದ್ದರಿಂದ ನಿನಗೆ ಶಿಕ್ಷೆಯನ್ನು ವಿಧಿಸುತ್ತೇನೆ. ನೀನು ಮಾಡಿದ ಕರ್ಮದ ಫಲವನ್ನು ಅನುಭವಿಸು. ಆತನ ಮಾತನ್ನು ಕೇಳಿ ಕಾಲನ ವಶವಾಗಿ ಇಂತೆಂದನು.

೪೮. ಲೋ, ಲೋ, ದುಷ್ಟ, ಅನಾಚಾರ, ನನ್ನ ಕೆಲಸವನ್ನು ಹಳಿಯುವವನೆ? ಈ ನನ್ನ ಕೈಯಿನ ಖಡ್ಗದಿಂದ ನಿನ್ನನ್ನು ಈಗ ಕೊಲ್ಲುತ್ತೇನೆ. ಸಂಶಯವಿಲ್ಲ.

೪೯. ಹೀಗೆಂದು ಆ ಬ್ರಾಹ್ಮಣನಿಗೆ ಹೇಳಿ ಅವನನ್ನು ಕೊಲ್ಲಲು ಹರಿತವಾದ ಕತ್ತಿಯನ್ನು ತೆಗೆದುಕೊಂಡು ಆ ರಾಕ್ಷಸನನು ಎದುರಿಗೆ ಓಡಿಬಂದನು.

೫೦. ಆ ದೇವಿಯು ಆ ಬ್ರಾಹ್ಮಣ ರೂಪದಿಂದಲೇ ಕೋಪಗೊಂಡು ತನ್ನ ಬಳಿಗೆ ಆತನು ಬಂದುದನ್ನು ನೋಡಿ ಹುಂಕಾರಮಾಡಿದಳು.

ತೇನ ಹುಂಕಾರನಾದೇನ ಪತಿತೋ ದಾನವಾಧಮಃ ।
ನಿಶ್ಚೇಷ್ಟಃ ಕಾಮರೂಪೇಣ ವಜ್ರಾಹತ ಇವಾಚಲಃ ॥ ೫೧ ॥

ಪತಿತೇ ದಾನವೇ ತಸ್ಮಿನ್ ಸರ್ವಲೋಕವಿನಾಶಕೇ ।
ಲೋಕಾಸ್ಸ್ವಾಸ್ಥ್ಯಂ ಗತಾಸ್ಸರ್ವೇ ದುಃಖತಾಪವಿವರ್ಜಿತಾಃ ॥ ೫೨ ॥

ಏತಸ್ಮಾತ್ಕಾರಣಾತ್ಪುತ್ರ ಸಾ ಸ್ತ್ರೀ ವೈ ಪರಿರೋದಿತಿ ।
ಗಂಗಾತೀರೇ ವರಾರೋಹಾ ದುಃಖವ್ಯಾಕುಲಮಾನಸಾ ॥ ೫೩ ॥

॥ ವಿಷ್ಣುರುವಾಚ ॥

ಏವಮುಕ್ತ್ವಾ ಸ್ವಪುತ್ರಂ ಚ ಕುಂಜಲಃ ಪಕ್ಷಿಣಾಂ ವರಃ ।
ವಿರರಾಮ ಮಹಾಪ್ರಾಜ್ಞಃ ಕಿಂಚಿನ್ನೋವಾಚ ಭೂಪತೇ ॥ ೫೪ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ಏಕವಿಂಶತ್ಯಧಿಕಶತತಮೋಧ್ಯಾಯಃ**

---

೫೧. ಆ ಹುಂಕಾರದ ಧ್ವನಿಯಿಂದ ಆ ದಾನವನು ನಿಶ್ಚೇಷ್ಟನಾಗಿ ವಜ್ರಾಯುಧದಿಂದ ಹೊಡೆತವನ್ನು ತಿಂದು ಬಿದ್ದ ಪರ್ವತದಂತೆ ಬಿದ್ದನು.

೫೨. ಆ ದುಷ್ಟ ದಾನವನು ಬೀಳಲು ಲೋಕಗಳೆಲ್ಲವೂ ದುಃಖವನ್ನು ಬಿಟ್ಟು ಸುಖಿಗಳಾದವು.

೫೩. ಆ ಕಾಮೋದೆಯು ಈ ಕಾರಣದಿಂದ ಆ ಗಂಗಾತೀರದಲ್ಲಿ ಅಳುತ್ತಿರುವುಳು. ನೀನು ಕೇಳಿದೆಯಲ್ಲಾ, ಅದೆಲ್ಲವನ್ನೂ ಹೇಳಿದ್ದೇನೆ.

೫೪. ವಿಷ್ಣುವು ಹೇಳಿದನು:—ಆ ಪಕ್ಷಿಯಾದ ಕುಂಜಲನು ತನ್ನ ಮಗನಿಗೆ ಇಂತು ಹೇಳಿ ಸುಮ್ಮನಾಗಿ ಮುಂದೆ ಒಂದು ಮಾತನ್ನೂ ಆಡಲಿಲ್ಲ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವಾವಿಂಶತ್ಯಧಿಕಶತತಮೋಽಧ್ಯಾಯಃ

॥ ವಿಷ್ಣುರುವಾಚ ॥

ಕುಂಜಲೋ ಧರ್ಮಪಕ್ಷೀ ಸ ಇತ್ಯುಕ್ತ್ವಾ ತಾನ್ಸುತಾನ್ಪ್ರತಿ ।
ವಿರರಾಮ ಮಹಾಪ್ರಾಜ್ಞಃ ಕಿಂಚಿನ್ನೋವಾಚ ತಾನ್ಪುನಃ ॥ ೧ ॥

ವಟಾಧಸ್ಥೋ ದ್ವಿಜಶ್ರೇಷ್ಠಸ್ತಮುವಾಚ ಮಹಾಶುಕಂ ।
ಕೋ ಭವಾನ್ ಧರ್ಮವಕ್ತಾ ಹಿ ಪಕ್ಷಿರೂಪೇಣ ವರ್ತತೇ ॥ ೨ ॥

ಕಿಂ ವಾ ದೇವೋಽಥ ಗಂಧರ್ವಃ ಕಿಂ ವಾ ವಿದ್ಯಾಧರೋ ಭವಾನ್ ।
ಕಸ್ಯ ಶಾಪಾದಿಮಾಂ ಪ್ರಾಪ್ತೋ ಯೋನಿಂ ಕೀರಸ್ಯ ಪಾತಕೀಂ ॥ ೩ ॥

---

## ನೂರ ಇಪ್ಪತ್ತೆರಡನೆಯ ಅಧ್ಯಾಯವು

೧. ವಿಷ್ಣುವು ಹೇಳಿದನು :—ಧರ್ಮಪಕ್ಷಿಯಾದ ಕುಂಜಲನು ಹೀಗೆ ಹೇಳಿ ಸುಮ್ಮನಾಯಿತು. ಮತ್ತೆ ಮಾತನಾಡಲೇ ಇಲ್ಲ.

೨. ಆಗ ಮರದ ಕೆಳಗಿದ್ದ ಆ ಚ್ಯವನನು ಆ ಗಿಳಿಯನ್ನು ಕುರಿತು ಇಂತೆಂದನು. ಅಪ್ಪಾ ನೀನಾರು ? ಧರ್ಮವನ್ನು ಬೋಧಿಸುತ್ತಾ ಪಕ್ಷಿರೂಪದಿಂದಿರುವೆಯಲ್ಲ; ನೀನು ದೇವತೆಯೆ ? ಗಂಧರ್ವನೇ ? ಅಥವಾ ವಿದ್ಯಾಧರನೇ ? ನೀನಾರು ?

೩. ಯಾರ ಶಾಪದಿಂದ ನಿನಗೆ ಈ ಪಾಪರೂಪವಾದ ಗಿಣಿಯ ಜನ್ಮ ಬಂದಿತು ? ಅತೀಂದ್ರಿಯವಾದ ಜ್ಞಾನವು ನಿನಗಿರಲು ಕಾರಣವೇನು ?

ಕಸ್ಮಾತ್ತ್ವ ಈದೃಶಂ ಜ್ಞಾನಂ ವರ್ತತೇಽತೀಂದ್ರಿಯಂ ಶುಕ ।
ಸುಪುಣ್ಯಸ್ಯ ತು ಕಸ್ಯಾಪಿ ಕಸ್ಯ ವೈ ತಪಸಃ ಫಲಂ ॥ ೪ ॥

ಕಿಂ ವಾ ಪ್ರಚ್ಛನ್ನರೂಪೇಣ ಅನೇನಾಪಿ ಮಹಾಮತೇ ।
ಕಸ್ತ್ವಂ ಸಿದ್ಧೋಽಥ ದೇವೋ ವಾ ತನ್ಮೇ ಕಥಯ ಕಾರಣಂ ॥ ೫ ॥

॥ ಕುಂಜಲ ಉವಾಚ ॥

ಭೋಃ ಸಿದ್ಧ ತ್ವಾಮಹಂ ಜಾನೇ ಕುಲಂ ತೇ ಗೋತ್ರಮುತ್ತಮಂ ।
ವಿದ್ಯಾಂ ತಪಃ ಪ್ರಭಾವಂ ಚ ಯಸ್ಮಾದ್ಭ್ರಮಸಿ ಮೇದಿನೀಂ ॥ ೬ ॥

ಸರ್ವಂ ವಿಪ್ರ ಪ್ರವಕ್ಷ್ಯಾಮಿ ಸ್ವಾಗತಂ ತವ ಸುವ್ರತ ।
ಉಪವಿಶ್ಯಾಸನೇ ಪುಣ್ಯೇ ಛಾಯಾಮಾಶ್ರಯ ಶೀತಳಾಂ ॥ ೭ ॥

ಅವ್ಯಕ್ತಪ್ರಭವೋ ಬ್ರಹ್ಮಾ ತಸಾಜ್ಜಜ್ಞೇ ಪ್ರಜಾಪ್ರತಿಃ ।
ಬ್ರಹ್ಮಣಸ್ತು ಗುಣೈರ್ಯುಕ್ತೋ ಭೃಗುರ್ಬ್ರಹ್ಮಸಮೋ ದ್ವಿಜಃ ॥ ೮ ॥

---

೪-೫. ಯಾವ ಮಹಾಪುಣ್ಯದ ಅಥವಾ ತಪಸ್ಸಿನ ಫಲವು? ಅಥವಾ ಮರೆ ಮಾಚಿದ ಈ ರೂಪದಿಂದ್ದೀಯೋ? ನೀನು ಸಿದ್ಧನೋ? ಗಂಧರ್ವನೋ? ದೇವತೆಯೋ? ಅದರ ಕಾರಣವನ್ನು ಹೇಳು.

೬. ಕುಂಜಲನು ಹೇಳಿದನು:—ಎಲೈ ಸಿದ್ಧನೇ, ನಿನ್ನನ್ನೂ ನಿನ್ನ ಕುಲ ಗೋತ್ರಗಳನ್ನೂ ನಾನು ಬಲ್ಲೆ. ನಿನ್ನ ವಿದ್ಯೆ ತಪಸ್ಸಿನ ಪ್ರಭಾವಗಳನ್ನೂ ಬಲ್ಲೆ. ನೀನು ಭೂಮಿಯನ್ನು ಏತಕ್ಕೆ ಸುತ್ತುತ್ತಾ ಇರುವಿ ಎಂಬುದನ್ನೂ ಬಲ್ಲೆ.

೭. ಎಲೈ ಬ್ರಾಹ್ಮಣನೇ, ನಿನಗೆ ಸ್ವಾಗತವೇ? ಎಲ್ಲವನ್ನೂ ಹೇಳುತ್ತೇನೆ. ಒಳ್ಳೆಯ ಆಸನದಲ್ಲಿ ತಣ್ಣಗಿರುವ ನೆರಳಿನಲ್ಲಿ ಕುಳಿತುಕೋ.

೮. ಬ್ರಹ್ಮನ ಉತ್ಪತ್ತಿಯು ಅವ್ಯಕ್ತವಾದುದು. ಅಂದರೆ ತಿಳಿಯದು. ಅವನಿಂದ ಪ್ರಜಾಪತಿಯು ಹುಟ್ಟಿದನು. ಆ ಪ್ರಜಾಪತಿಯ ಹೆಸರು ಭೃಗುವೆಂದು. ಆತನು ಗುಣಗಳಲ್ಲಿ ಬ್ರಹ್ಮನಿಗೆ ಸಮವಾಗಿದ್ದನು.

ಭಾರ್ಗವೋ ನಾಮ ತಸ್ಯಾಸೀತ್ಸರ್ವಧರ್ಮಾರ್ಥತತ್ತ್ವವಿತ್ ।
ತಸ್ಯಾನ್ವಯೇ ಭವಾನ್ವಿಪ್ರ ಚ್ಯವನಃ ಖ್ಯಾತಿಮಾನ್ ಭುವಿ ॥ ೯ ॥

ನಾಹಂ ದೇವೋ ನ ಗಂಧರ್ವೋ ನಾಹಂ ವಿದ್ಯಾಧರಃ ಪುನಃ ।
ಯೋಽಹಂ ವಿಪ್ರ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೧೦ ॥

ಕಶ್ಯಪಸ್ಯ ಕುಲೇ ಜಾತಃ ಕಶ್ಚಿದ್ಬ್ರಾಹ್ಮಣಸತ್ತಮಃ ।
ವೇದವೇದಾಂಗತತ್ತ್ವಜ್ಞಃ ಸರ್ವಧರ್ಮಪ್ರಕಾಶಕಃ ॥ ೧೧ ॥

ವಿದ್ಯಾಧರ ಇತಿ ಖ್ಯಾತಃ ಕುಲಶೀಲಗುಣೈರ್ಯುತಃ ।
ರಾಜಮಾನಃ ಸದಾ ವಿಪ್ರಃ ಪ್ರಭಾವೈಸ್ತಪಸಃ ಸದಾ ॥ ೧೨ ॥

ಸಂಬಭೂವುಸ್ಸುತಾಸ್ತಸ್ಯ ತ್ರಯೋ ವಿದ್ಯಾಧರಸ್ಯ ವೈ ।
ವಸುಶರ್ಮಾ ನಾಮಶರ್ಮಾ ಧರ್ಮಶರ್ಮಾ ತು ತೇ ತ್ರಯಃ ॥ ೧೩ ॥

---

೯. ಅವನ ಮಗನು ಭಾರ್ಗವನೆಂದು ಪ್ರಸಿದ್ಧನಾದನು. ಅವನು ಸಕಲ ಧರ್ಮಗಳನ್ನೂ ಬಲ್ಲವನು. ಅವನ ವಂಶದಲ್ಲಿ ಪ್ರಸಿದ್ಧನಾದ ಚ್ಯವನನೆಂದು ನೀನು ಹುಟ್ಟಿರುವೆ.

೧೦. ನಾನು ಗಂಧರ್ವನೂ ಅಲ್ಲ. ದೇವನೂ ಅಲ್ಲ. ವಿದ್ಯಾಧರನು ಮೊದಲೇ ಅಲ್ಲ. ನಾನು ಯಾರೆಂಬುದನ್ನು ಹೇಳುತ್ತೇನೆ ಕೇಳು.

೧೧-೧೨. ಕಶ್ಯಪನ ಕುಲದಲ್ಲಿ ಒಬ್ಬ ಯೋಗ್ಯನಾದ ಬ್ರಾಹ್ಮಣನು ಹುಟ್ಟಿದನು. ಅವನು ವೇದವೇದಾಂಗಗಳನ್ನು ಬಲ್ಲವನಾಗಿ, ಎಲ್ಲಾ ಧರ್ಮಗಳನ್ನು ತಿಳಿದವನಾಗಿ, ಕುಲಶೀಲಗಳಿಂದ ಕೂಡಿದವನಾಗಿದ್ದನು. ವಿದ್ಯಾಧರನೆಂದು ಅವನ ಹೆಸರಾಗಿದ್ದಿತು. ಆ ಬ್ರಾಹ್ಮಣನು ತನ್ನ ವಿದ್ಯಾಪ್ರಭಾವದಿಂದಲೂ ತಪಸ್ಸಿನಿಂದಲೂ ಯಾವಾಗಲೂ ಪ್ರಕಾಶಿಸುತ್ತಿದ್ದನು.

೧೩. ಅವನಿಗೆ ವಸುಶರ್ಮ, ನಾಮಶರ್ಮ, ಧರ್ಮಶರ್ಮನೆಂದು ಮೂರು ಮಕ್ಕಳಾದರು. ಅವರಲ್ಲಿ ನಾನೇ ಗುಣಗಳಿಲ್ಲದ ಕಿರಿಯವನಾದ ಧರ್ಮಶರ್ಮನು.

**ತೇಷಾಮಹಂ ಧರ್ಮಶರ್ಮಾ ಕನಿಷ್ಠೋ ಗುಣವರ್ಜಿತಃ ।**
**ವಸುಶರ್ಮಾ ಮಮ ಭ್ರಾತಾ ವೇದಶಾಸ್ತ್ರಾರ್ಥಪಾರಗಃ　　॥ ೧೪ ॥**

**ಆಚಾರೈಶ್ಚ ಸಮಾಯುಕ್ತೋ ವಿದ್ಯಾದಿಸ್ವಗುಣೈಃ ಪುನಃ ।**
**ಸೋಮಶರ್ಮಾ ಮಹಾಪ್ರಾಜ್ಞಸ್ತದ್ವಚ್ಚಾಸೀದ್ಗುಣಾಧಿಕಃ　　॥ ೧೫ ॥**

**ಅಹಮೇವ ಮಹಾಮೂರ್ಖಃ ಸಂಜಾತಶ್ಶೃಣು ಸತ್ತಮ ।**
**ವಿದ್ಯಾನಾಮುತ್ತಮಂ ವಿಪ್ರ ಭಾವಮರ್ಥಂ ಶುಭಂ ಕದಾ　　॥ ೧೬ ॥**

**ನ ಶೃಣೋಮಿ ನ ವೈ ಯಾಮಿ ಗುರುಗೇಹಮನುತ್ತಮಂ ।**
**ತತಸ್ತು ಜನಕೋ ಮೇ ತು ಮಾಮೇವ ಪರಿಚಿಂತಯೇತ್　　॥ ೧೭ ॥**

**ಧರ್ಮಶರ್ಮೇತಿ ಮೇ ಪುತ್ರೋ ಹ್ಯಸ್ಯ ನಾಮ ನಿರರ್ಥಕಂ ।**
**ಸಂಜಾತಃ ಕ್ಷಿತಿಮಧ್ಯೇ ತು ನ ವಿದ್ವಾನ್ನೋ ಗುಣಾಕರಃ　　॥ ೧೮ ॥**

---

೧೪. ವಸುಶರ್ಮನೆಂಬ ನನ್ನ ಸೋದರನು ವೇದಶಾಸ್ತ್ರಗಳಲ್ಲಿ ಪಂಡಿತನಾಗಿ ಆಚಾರಯುಕ್ತನಾಗಿ ವಿದ್ಯೆ ವಿನಯಗಳಿಂದ ಕೂಡಿದ್ದನು.

೧೫. ಸೋಮಶರ್ಮನೆಂಬುವನೂ ಆ ವಸುಶರ್ಮನಂತೆಯೇ ಗುಣಿಯಾಗಿದ್ದನು. ನಾನೊಬ್ಬನೇ ಈ ಮೂವರಲ್ಲಿ ಮೂರ್ಖನಾದೆನು.

೧೬. ವಿದ್ಯೆಗಳ ಉತ್ತಮವಾದ ಅರ್ಥವನ್ನಾಗಲಿ ಭಾವವನ್ನಾಗಲಿ ಕೇಳಿದವನೇ ಅಲ್ಲ. ಪವಿತ್ರವಾದ ಗುರುವಿನ ಮನೆಗೆ ಹೋದವನೇ ಅಲ್ಲ.

೧೭. ಆದ್ದರಿಂದ ನನ್ನ ತಂದೆಯು ನನ್ನ ವಿಷಯವಾಗಿಯೇ ಯೋಚಿಸುತ್ತಿದ್ದನು.

೧೮. ಧರ್ಮಶರ್ಮನೆಂಬ ಈತನ ಹೆಸರು ಉಪಯೋಗವಿಲ್ಲದುದಾಯಿತು. ಭೂಮಿಯಲ್ಲಿ ಉಪಯೋಗವಿಲ್ಲದೆಯೇ ಹೋದನು. ವಿದ್ವಾಂಸನಾಗಲಿಲ್ಲ. ಅಥವಾ ಗುಣಿಯೂ ಆಗಲಿಲ್ಲ.

ಇತಿ ಚಿಂತ್ಯ ಸ ಧರ್ಮಾತ್ಮಾ ಮಾಮುವಾಚ ಸುದುಃಖಿತಃ ।
ವ್ರಜ ಪುತ್ರ ಗುರೋರ್ಗೇಹಂ ವಿದ್ಯಾರ್ಥಂ ಪರಿಸಾಧಯ ॥ ೧೯ ॥

ಏವಮಾಕರ್ಣ್ಯ ತತ್ತಸ್ಯ ಪಿತುರ್ವಾಕ್ಯಂ ಮಯಾ ಶುಭಂ ।
ನಾಹಂ ತಾತ ಗಮಿಷ್ಯಾಮಿ ಗುರೋರ್ಗೇಹಂ ಸುದುಃಖದಂ ॥ ೨೦ ॥

ಯತ್ರೈವ ತಾಡನಂ ನಿತ್ಯಂ ಭ್ರೂಭಂಗಾದಿ ಚ ಕ್ರೋಧನಂ ।
ಅನ್ನಂ ನ ದೃಶ್ಯತೇ ತತ್ರ ಕರ್ಮಣಾ ಶೃಣು ಸತ್ತಮ ॥ ೨೧ ॥

ದಿವಾ ರಾತ್ರೌ ನ ನಿದ್ರಾಸ್ತಿ ನಾಸ್ತಿ ಸುಖಸ್ಯ ಸಾಧನಂ ।
ತಸ್ಮಾದ್ಧಿ ಕಾರಣಾತ್ತಾತ ನ ಯಾಸ್ಯೇ ಗುರುಮಂದಿರಂ ॥ ೨೨ ॥

ವಿದ್ಯಾಕಾರ್ಯಂ ನ ಕರಿಷ್ಯೇ ಕ್ರೀಡಾರ್ಥಮುತ್ಸುಕಃ ಪಿತಃ ।
ಭೋಕ್ಷ್ಯೇ ಸ್ವಪ್ಸ್ಯೇ ಪ್ರಸಾದಾತ್ತೇ ಕರಿಷ್ಯೇ ಕ್ರೀಡನಂ ಪುನಃ ॥ ೨೩ ॥

---

೧೯. ಆ ನನ್ನ ತಂದೆಯು ಹೀಗೆ ಯೋಚಿಸಿ ದುಃಖದಿಂದ " ಮಗನೇ, ಗುರುಗಳ ಮನೆಗೆ ಹೋಗು. ವಿದ್ಯೆಯನ್ನು ಗಳಿಸು " ಎಂದು ಹೇಳಿದನು.

೨೦. ತಂದೆಯ ಈ ಉತ್ತಮವಾದ ಮಾತನ್ನು ಕೇಳಿ ತಂದೆಯೇ, ನಾನು ಗುರುವಿನ ಮನೆಗೆ ಹೋಗುವುದಿಲ್ಲ. ಅದು ಬಹು ದುಃಖಕರವಾದುದು.

೨೧. ಅಲ್ಲಿ ಯಾವಾಗಲೂ ಏಟು ಬೀಳುತ್ತದೆ. ಹುಬ್ಬು ಗಂಟುಹಾಕಿಕೊಳ್ಳುವುದು, ಬಯ್ಯುವುದು ಮುಂತಾದ ಕೋಪಗಳೂ ಕಾಣುತ್ತವೆ. ಅಲ್ಲಿ ಅನ್ನವೇ ಸಿಕ್ಕುವಂತಿಲ್ಲ.

೨೨. ಆ ಕೆಲಸದಿಂದ ಹಗಲಿರುಳೂ ನಿದ್ದೆಯೇ ಇರುವುದಿಲ್ಲ. ಸುಖಪಡುವ ವಿಷಯಗಳು ಸ್ವಲ್ಪವೂ ಇಲ್ಲ. ಆದ್ದರಿಂದ ಅಪ್ಪ! ಗುರುವಿನ ಮನೆಗೆ ನಾನು ಹೋಗುವುದಿಲ್ಲ.

೨೩. ವಿದ್ಯೆ ಕಲಿಯುವುದನ್ನು ಮಾಡಲಾರೆ. ಆಟದಲ್ಲೇ ಆಸೆ ಇದೆ. ಊಟ ಮಾಡುತ್ತೇನೆ. ಮಲಗುತ್ತೇನೆ. ನಿನ್ನ ಅನುಗ್ರಹದಿಂದ ಆಡುತ್ತೇನೆ.

**ಡಿಂಭೈಸ್ಸಾರ್ಧಂ ಸುಖೇನಾಪಿ ದಿವಾರಾತ್ರಾವತಂದ್ರಿತಃ ।**
**ಮಾಮುವಾಚ ಸ ಧರ್ಮಾತ್ಮಾ ಮೂಢಂ ಜ್ಞಾತ್ವಾ ಸುದುಃಖಿತಃ ॥ ೨೪ ॥**

**ಮಾ ಪುತ್ರ ಸಾಹಸಂ ಕಾರ್ಷೀರ್ವಿದ್ಯಾರ್ಥಮುದ್ಯಮಂ ಕುರು ।**
**ವಿದ್ಯಯಾ ಪ್ರಾಪ್ಯತೇ ಸೌಖ್ಯಂ ಯಶಃ ಕೀರ್ತಿಸ್ತಥಾತುಲಾ ॥ ೨೫ ॥**

**ಜ್ಞಾನಂ ಸ್ವರ್ಗಃ ಸುಮೋಕ್ಷಶ್ಚ ತಸ್ಮಾದ್ವಿದ್ಯಾಂ ಪ್ರಸಾಧಯ ।**
**ಪೂರ್ವಂ ಸುದುಃಖಮೂಲಾ ತು ಪಶ್ಚಾದ್ವಿದ್ಯಾ ಸುಖಪ್ರದಾ ॥ ೨೬ ॥**

**ತಸ್ಮಾತ್ಸಾಧಯ ಪುತ್ರ ತ್ವಂ ವಿದ್ಯಾಂ ಗುರುಗೃಹಂ ವ್ರಜ ।**
**ಪಿತುರ್ವಾಕ್ಯಮಕುರ್ವಾಣೋ ಹ್ಯಹಮೇವಂ ದಿನೇ ದಿನೇ ॥ ೨೭ ॥**

**ಯತ್ರ ತತ್ರ ಸ್ಥಿತೋ ನಿತ್ಯಮರ್ಥಹಾನಿಂ ಕರೋಮ್ಯಹಂ ।**
**ಉಪಹಾಸಃ ಕೃತೋ ಲೋಕೈರ್ಮಮ ವಿಪ್ರ ಪ್ರಕುತ್ಸನಂ ॥ ೨೮ ॥**

---

೨೪. ಹುಡುಗರೊಡನೆ ಹಗಲೂ ರಾತ್ರಿಯೂ ಸೋಮಾರಿತನವಿಲ್ಲದೆ ಆಡುತ್ತೇನೆ. ಎನ್ನಲು ನಾನು ಮೂಢನೆಂದು ತಿಳಿದು ದುಃಖಗೊಂಡು ಇಂತೆಂದನು.

೨೫. ಅಪ್ಪ ಮಗುವೇ, ಮೀರಿದ ಕೆಲಸಕ್ಕೆ ಹೋಗಬೇಡ. ವಿದ್ಯೆಗೋಸ್ಕರ ಪ್ರಯತ್ನಪಡು. ವಿದ್ಯೆಯಿಂದ ಸುಖವೂ ಯಶಸ್ಸೂ ಬಹು ಕೀರ್ತಿಯೂ ಬರುತ್ತದೆ.

೨೬. ಆ ವಿದ್ಯೆಯಿಂದ ಜ್ಞಾನ, ಸ್ವರ್ಗ, ಮೋಕ್ಷಗಳು ಬರುತ್ತವೆ. ಆದ್ದರಿಂದ ವಿದ್ಯೆಯನ್ನು ಸಂಪಾದಿಸು. ವಿದ್ಯೆಯು ಮೊದಲು ಕಷ್ಟಕೊಟ್ಟು ಅನಂತರ ಸುಖಕ್ಕೆ ಕಾರಣವಾಗುತ್ತದೆ. ಆದ್ದರಿಂದ ವಿದ್ಯೆಯನ್ನು ಸಂಪಾದಿಸು. ಗುರುವಿನ ಮನೆಗೆ ಹೋಗು.

೨೭-೨೮. ನಾನು ತಂದೆಯು ಹೇಳಿದಂತೆ ಮಾಡದೆ ಪ್ರತಿದಿನವೂ ಅಲ್ಲಿ ಇಲ್ಲಿ ನಿಂತು, ಪ್ರಯೋಜನವನ್ನು ಪಡೆಯದೆ ಹೋದೆನು. ಜನರು ನನ್ನನ್ನು ನೋಡಿ ನಗುತ್ತಾ ಹಾಸ್ಯಮಾಡುತ್ತ ತಿರಸ್ಕರಿಸುತ್ತಿದ್ದರು.

ಮಮ ಲಜ್ಜಾ ಸಮುತ್ಪನ್ನಾ ಜೀವನಾಶಕರೀ ತದಾ ।
ವಿದ್ಯಾರ್ಥಮುದ್ಯತೋ ವಿಪ್ರ ಕಂ ಗುರುಂ ಪ್ರಾರ್ಥಯಾಮ್ಯಹಂ ॥ ೨೯ ॥

ಇತಿ ಚಿಂತಾಪರೋ ಜಾತೋ ದುಃಖಶೋಕಸಮಾಕುಲಃ ।
ಕಥಂ ವಿದ್ಯಾಮಹಂ ಜಾನೇ ಕಥಂ ವಿಂದಾಮ್ಯಹಂ ಗುರ್ಣ ॥ ೩೦ ॥

ಕಥಂ ಮೇ ಜಾಯತೇ ಸ್ವರ್ಗಃ ಕಥಂ ಮೋಕ್ಷಂ ವ್ರಜಾಮ್ಯಹಂ ।
ಇತ್ಯೇವಂ ಚಿಂತಯನ್ವಿಪ್ರ ವಾರ್ಧಕ್ಯಮಗಮಂ ಪುನಃ ॥ ೩೧ ॥

ದೇವತಾಯತನೇ ದುಃಖೀ ಉಪವಿಷ್ಟಸ್ತ್ವಹಂ ಕದಾ ।
ಮದ್ಭಾಗ್ಯೈಃ ಪ್ರೇಷಿತಃ ಕಶ್ಚಿತ್ಸಿದ್ಧೋಽಕಸ್ಮಾತ್ಸಮಾಗತಃ ॥ ೩೨ ॥

ನಿರಾಶ್ರಯೋ ನಿರಾಹಾರಃ ಸದಾನಂದಸ್ತು ನಿಸ್ಪೃಹಃ ।
ಏಕಾಂತಮಾಸ್ಥಿತೋ ವಿಪ್ರ ದಯಾಯುಕ್ತೋ ಜಿತೇಂದ್ರಿಯಃ ॥ ೩೩ ॥

---

೨೯. ಆಗ ನನಗೆ ಪ್ರಾಣಗಳನ್ನು ಬಿಡುವಷ್ಟು ನಾಚಿಕೆಯಾಯಿತು. ಆ ಮೇಲೆ ವಿದ್ಯೆ ಕಲಿಯಲು ಪ್ರಯತ್ನಪಟ್ಟು ಯಾವ ಗುರುವನ್ನು ಕೇಳಿಕೊಳ್ಳಲಿ. ಎಲ್ಲಿಗೆ ಹೋಗಲಿ ಎಂಬ ಯೋಚನೆಯಿಂದ ದುಃಖಿತನಾದೆನು.

೩೦-೩೧. ನಾನು ವಿದ್ಯೆಯನ್ನು ಹೇಗೆ ಕಲಿಯಲಿ? ಗುರುವನ್ನು ಹೇಗೆ ಹೊಂದಲಿ? ನನಗೆ ಮೋಕ್ಷವಾಗಲಿ ಸ್ವರ್ಗವಾಗಲಿ ಹೇಗೆ ಸಿಕ್ಕುತ್ತದೆ? ಎಂಬ ಯೋಚನೆಯಲ್ಲಿಯೇ ವಾರ್ಧಿಕ್ಯವನ್ನು ಹೊಂದಿದೆನು.

೩೨. ದುಃಖಗೊಂಡು ಒಂದುಸಾರಿ ದೇವಸ್ಥಾನದಲ್ಲಿ ಕುಳಿತಿರುವಾಗ, ನನ್ನ ಭಾಗ್ಯದಿಂದ ಅಲ್ಲಿಗೆ ಒಬ್ಬ ಸಿದ್ಧನು ಬಂದನು.

೩೩. ಅವನು ಆಶ್ರಯವಿಲ್ಲದವನು. ಆಹಾರ ತಿನ್ನದವನು. ನಿತ್ಯ ಸಂತೋಷಿಯು. ಆಶೆ ಬಿಟ್ಟವನು. ಜೊತೆ ಸೇರದವನು. ದಯಾಳುವು. ಜಿತೇಂದ್ರಿಯನು. ಯಾವಾಗಲೂ ಪರಬ್ರಹ್ಮನಲ್ಲಿ ಆಸಕ್ತನು. ಸಮಾಧಿಯನ್ನು ತಿಳಿದವನು.

ಪರಬ್ರಹ್ಮಣಿ ಸಂಲೀನೋ ಜ್ಞಾನಧ್ಯಾನಸಮಾಧಿನಾ ।
ತಮಹಂ ಸಂಶ್ರಿತೋ ವಿಪ್ರ ಜ್ಞಾನರೂಪಂ ಮಹಾಮತಿಂ ॥ ೩೪ ॥

ಅಹಂ ಸಿದ್ಧಪ್ರಭಾವೇನ ಭಕ್ತ್ಯಾ ನಮಿತಕಂಧರಃ ।
ನಮಸ್ಕೃತ್ಯ ಮಹಾತ್ಮಾನಂ ಪುರತಸ್ತಸ್ಯ ಸಂಸ್ಥಿತಃ ॥ ೩೫ ॥

ದೀನರೂಪೋ ಹ್ಯಹಂ ಜಾತೋ ಮಂದಭಾಗ್ಯಸ್ತ್ವಹಂ ಯತಃ ।
ತೇನಾಹಂ ಪೃಚ್ಛಿತೋ ವಿಪ್ರ ಕಥಂ ಭವಾನ್ ಪ್ರಶೋಚತಿ ॥ ೩೬ ॥

ಕೇನಾಭಿಪ್ರಾಯಭಾವೇನ ದುಃಖಮೇವಂ ಭುನಕ್ತಿ ವೈ ।
ತೇನೈವ ಮುಕ್ತೋ ವಿಪ್ರೇಂದ್ರ ಘೃಣಿನಾ ಯೋಗಿನಾ ತದಾ ॥ ೩೭ ॥

ಸುಮೂಢತ್ವಂ ಮಯಾ ತಸ್ಯ ಪೂರ್ವವೃತ್ತಾಂತಮೇವ ಹಿ ।
ತಸ್ಮೈ ಸಂಶ್ರಾವಿತಂ ಸರ್ವಂ ಸರ್ವಜ್ಞತ್ವಂ ಕಥಂ ವ್ರಜೇತ್ ॥ ೩೮ ॥

---

೩೪-೩೫. ಆ ಜ್ಞಾನಿಯೂ ಬುದ್ಧಿವಂತನೂ ಆದ ಆತನನ್ನು ನಾನು ಆಶ್ರಯಿಸಿದೆನು. ಆ ಸಿದ್ಧನ ಪ್ರಭಾವದಿಂದ ನಾನು ಭಕ್ತಿಯಿಂದ ತಲೆ ತಗ್ಗಿಸಿಕೊಂಡು ನಮಸ್ಕಾರಮಾಡಿ ಆ ಮಹಾತ್ಮನ ಮುಂದೆ ಕುಳಿತುಕೊಂಡೆನು. ನಾನು ಮಂದಭಾಗ್ಯನಾದುದರಿಂದ ಅವನ ಮುಂದೆ ದೀನನಾಗಿ ಕುಳಿತಿದ್ದೆನು.

೩೬. ನೀನೇತಕ್ಕೆ ದುಃಖಿತನಾಗಿರುವೆ? ನಿನ್ನ ಅಭಿಪ್ರಾಯವೇನು? ಈ ದುಃಖಕ್ಕೆ ಕಾರಣವೇನು? ಎಂದು ಅವನು ನನ್ನನ್ನು ಕೇಳಿದನು.

೩೭-೩೮. ದಯಾವಂತನಾದ ಆತನು ಹೀಗೆ ಕೇಳಲು ನನ್ನ ಮೂರ್ಖತನವೇ ಮುಂತಾದ ಹಿಂದಿನ ವೃತ್ತಾಂತವನ್ನೆಲ್ಲಾ ಅವನಿಗೆ ಹೇಳಿ ನನಗೆ ಸರ್ವಜ್ಞತ್ವವು ಬರುವುದು ಹೇಗೆ?

**ಏತದರ್ಥಮಹಂ ದುಃಖೀ ಭರ್ವಾ ಮಮ ಗತಿರ್ಧ್ರುವಂ ।**
**ಸ ಪ್ರೋವಾಚ ಮಹಾತ್ಮಾ ಮೇ ಸರ್ವಂ ಜ್ಞಾನಸ್ಯ ಕಾರಣಂ ॥ ೩೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಗುರುತೀರ್ಥೇ ಚ್ಯವನನೋಪಾಖ್ಯಾನೇ ದ್ವಾವಿಂಶತ್ಯಧಿಕಶತತಮೋಧ್ಯಾಯಃ**



---

೩೯. ಅದಕ್ಕೋಸ್ಕರ ನಾನು ದುಃಖಪಡುತ್ತಿದ್ದೇನೆ. ನೀನೇ ನನಗೆ ದಿಕ್ಕಾಗಿ ಇದ್ದೀಯೆ. ಇದು ನಿಶ್ಚಯ. ಎನ್ನಲು ಆಗ ಆ ಮಹಾನುಭಾವನು ಜ್ಞಾನಕ್ಕೆ ಕಾರಣ ವಾದುದೆಲ್ಲವನ್ನೂ ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ, ನೂರ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ

॥ ಸಿದ್ಧ ಉವಾಚ ॥

ಶ್ರೂಯತಾಮಭಿಧಾಸ್ಯಾಮಿ ಜ್ಞಾನರೂಪಂ ತವಾಗ್ರತಃ ।
ನ ಸ್ಥೋ ಜ್ಞಾನಸ್ಯ ವೈ ಹಸ್ತೌ ನ ಚ ಪಾದೌ ನ ಚಕ್ಷುಷೀ ॥ ೧ ॥

ನಾಸಾಕರ್ಣೌ ಚ ಜ್ಞಾನಸ್ಯ ನಾಸ್ತಿ ವೈ ಪ್ರಾಣಸಂಗ್ರಹಃ ।
ಕೇನ ದೃಷ್ಟಂ ತು ವೈ ಜ್ಞಾನಂ ಕಾನಿ ಲಿಂಗಾನಿ ತಸ್ಯ ಚ ॥ ೨ ॥

ಆಕಾರೈರ್ವರ್ಜಿತಂ ನಿತ್ಯಂ ಸರ್ವಂ ವೇತ್ತಿ ಸ ಸರ್ವವಿತ್ ।
ದಿವಾ ಪ್ರಕಾಶಕಸ್ಸೂರ್ಯೋ ರಾತ್ರೌ ಪ್ರಕಾಶಯೇಚ್ಛಶೀ ॥ ೩ ॥

ಗೃಹೇ ಪ್ರಕಾಶಕೋ ದೀಪೋ ಲೋಕಮಧ್ಯೇ ಸ್ಥಿತಾ ಹ್ಯಮೀ ।
ತತ್ಪದಂ ಕೇನ ವೈ ಧಾಮ್ನಾ ದೃಶ್ಯತೇ ಶೃಣು ಸತ್ತಮ ॥ ೪ ॥

---

## ನೂರ ಇಪ್ಪತ್ತಮೂರನೆಯ ಅಧ್ಯಾಯವು

೧. ಸಿದ್ಧನು ಹೇಳಿದನು:—ಜ್ಞಾನದ ಸ್ವರೂಪವನ್ನು ನಿನ್ನೆದುರಿಗೆ ಹೇಳುತ್ತೇನೆ ಕೇಳು. ಜ್ಞಾನಕ್ಕೆ ಕೈ, ಕಾಲು, ಕಣ್ಣು, ಕಿವಿ, ಮೂಗು, ಪ್ರಾಣಗಳಾವುವೂ ಇಲ್ಲ.

೨-೩. ಯಾರುತಾನೇ ಆ ಜ್ಞಾನವನ್ನು ನೋಡಬಲ್ಲರು? ಅದರ ಗುರುತನ್ನು ತಿಳಿಯಬಲ್ಲರು? ಅದಕ್ಕೆ ಆಕಾರವೇ ಇಲ್ಲ. ಅದನ್ನು ಬಲ್ಲವನೇ ಸರ್ವಜ್ಞನು.

೪. ಸೂರ್ಯನು ಹಗಲಿನಲ್ಲಿ ಪ್ರಕಾಶಕನು. ಚಂದ್ರನು ರಾತ್ರಿಯಲ್ಲಿ ಪ್ರಕಾಶಿಸುತ್ತಾನೆ. ದೀಪವು ಮನೆಯಲ್ಲಿ ಪ್ರಕಾಶಿಸುತ್ತದೆ. ಇವಿಷ್ಟೂ ಲೋಕದ ಮಧ್ಯದಲ್ಲಿವೆ. ಆ ಜ್ಞಾನದ ಜಾಗವನ್ನು ಯಾವ ಬೆಳಕಿನಿಂದ ನೋಡಬಹುದು?

ನ ವಿಂದಂತಿ ಚ ಮೂಢಾಸ್ತೇ ಮೋಹಿತಾ ವಿಷ್ಣುಮಾಯಯಾ ।
ಕಾಯಮಧ್ಯೇ ಸ್ಥಿತಂ ಜ್ಞಾನಂ ಧ್ಯಾನದೀಪ್ತಮನೌಪಮಂ ॥ ೫ ॥

ತತ್ಪದಂ ತೇನ ದೃಶ್ಯೇತ ಚಂದ್ರಸೂರ್ಯಾದಿಭಿರ್ನ ಚ ।
ಹಸ್ತಪಾದಂ ವಿನಾ ಜ್ಞಾನಮಚಕ್ಷುಃ ಕರ್ಣವರ್ಜಿತಂ ॥ ೬ ॥

ಸರ್ವತ್ರ ಗತಿಮಚ್ಚಾಸ್ತಿ ಸರ್ವಂ ಗೃಹ್ಣಾತಿ ಪಶ್ಯತಿ ।
ಸರ್ವಮಾಘ್ರಾತಿ ವಿಪೇಂದ್ರ ಶೃಣೋತ್ಯೇವ ನ ಸಂಶಯಃ ॥ ೭ ॥

ನಾಸ್ತಿ ಜ್ಞಾನಸಮೋ ದೀಪಃ ಸರ್ವಾಂಧಕಾರನಾಶನೇ ।
ಸ್ವರ್ಗೇ ಭೂಮೌ ಚ ಪಾತಾಳೇ ಸ್ಥಾನೇ ಸ್ಥಾನೇ ಚ ದೃಶ್ಯತೇ ॥ ೮ ॥

ಕಾಯಮಧ್ಯೇ ಸ್ಥಿತಂ ಜ್ಞಾನಂ ನ ವಿಂದಂತಿ ಕುಬುದ್ಧಯಃ ।
ಜ್ಞಾನಸ್ಥಾನಂ ಪ್ರವಕ್ಷ್ಯಾಮಿ ಯಸ್ಮಾಜ್ಜ್ಞಾನಂ ಪ್ರಜಾಯತೇ ॥ ೯ ॥

---

೫. ವಿಷ್ಣುಮಾಯೆಯಿಂದ ಮೋಹಿತರಾದ ಮೂಢರು ಅದನ್ನು ತಿಳಿಯಲಾರರು. ಆ ಜ್ಞಾನವು ದೇಹದ ಮಧ್ಯದಲ್ಲಿಯೇ ಇದೆ. ಧ್ಯಾನದಿಂದ ಆ ಉತ್ತಮ ಜ್ಞಾನವನ್ನು ತಿಳಿಯಬಹುದು.

೬. ಆ ಜ್ಞಾನದ ಸ್ಥಾನವು ಧ್ಯಾನದಿಂದ ತಿಳಿಯುತ್ತದೆಯೇ ಹೊರತು ಚಂದ್ರ ಸೂರ್ಯರಿಂದುಂಟಾದ ಬೆಳಕಿನಿಂದ ತಿಳಿಯುವುದಿಲ್ಲ. ಆ ಜ್ಞಾನಕ್ಕೆ ಕೈಕಾಲುಗಳಿಲ್ಲ. ಕಣ್ಣಿಲ್ಲ. ಕಿವಿಯಿಲ್ಲ.

೭. ಅದು ಎಲ್ಲಾ ಕಡೆಗೂ ಹೋಗಬಲ್ಲದು. ಎಲ್ಲವನ್ನೂ ಹಿಡಿಯಬಲ್ಲದು. ಎಲ್ಲವನ್ನೂ ಮೂಸಿನೋಡಬಲ್ಲದು. ಕೇಳಿಯೂ ಕೇಳುತ್ತದೆ. ಸಂಶಯವಿಲ್ಲ.

೮. ಅಂಧಕಾರನಾಶನದಲ್ಲಿ ಜ್ಞಾನಕ್ಕೆ ಸಮಾನವಾದ ದೀಪವೇ ಇಲ್ಲ. ಸ್ವರ್ಗ, ಭೂಮಿ, ಪಾತಾಳ, ಎಲ್ಲಾ ಜಾಗದಲ್ಲೂ ಕಾಣಿಸುತ್ತದೆ. ದೇಹದ ಮಧ್ಯದಲ್ಲಿರುವ ಜ್ಞಾನವನ್ನು ಅಜ್ಞರು ತಿಳಿಯಲಾರರು.

೯. ಯಾವುದರಿಂದ ಜ್ಞಾನವು ಹುಟ್ಟುತ್ತದೋ ಆ ಜಾಗವನ್ನು ಹೇಳುತ್ತೇನೆ.

ಪ್ರಾಣಿನಾಂ ಹೃದಯೇ ನಿತ್ಯಂ ನಿಹಿತಂ ಸರ್ವದಾ ದ್ವಿಜ ।
ಕಾಮಾದೀನ್ಸುಮಹಾನ್ ಭೋಗಾನ್ ಮಹಾಮೋಹಾದಿಕಾಂಸ್ತತಃ ॥ ೧೦ ॥

ವಿವೇಕವಹ್ನಿನಾ ಸರ್ವಾನ್ನಿರ್ಧಕ್ಷತಿ ಸದೈವ ಯಃ ।
ಸರ್ವಶಾಂತಿಮಯೋ ಭೂತ್ವಾ ಚೇಂದ್ರಿಯಾರ್ಥಾನ್ಪ್ರಮರ್ದಯೇತ್ ॥ ೧೧ ॥

ತತಸ್ತು ಜಾಯತೇ ಜ್ಞಾನಂ ಸರ್ವತತ್ತ್ವಾರ್ಥದರ್ಶಕಂ ।
ಶಾಂತಿಮೂಲಮಿದಂ ಜ್ಞಾನಂ ನಿರ್ಮಲಂ ಪಾಪನಾಶನಂ ॥ ೧೨ ॥

ತಸ್ಮಾಚ್ಛಾಂತಿಂ ಕುರುಷ್ವ ತ್ವಂ ಸರ್ವಸೌಖ್ಯಪ್ರವರ್ಧಿನೀಂ ।
ಸಮಶ್ಶತ್ರೌ ಚ ಮಿತ್ರೇ ಚ ಯಥಾತ್ಮನಿ ತಥಾಪರೇ ॥ ೧೩ ॥

ಭವಸ್ವ ನಿಯತೋ ನಿತ್ಯಂ ಜಿತಾಹಾರೋ ಜಿತೇಂದ್ರಿಯಃ ।
ಮೈತ್ರಂ ನೈವ ಪ್ರಕರ್ತವ್ಯಂ ವೈರಂ ದೂರಂ ಪರಿತ್ಯಜ ॥ ೧೪ ॥

ನಿಸ್ಸಂಗೋ ನಿಃಸ್ಪೃಹೋ ಭೂತ್ವಾ ಏಕಾಂತಸ್ಥಾನಸಂಶ್ರಯಃ ।
ಸರ್ವಪ್ರಕಾಶಕೋ ಜ್ಞಾನೀ ಸರ್ವದರ್ಶೀ ಭವಿಷ್ಯಸಿ ॥ ೧೫ ॥

---

೧೦-೧೧. ಆ ಜ್ಞಾನವು ಪ್ರಾಣಿಗಳ ಹೃದಯದಲ್ಲಿಯೇ ಯಾವಾಗಲೂ ಇದೆ. ಕಾಮಾದಿಗಳನ್ನೂ, ಭೋಗಗಳನ್ನೂ, ಮಹಾಮೋಹಗಳನ್ನೂ ವಿವೇಕವೆಂಬ ಬೆಂಕಿಯಿಂದ ಸುಟ್ಟು ಶಾಂತನಾಗಿ ಜಿತೇಂದ್ರಿಯನಾಗಿ ಭೋಗದ ಪದಾರ್ಥಗಳನ್ನು ಎಂದರೆ ವಿಷಯಗಳನ್ನು ನಿಗ್ರಹಿಸಬೇಕು.

೧೨. ಆ ಮೇಲೆ ಸಮಸ್ತ ತತ್ವಗಳನ್ನೂ ತೋರಿಸುವ ಜ್ಞಾನವು ಹುಟ್ಟುತ್ತದೆ. ಈ ಜ್ಞಾನವೇ ಶಾಂತಿಗೆ ಮೂಲವು. ನಿರ್ಮಲವಾದುದು. ಪಾಪನಾಶಕವಾದುದು.

೧೩-೧೪. ಆದ್ದರಿಂದ ನೀನು ಸರ್ವ ಸೌಖ್ಯವನ್ನು ಹೆಚ್ಚಿಸುವ ಶಾಂತಿಯನ್ನಾಶ್ರಯಿಸು. ಶತ್ರುಮಿತ್ರರಲ್ಲಿಯೂ ತನ್ನಲ್ಲಿಯೂ ಒಂದೇ ರೀತಿಯಾಗಿರು. ಜಿತಾಹಾರನಾಗಿ ಜಿತೇಂದ್ರಿಯನಾಗಿ ಇರು. ಸ್ನೇಹವನ್ನು ಮಾಡಬೇಡ. ವೈರವನ್ನು ದೂರದಲ್ಲಿಯೇ ಬಿಟ್ಟುಬಿಡು.

೧೫. ಸಂಗವನ್ನು ತ್ಯಜಿಸಿ, ಆಸೆಬಿಟ್ಟು, ಏಕಾಂತದಲ್ಲಿ ಸಾಧಿಸಿದರೆ ಸರ್ವಪ್ರಕಾಶಕನಾಗಿ ಜ್ಞಾನಿಯಾಗಿ ಸರ್ವದರ್ಶಿಯಾಗುತ್ತೀಯೆ.

ಏಕಸ್ಥಾನಸ್ಥಿತೋ ವತ್ಸ ತ್ರೈಲೋಕ್ಯೇ ಯದ್ಭವಿಷ್ಯತಿ ।
ವೃತ್ತಾಂತಂ ವೇತ್ಸ್ಯಸಿ ತ್ವಂ ತು ಮತ್ಪ್ರಸಾದಾನ್ನ ಸಂಶಯಃ ॥ ೧೬ ॥

॥ ಕುಂಜಲ ಉವಾಚ ॥

ಸಿದ್ಧೇನ ತೇನ ಮೇ ವಿಪ್ರ ಜ್ಞಾನರೂಪಂ ಪ್ರಕಾಶಿತಂ ।
ತಸ್ಯ ವಾಕ್ಯೇ ಸ್ಥಿತೋ ನಿತ್ಯಂ ತದ್ಭಾವೇನಾಪಿ ಭಾವಿತಃ ॥ ೧೭ ॥

ತ್ರೈಲೋಕ್ಯೇ ವರ್ತತೇ ಯದ್ಯದೇಕಸ್ಥಾನಸ್ಥಿತೋಽಪ್ಯಹಂ ।
ತತ್ತದೇವ ಪ್ರಜಾನಾಮಿ ಪ್ರಸಾದಾತ್ತಸ್ಯ ಸದ್ಗುರೋಃ ॥ ೧೮ ॥

ತತ್ತೇ ಸರ್ವಂ ಸಮಾಖ್ಯಾತಮಾತ್ಮವೃತ್ತಾಂತಮೇವ ಹಿ ।
ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ತದ್ಬ್ರೂಹಿ ದ್ವಿಜಸತ್ತಮ ॥ ೧೯ ॥

॥ ಚ್ಯವನ ಉವಾಚ ॥

ಕೀರಯೋನಿಂ ಕಥಂ ಪ್ರಾಪ್ತೋ ಭವಾನ್ ಜ್ಞಾನವತಾಂ ವರಃ ।
ತನ್ಮೇ ತ್ವಂ ಕಾರಣಂ ಬ್ರೂಹಿ ಸರ್ವಸಂದೇಹನಾಶನಂ ॥ ೨೦ ॥

---

೧೬. ನೀನು ಕೂತಲ್ಲಿಯೇ ಮೂರು ಲೋಕಗಳಲ್ಲಿಯೂ ಆಗುವ ವಿಷಯಗಳನ್ನು ನನ್ನ ಅನುಗ್ರಹದಿಂದ ತಿಳಿದುಕೊಳ್ಳುತ್ತೀಯೆ. ಸಂಶಯವಿಲ್ಲ.

೧೭-೧೮. ಕುಂಜಲನು ಹೇಳಿದನು:—ಆ ಸಿದ್ಧನು ನನಗೆ ಜ್ಞಾನದ ಸ್ವರೂಪವನ್ನು ಹೇಳಿಕೊಟ್ಟನು. ಅವನ ಮಾತಿನಂತೆ ಅದೇ ರೀತಿಯಿಂದಿರಲು ನಾನು ಒಂದೇ ಜಾಗದಲ್ಲಿದ್ದರೂ ಮೂರು ಲೋಕದಲ್ಲಿಯೂ ನಡೆಯುವ ಅದದನ್ನು ಆ ಸದ್ಗುರುವಿನ ಅನುಗ್ರಹದಿಂದ ತಿಳಿದುಕೊಳ್ಳುತ್ತೇನೆ.

೧೯. ನನ್ನ ಸಮಾಚಾರವನ್ನೆಲ್ಲಾ ತಿಳಿಸಿದೆನು. ಇನ್ನೇನನ್ನು ಹೇಳಲಿ? ಕೇಳು.

೨೦. ಚ್ಯವನನು ಹೇಳಿದನು:—ನೀನು ಗಿಳಿಯ ಜಾತಿಯಲ್ಲೇಕೆ ಹುಟ್ಟಿದೆ? ನೀನು ಜ್ಞಾನಿಯಲ್ಲವೆ? ಅದರ ಕಾರಣವನ್ನು ತಿಳಿಸು.

॥ ಕುಂಜಲ ಉವಾಚ ॥

ಸಂಸರ್ಗಾಜ್ಜಾಯತೇ ಪಾಪಂ ಸಂಸರ್ಗಾತ್ಪುಣ್ಯಮೇವ ವಾ ।
ತಸ್ಮಾದ್ಧಿ ವರ್ಜಯೇಚ್ಛುದ್ಧೋ ಭವ್ಯೋ ವಿರುದ್ಧಮೇವ ಚ ॥ ೨೦ ॥

ಲುಬ್ಧಕೇನಾಪಿ ಪಾಪೇನ ಕೇನಾಪ್ಯೇಕಃ ಶುಕಶ್ಶಿಶುಃ ।
ಬಂಧಯಿತ್ವಾ ಸಮಾನೀತೋ ವಿಕ್ರಯಾರ್ಥಂ ಸಮುದ್ಯತಃ ॥ ೨೨ ॥

ಚಾಟುಕಾರಂ ಸುರೂಪಂ ತಂ ಚಾಟುವಾಕ್ಯಂ ಸಮೀಕ್ಷ್ಯ ಚ ।
ಗೃಹೀತೋ ಬ್ರಾಹ್ಮಣೈಕೇನ ಮಮ ದತ್ತಸ್ಸುಪ್ರೀತಯೇ ॥ ೨೩ ॥

ಜ್ಞಾನಧ್ಯಾನಸ್ಥಿತೋ ನಿತ್ಯಮಹಮೇವಂ ದ್ವಿಜೋತ್ತಮ ।
ಸ ಮೇ ಬಾಲಸ್ವಭಾವೇನ ಕೌತುಕಾತ್ಕರಸಂಸ್ಥಿತಃ ॥ ೨೪ ॥

ತಸ್ಯ ಕೌತುಕವಾಕ್ಯೈರ್ವಾ ಮುಗ್ಧೋಽಹಂ ದ್ವಿಜಸತ್ತಮ ।
ಶುಕಸ್ಯ ಪುತ್ರರೂಪಸ್ಯ ನಿತ್ಯಂ ತತ್ಪರಮಾನಸಃ ॥ ೨೫ ॥

---

೨೧. ಕುಂಜಲನು ಹೇಳಿದನು:—ಸಹವಾಸದಿಂದ ಪಾಪವೂ ಪುಣ್ಯವೂ ಉಂಟಾಗುತ್ತವೆ. ಆದ್ದರಿಂದ ಮನುಷ್ಯನು ಶುದ್ಧನಾಗಿ, ಸಂಗವು ಒಳ್ಳೆಯದಾಗಲಿ ಕೆಟ್ಟದಾಗಲಿ ಬಿಡಬೇಕು.

೨೨-೨೩. ಒಬ್ಬ ಬೇಡನು ಒಂದು ಗಿಳಿಯ ಮರಿಯನ್ನು ಕಂಡನು. ಅದನ್ನು ಮಾರಲು ಪ್ರಯತ್ನಿಸಿದಾಗ ಆ ಮರಿಯ ಆಶ್ಚರ್ಯವಾದ ಮಾತುಗಳನ್ನೂ ರೂಪವನ್ನೂ ನೋಡಿ ಒಬ್ಬ ಬ್ರಾಹ್ಮಣನು ಕೊಂಡುಕೊಂಡು ನನಗೆ ಪ್ರೀತಿಯಿಂದ ಕೊಟ್ಟನು.

೨೪. ನಾನು ಜ್ಞಾನಧ್ಯಾನಗಳಲ್ಲಿದ್ದರೂ ಕೂಡ ಅದು ಮರಿಯೆಂಬ ಆಸೆಯಿಂದ ನನ್ನ ಕೈಯಲ್ಲೇ ಇರುತ್ತಿದ್ದಿತು.

೨೫. ಪುತ್ರನಿಗೆ ಸಮಾನವಾದ ಆ ಗಿಳಿಯ ಮಾತಿಗೆ ಮುಗ್ಧನಾಗಿ ಅದರಲ್ಲಿಯೇ ಲೀನನಾಗಿ ಬಿಟ್ಟೆನು.

ಮಾಮೇವಂ ವದತೇ ಸೋಽಪಿ ತಾತ ಮಾಮೇಹಿ ಆಸ್ಯತಾಂ ।
ಸ್ನಾನಂ ಗಚ್ಛ ಮಹಾಭಾಗ ದೇವಾನರ್ಚಯ ಸಾಂಪ್ರತಂ ॥ ೨೬ ॥

ಇತ್ಯಾದಿಚಾಟುಕೈರ್ವಾಕ್ಯೈರ್ಮಾಮೇವಂ ಪರಿಭಾಷತೇ ।
ತಸ್ಯ ವಾಕ್ಯವಿನೋದೇನ ವಿಸ್ಮೃತಂ ಜ್ಞಾನಮುತ್ತಮಂ ॥ ೨೭ ॥

ಪುಷ್ಪಾರ್ಥಂ ಫಲಭೋಗಾರ್ಥಂ ಗತೋಽಹಂ ವನಮೇವ ಹಿ ।
ನೀತಃ ಶುಕೋ ಬಿಡಾಲೇನ ಮಮ ದುಃಖಾಯ ಕೇವಲಂ ॥ ೨೮ ॥

ಅನೃಶಂಸೈರ್ನರ್ಭಿಸ್ಸರ್ವೈರ್ವಯಸ್ಥೈಃ ಸಾಧುಕಾರಿಭಿಃ ।
ಬಿಡಾಲೇನ ಹತಃ ಪಕ್ಷೀ ತೇನೈವ ಭಕ್ಷಿತೋ ಹಿ ಮೇ ॥ ೨೯ ॥

ಶ್ರುತ್ವಾ ಮೃತ್ಯುಂ ಗತಂ ವಿಪ್ರ ಶುಕಂ ತಂ ಚಾಟುಕಾರಕಂ ।
ಮಹತಾ ದುಃಖಭಾವೇನ ಅಸಹ್ಯೇನಾತಿಪೀಡಿತಃ ॥ ೩೦ ॥

ತಸ್ಯ ದುಃಖೇನ ಮುಗ್ಧೋಽಸ್ಮಿ ತೀವ್ರೇಣಾಪಿ ಸುಪೀಡಿತಃ ।
ಮಹತಾ ಮೋಹಜಾಲೇನ ಬದ್ಧೋಽಹಂ ದ್ವಿಜಪುಂಗವ ॥ ೩೧ ॥

---

೨೬. ಅಪ್ಪಾ ಇಲ್ಲಿ ಬಾ, ಕುಳಿತುಕೊ, ನಿನ್ನ ಜಾಗಕ್ಕೆ ಹೋಗು, ದೇವರನ್ನು ಈಗ ಪೂಜಿಸು. ಇದೇ ರೀತಿ ನನಗೆ ಹೇಳುತ್ತಾ ಬಂದಿತು.

೨೭. ಈ ರೀತಿಯಾದ ಸಂತೋಷದ ಮಾತುಗಳಿಂದ ನನ್ನನ್ನು ಮಾತ ನಾಡಿಸುತ್ತದೆ. ಅದರ ವಿನೋದದ ಮಾತಿನಿಂದ ನನ್ನ ಜ್ಞಾನವು ಮರೆತಿತು.

೨೮. ನಾನು ಹಣ್ಣು ಹೂಗಳಿಗೆ ಕಾಡಿಗೆ ಹೋದೆನು. ಆಗ ಒಂದು ಬೆಕ್ಕು ಅದನ್ನು ಹೊತ್ತುಕೊಂಡು ಹೋದುದರಿಂದ ನನಗೆ ಸಂಕಟವಾಯಿತು.

೨೯. ಘಾತುಕರಲ್ಲದ ನನ್ನ ಸರಿಸಮರಾದ ಅಲ್ಲಿದ್ದ ಸಾಧುಗಳು ಬೆಕ್ಕು ನಿನ್ನ ಪಕ್ಷಿಯನ್ನು ಕೊಂದು ತಿಂದಿತೆಂದು ನನಗೆ ಹೇಳಿದರು.

೩೦. ಆ ಪ್ರಿಯವಾದ ಮಾತುಗಳನ್ನಾಡುತ್ತಿದ್ದ ಪಕ್ಷಿಯು ಸತ್ತುದನ್ನು ಕೇಳಿ ಅಸಹ್ಯವಾದ ಬಹು ದುಃಖದಿಂದ ಪೀಡಿತನಾದೆನು.

೩೧. ಅದರ ಸಂಬಂಧವಾದ ದುಃಖದಿಂದ ಮೂಢನಾದೆ. ಬಹುವಾದ ಮೋಹದ ಬಲೆಗೆ ಸಿಕ್ಕಿಬಿದ್ದೆನು.

ಪ್ರಾಲಪಂ ರಾಮಚಂದ್ರೇತಿ ಶುಕರಾಜೇತಿ ಪಂಡಿತ ।
ಶ್ಲೋಕರಾಜೇತಿ ತಂ ವಿಪ್ರ ಮೋಹಾಚ್ಚಲಿತಮಾನಸಃ ॥ ೩೨ ॥

ತತೋಽಹಂ ದುಃಖಸಂತಪ್ತಃ ಸಂಜಾತಃ ಸ್ವೇನ ಕರ್ಮಣಾ ।
ವಿಯೋಗೇನಾಪಿ ವಿಪೇಂದ್ರ ಶುಕಸ್ಯ ಶೃಣು ಸಾಂಪ್ರತಂ ॥ ೩೩ ॥

ವಿಸ್ಮೃತಂ ತನ್ಮಯಾ ಜ್ಞಾನಂ ಸಿದ್ಧೇನಾಪಿ ಪ್ರಕಾಶಿತಂ ।
ಸಂಸ್ಮರ್ನ್ ಶುಕಸಂಜ್ಞಾನಂ ತಂ ಶುಕಂ ಚಾಟುಕಾರಕಂ ॥ ೩೪ ॥

ವತ್ಸ ವತ್ಸೇತಿ ನಿತ್ಯಂ ವೈ ಪ್ರಾಲಪಂ ಶೃಣು ಭಾರ್ಗವ ।
ಗದ್ಯಪದ್ಯಮಯೈರ್ವಾಕ್ಯೈಃ ಸಂಸ್ಕೃತಾಕ್ಷರಸಂಯುತೈಃ ॥ ೩೫ ॥

ತ್ವಾಂ ವಿನಾ ಕಶ್ಚ ಮಾಂ ವತ್ಸ ಬೋಧಯಿಷ್ಯತಿ ಸಾಂಪ್ರತಂ ।
ಕಥಾಭಿಶ್ಚ ವಿಚಿತ್ರಾಭಿಃ ಪಕ್ಷಿರಾಜ ಪ್ರಸಾದ್ಯ ಮಾಂ ॥ ೩೬ ॥

ಅಸ್ಮಿನ್ಸುನಿರ್ಜನೋಽದ್ಯಾನೇ ವಿಹಾಯ ಕ್ವ ಗತೋ ಭವಾನ್ ।
ಕೇನ ವೈ ವತ್ಸ ದೋಷೇಣ ತನ್ಮೇ ಕಥಯ ಸಾಂಪ್ರತಂ ॥ ೩೭ ॥

---

೩೨. ರಾಮಚಂದ್ರ, ಶುಕರಾಜ, ಪಂಡಿತ, ಶ್ಲೋಕರಾಜ, ಎಂದು ಸಂಬೋಧಿಸುತ್ತ ಅಜ್ಞಾನದಿಂದ ಅದನ್ನು ಕುರಿತು ದುಃಖಿಸಿದೆನು.

೩೩. ಆ ಮೇಲೆ ನನ್ನ ಕೆಲಸದಿಂದಲೇ ನಾನು ದುಃಖಗೊಂಡೆನು. ಅದರ ವಿಯೋಗವಂತೂ ನನಗೆ ಬಹು ದುಃಖವನ್ನುಂಟುಮಾಡಿತು.

೩೪. ವಿನೋದವಾಗಿ ಮಾತನಾಡುತ್ತಿದ್ದ ಆ ಗಿಣಿಯನ್ನೇ ಸ್ಮರಿಸಿಕೊಳ್ಳುತ್ತಿದ್ದುದರಿಂದ ಆ ಸಿದ್ಧನು ಹೇಳಿಕೊಟ್ಟ ಜ್ಞಾನವು ನಾಶವಾಯಿತು.

೩೫. ವತ್ಸ, ವತ್ಸ, ಎಂದು ನಿತ್ಯವೂ ದುಃಖಿಸುತ್ತಿದ್ದೆನು. ಗದ್ಯಪದ್ಯಗಳುಳ್ಳ, ಸಂಸ್ಕೃತ ಮಾತುಗಳಿಂದ ದಿನದಿನವೂ ಕಟ್ಟಿಕಟ್ಟಿ ದುಃಖಿಸುತ್ತಿದ್ದೆನು. ವತ್ಸನೇ, ನಿನ್ನನ್ನು ಬಿಟ್ಟು ಯಾರು ಈಗ ನನ್ನನ್ನು ಎಬ್ಬಿಸಿಯಾರು?

೩೬-೩೭. ಎಲೈ ಪಕ್ಷಿರಾಜನೇ, ನಾನಾ ಬಗೆಯಾದ ಕಥೆಗಳಿಂದ ನನ್ನನ್ನು ಸಂತೋಷಪಡಿಸು. ಈ ನಿರ್ಜನವಾದ ಕಾಡಿನಲ್ಲಿ ನನ್ನನ್ನು ಬಿಟ್ಟು ನೀನೆಲ್ಲಿ ಹೋದೆ? ನಾನು ಮಾಡಿದ ತಪ್ಪೇನು? ಹೇಳು.

ಏವಂ ವಿಧೈರಹಂ ವಾಕ್ಯೈಃ ಕರುಣೈಸ್ತೈಸ್ಸುಮೋಹಿತಃ ।
ಏವಮಾದಿ ಪ್ರಲಪ್ಯಾಹಂ ಶೋಕೇನಾಪಿ ಪ್ರಪೀಡಿತಃ ॥ ೩೮ ॥

ಮೃತೋಽಹಂ ತೇನ ದುಃಖೇನ ತದ್ಭಾವೇನಾಪಿ ಮೋಹಿತಃ ।
ಮರಣೇ ಯಾದೃಶೋ ಭಾವೋ ಮತಿಶ್ಚಾಸೀಚ್ಚ ಯಾದೃಶೀ ॥ ೩೯ ॥

ತಾದೃಶೇನಾಪಿ ಭಾವೇನ ಜಾತೋಽಹಂ ದ್ವಿಜಸತ್ತಮ ।
ಗರ್ಭವಾಸೋ ಮಯಾ ಪ್ರಾಪ್ತೋ ಜ್ಞಾನಸ್ಮೃತಿವಿಧಾಯಕಃ ॥ ೪೦ ॥

ಸ್ಮೃತಂ ಪೂರ್ವಕೃತಂ ಕರ್ಮ ಸ್ವಯಮೇವ ಪ್ರಚೇಷ್ಟಿತಂ ।
ಮಯಾ ಪಾಪೇನ ಮೂಢೇನ ಕಿಂ ಕೃತಂ ಹ್ಯಕೃತಾತ್ಮನಾ ॥ ೪೧ ॥

ಗರ್ಭಯೋಗಸಮಾರೂಢಃ ಪುನಸ್ತಂ ಚಿಂತಯಾಮ್ಯಹಂ ।
ತೇನ ಮೇ ನಿರ್ಮಲಂ ಜ್ಞಾನಂ ಜಾತಂ ತು ಸರ್ವದರ್ಶಕಂ ॥ ೪೨ ॥

ಗುರೋಸ್ತಸ್ಯ ಪ್ರಸಾದಾಚ್ಚ ಪ್ರಾಪ್ತಂ ಜ್ಞಾನಮನುತ್ತಮಂ ।
ತಸ್ಯ ವಾಕ್ಯೋದಕೈಸ್ಸ್ವಚ್ಛೈಃ ಕಾಯಸ್ಯ ಮಲಮೇವ ಮೇ ॥ ೪೩ ॥

---

೩೮. ಈ ರೀತಿಯಾದ ಮಾತುಗಳಿಂದ ದುಃಖಪಡುತ್ತಿದ್ದೆನು. ಈ ರೀತಿ ಶೋಕದಿಂದ ಪೀಡಿತನಾದೆನು.

೩೯-೪೦. ಅದರಲ್ಲಿಟ್ಟ ಮನಸ್ಸಿನಿಂದಲೇ, ಅದರ ದುಃಖದಲ್ಲಿಯೇ ಸತ್ತೆನು. ಸಾಯುವಾಗ ಯಾವ ಮನಸ್ಸು ಯಾವ ಭಾವಗಳಿದ್ದುವೋ ಅದೇ ಭಾವದಿಂದ ಹುಟ್ಟಿದೆನು. ಜ್ಞಾನಸ್ಮರಣೆಗಳನ್ನು ಕೊಡುವ ಗರ್ಭವಾಸವನ್ನು ಹೊಂದಿದೆನು.

೪೧. ನಾನಾಗಿಯೇ ಮಾಡಿಕೊಂಡ ಪೂರ್ವಜನ್ಮದ ಕರ್ಮವು ಜ್ಞಾಪಕಕ್ಕೆ ಬಂದಿತು. ಅಯೋಗ್ಯನೂ ಪಾಪಿಯೂ ಆದ ನಾನು ಏನು ಮಾಡಿಕೊಂಡೆನು? ಎಂದು ಗರ್ಭಯೋಗವನ್ನು ಹೊಂದಿ ಯೋಚಿಸಿದೆನು.

೪೨. ಅದರಿಂದ ನನಗೆ ನಿರ್ಮಲವಾದ, ಎಲ್ಲವನ್ನೂ ತೋರಿಸುವ ಜ್ಞಾನ ವುಂಟಾಯಿತು.

೪೩. ಆ ಗುರುವಿನ ಅನುಗ್ರಹದಿಂದ ಉತ್ತಮವಾದ ಜ್ಞಾನವು ಬಂದಿತು. ಅವನ ನಿರ್ಮಲವಾದ ಮಾತುಗಳಿಂದ ಒಳಗಿನ ಹೊರಗಿನ ಮಲಗಳು ಹೋಗಿ ನಿರ್ಮಲನಾದೆನು.

ಸಬಾಹ್ಯಾಭ್ಯಂತರಂ ವಿಪ್ರ ಕ್ಷಾಳಿತಂ ನಿರ್ಮಲಂ ಕೃತಂ ।
ತಿರ್ಯಕ್ತ್ವಂ ಚ ಮಯಾ ಪ್ರಾಪ್ತಂ ಶುಕಜಾತಿಸಮುದ್ಭವಂ ॥ ೪೪ ॥

ಶುಕಸ್ಯ ಧ್ಯಾನಭಾವೇನ ಮರಣೇ ಸಮುಪಸ್ಥಿತೇ ।
ತಸ್ಮಿನ್ ಕಾಲೇ ಮೃತೋ ವಿಪ್ರ ತದ್ಭಾವೇನಾಪಿ ಭಾವಿತಃ ॥ ೪೫ ॥

ತಾದೃಶೋಽಸ್ಮಿ ಪುನರ್ಜಾತಃ ಶುಕರೂಪೋ ಮಹೀತಳೇ ।
ಮರಣೇ ಯಾದೃಶೋ ಭಾವಃ ಪ್ರಾಣಿನಾಂ ಪರಿಜಾಯತೇ ॥ ೪೬ ॥

ತಾದೃಶಾಸ್ಸ್ಯುಸ್ತು ಸತ್ವಾಸ್ತೇ ತದ್ರೂಪಾಸ್ತತ್ಪರಾಕ್ರಮಾಃ ।
ತದ್ಗುಣಾಸ್ತತ್ಸ್ವರೂಪಾಶ್ಚ ಭಾವಭೂತಾ ಭವಂತಿ ಹಿ ॥ ೪೭ ॥

ಮೃತ್ಯುಕಾಲಸ್ಯ ವಿಪೇಂದ್ರಭಾವೇನಾಪಿ ನ ಸಂಶಯಃ ।
ಅತುಲಂ ಪ್ರಾಪ್ತವಾನ್ ಜ್ಞಾನಮಹಮತ್ರ ಮಹಾಮತೇ ॥ ೪೮ ॥

ತೇನ ಸರ್ವಂ ವಿಪಶ್ಯಾಮಿ ಯದ್ಭೂತಂ ಯದ್ಭವಿಷ್ಯತಿ ।
ವರ್ತಮಾನಂ ಮಹಾಪ್ರಾಜ್ಞ ಜ್ಞಾನೇನಾಪಿ ಮಹಾಮತೇ ॥ ೪೯ ॥

---

೪೪. ಗಿಳಿಯ ಜಾತಿಯಲ್ಲಿ ಹುಟ್ಟುವ ಕೀಳುತನವು ನನಗೆ ಬಂದಿತು.

೪೫. ಗಿಳಿಯನ್ನೇ ಸ್ಮರಿಸುತ್ತಿದ್ದಾಗ ಪ್ರಾಣ ಹೋದುದರಿಂದಲೂ, ಅದರ ಭಾವವನ್ನೇ ಹೊಂದಿದ್ದುದರಿಂದಲೂ ಅದೇ ರೀತಿಯಾಗಿ ಭೂಮಿಯಲ್ಲಿ ಶುಕಜಾತಿಯಲ್ಲಿ ಹುಟ್ಟಿದೆನು.

೪೬-೪೭. ಮರಣಕಾಲದಲ್ಲಿ ಪ್ರಾಣಿಗಳಿಗೆ ಯಾವ ರೀತಿಯಾದ ಭಾವ ಬರುತ್ತದೆಯೋ ಆ ಪ್ರಾಣಿಗಳು ಅದೇ ರೀತಿಯಾದ ಪ್ರಾಣಿಗಳಾಗಿ, ಪರಾಕ್ರಮವುಳ್ಳವುಗಳಾಗಿ ಆ ಗುಣ ಆ ರೂಪು ಉಳ್ಳವಾಗಿ ಆಗುತ್ತವೆ.

೪೮. ಮರಣಕಾಲದಲ್ಲಿ ಆ ಭಾವವಿದ್ದುದರಿಂದ ನಾನು ಈಗ ಹೆಚ್ಚು ಜ್ಞಾನಿಯೂ ಆದೆನು.

೪೯. ಆದ್ದರಿಂದ ಭೂತ, ಭವಿಷ್ಯತ್ತು, ವರ್ತಮಾನ ಜ್ಞಾನಗಳಿಂದ ಎಲ್ಲವನ್ನೂ ನೋಡಿ ತಿಳಿಯುತ್ತೇನೆ. ನಾನು ಇಲ್ಲಿದ್ದುಕೊಂಡೇ ಎಲ್ಲವನ್ನೂ ತಿಳಿದುಕೊಳ್ಳುತ್ತೇನೆ. ಸಂಶಯವಿಲ್ಲ.

ಸರ್ವಂ ವಿದಾಮ್ಯಹಂ ಹ್ಯತ್ರ ಸಂಸ್ಥಿತೋಽಪಿ ನ ಸಂಶಯಃ ।
ತಾರಣಾಯ ಮನುಷ್ಯಾಣಾಂ ಸಂಸಾರೇ ಪರಿವರ್ತತಾಂ ।
ನಾಸ್ತಿ ತೀರ್ಥಂ ಗುರುಸಮಂ ಬಂಧಚ್ಛೇದಕರಂ ದ್ವಿಜ ॥ ೫೦ ॥

ಏತತ್ತೇ ಸರ್ವಮಾಖ್ಯಾತಂ ಶೃಣು ಭಾರ್ಗವನಂದನ ।
ಯತ್ತ್ವಯಾ ಪೃಚ್ಛಿತಂ ವಿಪ್ರ ತತ್ತೇ ಸರ್ವಂ ಪ್ರಕಾಶಿತಂ ॥ ೫೧ ॥

ಸ್ಥಲಜಾಚ್ಛೋದಕಾತ್ಸರ್ವಂ ಬಾಹ್ಯಂ ಮಲಂ ಪ್ರಣಶ್ಯತಿ ।
ಜನ್ಮಾಂತರಕೃತಾನ್ ಪಾಪಾನ್ ಗುರುತೀರ್ಥಂ ಪ್ರಣಾಶಯೇತ್ ।
ಸಂಸಾರೇ ತಾರಣಾಯೈವ ಜಂಗಮಂ ತೀರ್ಥಮುತ್ತಮಂ ॥ ೫೨ ॥

॥ ವಿಷ್ಣುರುವಾಚ ॥

ಶುಕ ಏವಂ ಮಹಾಪ್ರಾಜ್ಞಶ್ಚ್ಯವನಾಯ ಮಹಾತ್ಮನೇ ।
ತತ್ತ್ವಂ ಪ್ರಕಾಶಯಿತ್ವಾ ತು ವಿರರಾಮ ನೃಪೋತ್ತಮ ॥ ೫೩ ॥

ಏತತ್ತೇ ಸರ್ವಮಾಖ್ಯಾತಂ ಜಂಗಮಂ ತೀರ್ಥಮುತ್ತಮಂ ।
ವರಂ ವರಯ ಭದ್ರಂ ತೇ ಯದ್ವೈ ಮನಸಿ ವರ್ತತೇ ॥ ೫೪ ॥

---

೫೦. ಸಂಸಾರದಲ್ಲಿ ಒದ್ದಾಡುವ ಮನುಷ್ಯರನ್ನು ಕಾಪಾಡುವುದಕ್ಕೆ ಬಂಧನಾಶಕವಾದ ತೀರ್ಥವು ಗುರು ಒಂದೇ. ಅಂತಹುದು ಮತ್ತೊಂದಿಲ್ಲ.

೫೧. ನೀನು ಕೇಳಿದುದೆಲ್ಲವನ್ನೂ ಹೇಳಿದುದಾಯಿತು.

೫೨. ಭೂಮಿಯ ನೀರಿನಿಂದ ಹೊರಗಿನ ಕೊಳೆಯು ಹೋಗುತ್ತದೆ. ಜನ್ಮಾಂತರದಲ್ಲಿ ಮಾಡಿದ ಪಾಪಗಳನ್ನು ಗುರುತೀರ್ಥವು ನಾಶಮಾಡುತ್ತದೆ. ಸಂಸಾರಿಗಳನ್ನು ಉದ್ಧರಿಸುವುದಕ್ಕೆ ಜಂಗಮರೂಪದ ಗುರುತೀರ್ಥವು ಇರುವುದು.

೫೩. ವಿಷ್ಣುವು ಹೇಳಿದನು:—ಗಿಳಿಯು ಆ ಚ್ಯವನನಿಗೆ ತತ್ತ್ವಸ್ವರೂಪವನ್ನು ಹೇಳಿಕೊಟ್ಟು ಸುಮ್ಮನಾಯಿತು.

೫೪. ಈ ರೀತಿ ಉತ್ತಮವಾದ ಜಂಗಮತೀರ್ಥವನ್ನು ವಿವರಿಸಿದೆನು. ಇನ್ನು ನಿನ್ನ ಮನಸ್ಸಿನಲ್ಲಿರುವ ವರಗಳನ್ನು ಕೇಳಿಕೊ.

॥ ವೇನ ಉವಾಚ ॥

**ನಾಹಂ ರಾಜ್ಯಸ್ಯ ಕಾಮಾರ್ಥೀ ನಾನ್ಯತ್ಕಿಂಚಿತ್ಪ್ರಕಾಮಯೇ ।**
**ಸದೇಹೋ ಗಂತುಮಿಚ್ಛಾಮಿ ತವ ಕಾಯಂ ಜನಾರ್ದನ ॥**
**ಏವಂ ವರಮಹಂ ಮನ್ಯೇ ಯದಿ ದಾತುಮಿಹೇಚ್ಛಸಿ** ॥ ೫೫ ॥

॥ ವಿಷ್ಣುರುವಾಚ ॥

**ಯಜ ತ್ವಮಶ್ವಮೇಧೇನ ರಾಜಸೂಯೇನ ಭೂಪತೇ ।**
**ಗೋಭೂಸ್ವರ್ಣಾಂಬುಧಾನ್ಯಾನಾಂ ಕುರು ದಾನಂ ಮಹಾಮತೇ** ॥ ೫೬ ॥

**ದಾನಾನ್ನಶ್ಯತಿ ವೈ ಪಾಪಂ ಬ್ರಹ್ಮವಧ್ಯಾದಿಘೋರಕಂ ।**
**ಚತುರ್ವರ್ಗಸ್ತು ದಾನೇನ ಸಿಧ್ಯತ್ಯೇವ ನ ಸಂಶಯಃ** ॥ ೫೭ ॥

**ತಸ್ಮಾದ್ದಾನಂ ಪ್ರಕರ್ತ್ಯವಂ ಮಾಮುದ್ದಿಶ್ಯ ಚ ಭೂಪತೇ ।**
**ಯಾದೃಶೇನಾಪಿ ಭಾವೇನ ಮಾಮುದ್ದಿಶ್ಯ ದದಾತಿ ಯಃ** ॥ ೫೮ ॥

---

೫೫. ವೇನನು ಹೇಳಿದನು :—ನನಗೆ ರಾಜ್ಯವಾಗಲಿ ಮತ್ತೊಂದಾಗಲಿ ಬೇಡ. ಈ ದೇಹದೊಡನೆ ನಿನ್ನಲ್ಲಿ ಐಕ್ಯವಾಗಬೇಕೆಂದಿದ್ದೇನೆ. ವರ ಕೊಡುವು ದಾದರೆ ಅದನ್ನು ಕೊಡು.

೫೬. ವಿಷ್ಣುವು ಹೇಳಿದನು :—ಅಶ್ವಮೇಧ, ರಾಜಸೂಯಯಾಗಗಳನ್ನು ಮಾಡು. ಗೋ, ಭೂ, ಸ್ವರ್ಣ, ಉದಕ, ಧಾನ್ಯಗಳ ದಾನವನ್ನು ಮಾಡು.

೫೭. ದಾನದಿಂದ ಬ್ರಹ್ಮಹತ್ಯೆಯೇ ಮುಂತಾದ ಪಾಪಗಳು ನಾಶವಾಗುತ್ತವೆ. ಧರ್ಮಾರ್ಥ ಕಾಮಮೋಕ್ಷಗಳೂ ಈ ದಾನದಿಂದ ಸಿದ್ಧಿಸುತ್ತವೆ. ಸಂಶಯವಿಲ್ಲ. ಆದ್ದರಿಂದ ನನ್ನನ್ನು ಉದ್ದೇಶಿಸಿಕೊಂಡು ದಾನಮಾಡು.

೫೮. ಯಾವನು ಯಾವ ಅಭಿಪ್ರಾಯದಿಂದ ನನ್ನನ್ನುದ್ದೇಶಿಸಿ ದಾನ ಮಾಡುತ್ತಾನೋ, ಅದೇ ಭಾವವನ್ನು ಅವನಿಗೆ ಕೊಡುತ್ತೇನೆ. ಸತ್ಯವು.

ತಾದೃಶಂ ತಸ್ಯ ವೈ ಭಾವಂ ಸತ್ಯಮೇವಂ ಕರೋಮ್ಯಹಂ ।
ಋಷೀಣಾಂ ದರ್ಶನಾತ್ಸ್ಪರ್ಶಾತ್ ಭ್ರಷ್ಟಸ್ತೇ ಪಾಪಸಂಚಯಃ ॥ ೫೯ ॥

ಆಗಮಿಷ್ಯಸಿ ಯಜ್ಞಾಂತೇ ಮಮ ದೇಹಂ ನ ಸಂಶಯಃ ।
ಏವಮಾಭಾಷ್ಯ ತಂ ವೇನಮಂತರ್ಧಾನಂ ಗತೋ ಹರಿಃ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನನೋಪಾಖ್ಯಾನೇ
ತ್ರಯೋವಿಂಶತ್ಯಧಿಕಶತತಮೋಽಧ್ಯಾಯಃ



---

೫೯. ಋಷಿಗಳ ದರ್ಶನಸ್ಪರ್ಶನಗಳಿಂದ ನಿನ್ನ ಪಾಪವೆಲ್ಲವೂ ಹೋಗಿದೆ.

೬೦. ಯಜ್ಞ ಮಾಡಿದ ಮೇಲೆ ನನ್ನ ದೇಹವನ್ನು ಹೊಂದುತ್ತೀಯೆ. ಹೀಗೆಂದು ವೇನನಿಗೆ ಹೇಳಿ ವಿಷ್ಣುವು ಅಂತರ್ಧಾನನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಅಂತರ್ಧಾನಂ ಗತೇ ವಿಷ್ಣೌ ವೇನೋ ರಾಜಾ ಮಹಾಮತಿಃ ।
ಕ್ವ ಗತೋ ದೇವದೇವೇಶ ಇತಿ ಚಿಂತಾಪರೋಽಭವತ್ ॥ ೧ ॥

ಹರ್ಷೇಣ ಮಹತಾವಿಷ್ಟಶ್ಚಿಂತಯಿತ್ವಾ ನೃಪೋತ್ತಮಃ ।
ಸಮಾಹೂಯ ಪೃಥುಂ ಚೈವ ಸ್ವಪುತ್ರಂ ಮಧುರಾಕ್ಷರೈಃ ॥ ೨ ॥

ಉವಾಚ ಚ ಮಹಾಭಾಗೋ ಹರ್ಷೇಣ ಮಹತಾವೃತಃ ।
ತ್ವಯಾ ಪುತ್ರೇಣ ಭೂಲೋಕೇ ತಾರಿತೋಽಸ್ಮಿ ಸುಪಾತಕಾತ್ ॥ ೩ ॥

---

## ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಸೂತನು ಹೇಳಿದನು :—ವಿಷ್ಣುವು ಅಂತರ್ಧಾನವನ್ನು ಹೊಂದಲು ವೇನನು, ವಿಷ್ಣುವು ಎಲ್ಲಿ ಹೋದನೆಂದು ಯೋಚನಾಗ್ರಸ್ತನಾದನು.

೨. ಯೋಚನೆ ಮಾಡುತ್ತ, ಸಂತೋಷಪಡುತ್ತ, ತನ್ನ ಮಗನಾದ ಪೃಥುವನ್ನು ಒಳ್ಳೆಯ ಮಾತುಗಳಿಂದ ಕರೆದನು.

೩. ಆ ವೇನನು ಸಂತೋಷದಿಂದ ಎಲೈ ಮಗನೆ, ಮಗನಾದ ನಿನ್ನಿಂದ ಈ ಲೋಕದಲ್ಲಿ ಮಹಾಪಾಪದಿಂದ ಪಾರಾದೆನು.

ನೀತ ಉಜ್ಜ್ವಲತಾಂ ವತ್ಸ ವಂಶೋ ಮೇ ಸಾಂಪ್ರತಂ ಪೃಥೋ ।
ಮಯಾ ವಿನಾಶಿತೋ ದೋಷೈಸ್ತ್ವಯಾ ಚೈವ ಪ್ರಕಾಶಿತಃ ॥ ೪ ॥

ಯಜೇಽಹಂ ಚಾಶ್ವಮೇಧೇನ ದಾಸ್ಯೇ ದಾನಾನ್ಯನೇಕಶಃ ।
ವಿಷ್ಣುಲೋಕಂ ಪ್ರಯಾಸ್ಯಾಮಿ ಸಕಾಯಸ್ತ್ವತ್ಪ್ರಸಾದತಃ ॥ ೫ ॥

ಸಂಭರಸ್ವ ಮಹಾಭಾಗ ಸಂಭಾರಾಂಶ್ಚಾಪ್ಯನುತ್ತಮಾನ್ ।
ಆಮಂತ್ರಯ ಮಹಾಭಾಗಾನ್ ಬ್ರಾಹ್ಮಣಾನ್ವೇದಪಾರಗಾನ್ ॥ ೬ ॥

ಏವಂ ಪೃಥುಸ್ಸಮಾದಿಷ್ಟೋ ವೇನೇನಾಪಿ ಮಹಾತ್ಮನಾ ।
ಪ್ರತ್ಯುವಾಚ ಮಹಾತ್ಮಾ ಸ ವೇನಂ ಪಿತರಮಾದರಾತ್ ॥ ೭ ॥

ಕುರು ರಾಜ್ಯಂ ಮಹಾಭಾಗ ಭುಂಕ್ಷ್ವ ಭೋಗಾನ್ಮನೋಸುಗಾನ್ ।
ಸುದಿವ್ಯಾನ್ಮಾನುಷಾನ್ಪುಣ್ಯಾನ್ ಯಜ್ಞೈರ್ಯಜ ಜನಾರ್ದನಂ ॥ ೮ ॥

---

೪. ಈಗ ನನ್ನ ವಂಶವು ನಿನ್ನಿಂದ ಪ್ರಕಾಶವಾಯಿತು. ನನ್ನ ದೋಷಗಳಿಂದ ನಾಶವಾಗಿದ್ದು ನಿನ್ನ ಗುಣಗಳಿಂದ ಪ್ರಕಾಶವಾಯಿತು.

೫. ಅಶ್ವಮೇಧಯಾಗವನ್ನು ಮಾಡಿ ಅನೇಕ ದಾನಗಳನ್ನು ಕೊಟ್ಟು ವಿಷ್ಣು ಲೋಕವನ್ನು ಇದೇ ಶರೀರದಿಂದ ನಿನ್ನ ದಯೆಯಿಂದ ಹೊಂದುತ್ತೇನೆ.

೬. ಒಳ್ಳೊಳ್ಳೆಯ ಸಾಮಾನುಗಳನ್ನು ಸಿದ್ಧಮಾಡಿ ಯಾಗಕ್ಕೆ ಸಿದ್ಧಪಡಿಸು. ಪುಣ್ಯಾತ್ಮರಾದ, ವೇದಪಾರಗರಾದ, ವಿದ್ವಾಂಸರಾದ ಬ್ರಾಹ್ಮಣರನ್ನು ಕರೆಸು.

೭. ವೇನನಿಂದ ಅಪ್ಪಣೆಮಾಡಲ್ಪಟ್ಟ ಪೃಥುವು ತಂದೆಯನ್ನು ಕುರಿತು ಪ್ರೀತಿಯಿಂದ ಇಂತೆಂದನು.

೮. ರಾಜ್ಯಭಾರ ಮಾಡು. ಇಷ್ಟವಾದ ಭೋಗಗಳನ್ನು ಅನುಭವಿಸು. ಉತ್ತಮವಾದ ಮನುಷ್ಯಭೋಗಗಳನ್ನು ಅನುಭವಿಸು. ಯಾಗಮಾಡಿ ಜನಾರ್ದನನನ್ನೂ ತೃಪ್ತಿಗೊಳಿಸು.

ಏವಮುಕ್ತ್ವಾ ಪ್ರಣಮ್ಯೈನಂ ಪಿತರಂ ಜ್ಞಾನತತ್ಪರಂ ।
ಧನುರಾದಾಯ ಸ ಪೃಥುಃ ಸಬಾಣಂ ಯತ್ನಪೂರ್ವಕಂ ॥ ೯ ॥

ಆದಿದೇಶ ನರಾನ್ಸರ್ವಾನ್ ಘೋಷಧ್ವಂ ಭೂತಳೇ ಮಮ ।
ಪಾಪಮೇವಂ ನ ಕರ್ತವ್ಯಂ ಕರ್ಮಣಾ ನಿಯಮೇನ ವೈ ॥ ೧೦ ॥

ಕರಿಷ್ಯತಿ ಚ ಯಃ ಪಾಪಮಾಜ್ಞಾಂ ವೇನಸ್ಯ ಭೂಪತೇಃ ।
ಉಲ್ಲಂಘ್ಯ ವಧ್ಯತಾಂ ಸೋಽಪಿ ಯಾಸ್ಯತೇ ನಾತ್ರ ಸಂಶಯಃ ॥ ೧೧ ॥

ದಾನಮೇವಂ ಪ್ರದಾತವ್ಯಂ ಯಜ್ಞೈಶ್ಚೈವ ಜನಾರ್ದನಂ ।
ಯಜಧ್ವಂ ಮಾನವಾಸ್ಸರ್ವೇ ತನ್ಮನಸ್ಕಾ ವಿಮತ್ಸರಾಃ ॥ ೧೨ ॥

ಏವಂ ಶಿಕ್ಷಾಂ ತು ದತ್ವಾ ಚ ರಾಜ್ಯಂ ಭೃತ್ಯೇಷು ವೇನಜಃ ।
ನಿಕ್ಷಿಪ್ಯ ಸ ಗತೋ ವಿಪ್ರಾಸ್ತಪಸೋಽರ್ಥೇ ತಪೋವನಂ ॥ ೧೩ ॥

ಸರ್ವಾನ್ದೋಷಾನ್ಪರಿತ್ಯಜ್ಯ ಸಂಯಮ್ಯ ವಿಷಯೇಂದ್ರಿಯಾನ್ ।
ಶತವರ್ಷಪ್ರಮಾಣಂ ವೈ ನಿರಾಹಾರೋ ಬಭೂವ ಹ ॥ ೧೪ ॥

---

೯-೧೦. ಹೀಗೆಂದು ಹೇಳಿ ನಮಸ್ಕರಿಸಿ ಧನುರ್ಬಾಣಗಳನ್ನು ತೆಗೆದುಕೊಂಡು ದೂತರಿಗೆ, ಜನಗಳೊಬ್ಬರೂ ಖಂಡಿತವಾಗಿ ಪಾಪ ಮಾಡಕೂಡದು ಎಂದು ಘೋಷಣೆ ಮಾಡಿರೆಂದನು.

೧೧. ವೇನನ ಆಜ್ಞೆಯನ್ನು ಮೀರಿ ಯಾವನು ಪಾಪ ಮಾಡುತ್ತಾನೋ ಅವನು ಕೊಲ್ಲಲ್ಪಡುತ್ತಾನೆ. ಸಂಶಯವಿಲ್ಲ.

೧೨. ದಾನಮಾಡಬೇಕು. ಯಜ್ಞಗಳಿಂದ ಜನಾರ್ದನನನ್ನು ತೃಪ್ತಿಪಡಿಸಬೇಕು. ವಾಸುದೇವನಲ್ಲಿಯೇ ಮನಸ್ಸಿಟ್ಟಿರಬೇಕು. ಮತ್ಸರ ಪಡಕೂಡದು.

೧೩. ಪೃಥುವು ಈ ರೀತಿ ಅಪ್ಪಣೆಮಾಡಿ, ಶಿಕ್ಷೆಯನ್ನು ವಿಧಿಸಿ, ರಾಜ್ಯವನ್ನು ಮಂತ್ರಿಗಳಲ್ಲಿಟ್ಟು ತಪಸ್ಸಿಗೋಸ್ಕರ ಕಾಡಿಗೆ ಹೋದನು.

೧೪. ಎಲ್ಲಾ ದೋಷಗಳನ್ನು ಬಿಟ್ಟು, ಇಂದ್ರಿಯಗಳನ್ನು ನಿಯಮಿಸಿ, ನೂರು ವರ್ಷಗಳ ವರೆಗೂ ಆಹಾರವಿಲ್ಲದೆ ತಪಸ್ಸುಮಾಡಿದನು.

ತಪಸಾ ತಸ್ಯ ವೈ ತುಷ್ಟೋ ಬ್ರಹ್ಮಾ ಪೃಥುಮುವಾಚ ಹ ।
ತಪಸ್ತಪಸಿ ಕಸ್ಮಾತ್ತ್ವಂ ತನ್ಮಮಾಚಕ್ಷ್ವ ಸುವ್ರತ ॥ ೧೫ ॥

॥ ಪೃಥುರುವಾಚ ॥

ಅಹೋ ವೇನೋ ಮಹಾಪ್ರಾಜ್ಞಃ ಪಿತಾ ಮೇ ಕೀರ್ತಿವರ್ಧನಃ ।
ಸಮಾಚರತಿ ಯಃ ಪಾಪಮಸ್ಯ ರಾಜ್ಯೇ ನರಾಧಮಃ ॥ ೧೬ ॥

ಶಿರಶ್ಛೇತ್ತಾ ಭವತ್ವೇಷ ತಸ್ಯ ದೇವೋ ಜನಾರ್ದನಃ ।
ಅದೃಷ್ಟೈಶ್ಚ ಮಹಾಚಕ್ರೈರ್ಹರಿಶ್ಶಾಸ್ತಾ ಭವೇತ್ ಸ್ವಯಂ ॥ ೧೭ ॥

ಮನಸಾ ಕರ್ಮಣಾ ವಾಚಾ ಕರ್ತುಂ ವಾಂಛಂತಿ ಪಾತಕಂ ।
ತೇಷಾಂ ಶಿರಾಂಸಿ ತ್ರುಟ್ಯಂತು ಶಂಖವೃಕ್ಷಫಲಂ ಯಥಾ ॥ ೧೮ ॥

ಏತದೇವ ವರಂ ಮನ್ಯೇ ಶೃಣು ತ್ವತ್ತಃ ಸುರೇಶ್ವರ ।
ಪ್ರಜಾನಾಂ ದೋಷಭಾವೈಶ್ಚ ನ ಲಿಪ್ಯತಿ ಪಿತಾ ಮಮ ॥ ೧೯ ॥

---

೧೫. ಅವನ ತಪಸ್ಸಿನಿಂದ ತುಷ್ಟನಾದ ಬ್ರಹ್ಮನು ಬಂದು ಪೃಥುವನ್ನು ಕುರಿತು ಅಯ್ಯಾ, ನೀನು ತಪಸ್ಸನ್ನು ಏಕೆ ಮಾಡುತ್ತೀ? ಅದನ್ನು ಹೇಳು, ಎಂದನು.

೧೬-೧೭. ಪೃಥುವು ಹೇಳಿದನು:—ನನ್ನ ತಂದೆಯು ಕೀರ್ತಿಪ್ರಕಾಶಕನಾದವನು. ಇವನ ರಾಜ್ಯದಲ್ಲಿ ಯಾವನಾದರೂ ಅಯೋಗ್ಯನು ಪಾಪಮಾಡಿದರೆ ಅವನ ತಲೆಯನ್ನು ವಿಷ್ಣುವು ಕಡಿದುಹಾಕಲಿ. ಕಣ್ಣಿಗೆ ಕಾಣದಂತೆಯೇ ಅವನ ಚಕ್ರವು ಅವನನ್ನು ಶಿಕ್ಷಿಸಲಿ.

೧೮. ಯಾರು ಮನೋವಾಕ್ಕಾಯಗಳಿಂದ ಪಾಪವನ್ನು ಮಾಡುವುದಕ್ಕೆ ಅಪೇಕ್ಷಿಸುತ್ತಾರೆಯೋ, ಅವರ ತಲೆಯು ಕರ್ಣಕುಂಡಲದ ಕಾಯಿ ಒಡೆಯುವಂತೆ ತಾನಾಗಿಯೇ ಒಡೆದು ಹೋಗಲಿ.

೧೯. ನಿನ್ನ ದೆಸೆಯಿಂದ ನನಗೆ ಬೇಕಾದುದು ಇದೇ ವರವೆಂದು ತಿಳಿದಿದ್ದೇನೆ. ಹಾಗಾದರೆ ನನ್ನ ತಂದೆಯು ಪ್ರಜೆಗಳ ದೋಷದಿಂದ ಲಿಪ್ತನಾಗುವುದಿಲ್ಲ.

ತಥಾ ಕುರುಷ್ವ ದೇವೇಶ ಯದಿ ಭದ್ರಮಿಹೇಚ್ಛಸಿ ।
ದದಸ್ವ ಉತ್ತಮಂ ಕಾಮಂ ಚತುರ್ಮುಖ ನಮೋಽಸ್ತು ತೇ ॥ ೨೦ ॥

॥ ಬ್ರಹ್ಮೋವಾಚ ॥

ಏವಮಸ್ತು ಮಹಾಭಾಗ ಪಿತಾ ತೇ ಪೂತತಾಂ ಗತಃ ।
ವಿಷ್ಣುನಾ ಶಾಸಿತೋ ವತ್ಸ ಪುತ್ರೇಣಾಪಿ ತ್ವಯಾ ಪೃಥೋ ॥ ೨೧ ॥

ಏವಂ ಪೃಥುಂ ಸಮುದ್ದಿಶ್ಯ ವರಂ ದತ್ವಾ ಗತೋ ವಿಭುಃ ।
ಪೃಥುಶ್ಚಾಪಿ ಮಹಾಪ್ರಾಜ್ಞೋ ರಾಜ್ಯಕರ್ಮಣಿ ಸಂಸ್ಥಿತಃ ॥ ೨೨ ॥

ವೈನ್ಯಸ್ಯ ರಾಜ್ಯೇ ವಿಪ್ರೇಂದ್ರಾಃ ಪಾಪಂ ಕಶ್ಚಿನ್ನ ಚಾಚರೇತ್ ।
ಯಸ್ತು ಚಿಂತಯತೇ ಪಾಪಂ ತ್ರಿವಿಧೇನಾಪಿ ಕರ್ಮಣಾ ॥ ೨೩ ॥

ಶಿರಶ್ಛೇದೋ ಭವೇತ್ತಸ್ಯ ಯಥಾ ಚಕ್ರೈರ್ನಿಕೃಂತಿತಃ ।
ತದಾಪ್ರಭೃತಿ ವೈ ಪಾಪಂ ನೈವ ಕೋಽಪಿ ಸಮಾಚರೇತ್ ॥ ೨೪ ॥

---

೨೦. ಒಳ್ಳೆಯದನ್ನು ಮಾಡಬೇಕೆಂದಿದ್ದರೆ ಈ ವರವನ್ನು ಕೊಡು. ಈ ಅಪೇಕ್ಷೆಯನ್ನು ಈಡೇರಿಸು. ಚತುರ್ಮುಖನೇ, ನಿನಗೆ ನಮಸ್ಕಾರವು.

೨೧. ಬ್ರಹ್ಮನು ಹೇಳಿದನು :—ಅಪ್ಪ, ಹಾಗೆಯೇ ಆಗಲಿ. ವಿಷ್ಣುವಿನ ಅಪ್ಪಣೆಯಿಂದಲೂ, ನೀನು ಮಗನಾದುದರಿಂದಲೂ ನಿನ್ನ ತಂದೆಯು ಪೂತನಾದನು.

೨೨. ಈ ರೀತಿ ಪೃಥುವನ್ನುದ್ದೇಶಿಸಿ ಬ್ರಹ್ಮನು ವರವನ್ನು ಕೊಟ್ಟು ಹೋದನು. ಪೃಥುವೂ ಕೂಡ ತನ್ನ ರಾಜ್ಯಭಾರದಲ್ಲಿ ನಿರತನಾದನು.

೨೩-೨೪. ಎಲೈ ಬ್ರಾಹ್ಮಣರಿರಾ, ವೇನನ ರಾಜ್ಯದಲ್ಲಿ ಒಬ್ಬನೂ ಪಾಪಮಾಡುವುದಿಲ್ಲ. ಯಾವನಾದರೂ ಮನೋವಾಕ್ಕಾಯಗಳಿಂದ ಪಾಪವನ್ನು ಯೋಚಿಸಿದರೆ ಅವನ ತಲೆಯು ಚಕ್ರದಲ್ಲಿ ಕತ್ತರಿಸಿದಂತೆ ಕತ್ತರಿಸುತ್ತದೆ. ಅದು ಮೊದಲು ಅವನ ರಾಜ್ಯದಲ್ಲಿ ಯಾವನೂ ಪಾಪಮಾಡುವುದೇ ಇಲ್ಲ.

ಇತ್ಯಾಜ್ಞಾ ವರ್ತತೇ ತಸ್ಯ ವೈನ್ಯಸ್ಯಾಪಿ ಮಹಾತ್ಮನಃ ।
ಸರ್ವಲೋಕಾಸ್ಸಮಾಚಾರೈಃ ಪರಿವರ್ತಂತಿ ನಿತ್ಯಶಃ ॥ ೨೫ ॥

ದಾನಭೋಗೈಃ ಪ್ರವರ್ತಂತೇ ಸರ್ವಧರ್ಮಪರಾಯಣಾಃ ।
ಸರ್ವಸೌಖ್ಯೈಃ ಪ್ರವರ್ಧಂತೇ ಪ್ರಸಾದಾತ್ತಸ್ಯ ಭೂಪತೇಃ ॥ ೨೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಗುರುತೀರ್ಥೇ ಚ್ಯವನೋಪಾಖ್ಯಾನೇ
ಚತುರ್ವಿಂಶತ್ಯಧಿಕಶತತಮೋಽಧ್ಯಾಯಃ



---

೨೫. ಮಹಾತ್ಮನಾದ ಪೃಥುವಿನ ಆಜ್ಞೆಯು ಈ ರೀತಿಯಾಗಿದೆ. ಆದ್ದರಿಂದ ಎಲ್ಲ ಜನರೂ ನಿತ್ಯವೂ ಸದಾಚಾರದಿಂದಿರುತ್ತಾರೆ.

೨೬. ಧರ್ಮದಲ್ಲಿ ಆಸಕ್ತರಾಗಿ ದಾನಮಾಡುತ್ತ ಭೋಗಗಳನ್ನು ಅನುಭವಿಸುತ್ತಾರೆ. ಆ ರಾಜನ ಅನುಗ್ರಹದಿಂದ ಸರ್ವಸೌಖ್ಯಗಳನ್ನು ಹೊಂದುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ,
ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚವಿಂಶತ್ಯಧಿಕಶತತಮೋಽಧ್ಯಾಯಃ

---

॥ ಸೂತ ಉವಾಚ ॥

ವೇನಸ್ಯಾಜ್ಞಾಂ ಸಮಾಪ್ರಾಪ್ಯ ಪೃಥುಃ ಪರಮಧಾರ್ಮಿಕಃ ।
ಸಂಬಭಾರ ಸ ಸಂಭಾರಾನ್ನಾನಾಪುಣ್ಯಾನ್ನೃಪಾತ್ಮಜಃ ॥ ೧ ॥

ನಿಮಂತ್ರ್ಯ ಬ್ರಾಹ್ಮಣಾನ್ಸರ್ವಾನ್ನಾನಾದೇಶೋದ್ಭವಾನಥ ।
ಅಥ ವೇನ ಇಯಾಜಾಸಾವಶ್ವಮೇಧೇನ ಭೂಪತಿಃ ॥ ೨ ॥

ದಾನಾನ್ಯದಾದ್ಬ್ರಾಹ್ಮಣೇಭ್ಯೋ ನಾನಾರೂಪಾಣ್ಯನೇಕಶಃ ।
ಜಗಾಮ ವೈಷ್ಣವಂ ಲೋಕಂ ಸಕಾಯೋ ಜಗತೀಪತಿಃ ॥ ೩ ॥

---

## ನೂರ ಇಪ್ಪತ್ತೈದನೆಯ ಅಧ್ಯಾಯವು

೧. ಸೂತನು ಹೇಳಿದನು:—ಪವಿತ್ರನೂ, ಧರ್ಮಿಷ್ಠನೂ ಆದ ಪೃಥುವು ವೇನನ ಅಪ್ಪಣೆಯಂತೆ ಅನೇಕ ಬಗೆಯೊದ ಉತ್ತಮವಾದ ಯಜ್ಞದ ಸಾಮಾನುಗಳನ್ನು ಸಿದ್ಧಪಡಿಸಿದನು.

೨. ಅನಂತರ ನಾನಾ ದೇಶಗಳಿಂದಲೂ ವೇದಪಾರಗರಾದ ಬ್ರಾಹ್ಮಣರನ್ನು ಕರೆಸಿದನು. ವೇನನು ಅಶ್ವಮೇಧಯಾಗವನ್ನು ಮಾಡಿದನು.

೩. ಬ್ರಾಹ್ಮಣರಿಗೆ ನಾನಾ ಬಗೆಯೊದ ದಾನಗಳನ್ನು ಕೊಟ್ಟನು. ಅನಂತರ ಸಶರೀರನಾಗಿ ವಿಷ್ಣುಲೋಕವನ್ನು ಹೊಂದಿದನು.

ವಿಷ್ಣುನಾ ಸಹ ಧರ್ಮಾತ್ಮಾ ನಿತ್ಯಮೇವ ಪ್ರವರ್ತತೇ ।
ಏತದ್ವಃ ಸರ್ವಮಾಖ್ಯಾತಂ ಚರಿತಂ ತಸ್ಯ ಭೂಪತೇಃ ॥ ೪ ॥

ಸರ್ವಪಾಪೋಪಶಮನಂ ಸರ್ವದುಃಖವಿನಾಶನಂ ।
ಪೃಥುರೇವಂ ಸ ಧರ್ಮಾತ್ಮಾ ರಾಜ್ಯಂ ಪೃಥ್ವ್ಯಾಶ್ಚಕಾರ ಹ ॥ ೫ ॥

ತ್ರೈಲೋಕ್ಯೇನ ಸಮಂ ಪೃಥ್ವೀಂ ದುದೋಹ ನೃಪಸತ್ತಮಃ ।
ಪ್ರಜಾನುರಂಜಿತಾ ತೇನ ಪುಣ್ಯಧರ್ಮಾನುಕರ್ಮಭಿಃ ॥ ೬ ॥

ಏತತ್ತೇ ಸರ್ವಮಾಖ್ಯಾತಂ ಭೂಮಿಖಂಡಮನುತ್ತಮಂ ।
ಪ್ರಥಮಂ ಸೃಷ್ಟಿಖಂಡಂ ಹಿ ಭೂಮಿಖಂಡಂ ದ್ವಿತೀಯಕಂ ॥ ೭ ॥

ಭೂಮಿಖಂಡಸ್ಯ ಮಹಾತ್ಮ್ಯಂ ಕಥಯಿಷ್ಯಾಮ್ಯಹಂ ಪುನಃ ।
ಅಸ್ಯ ಖಂಡಸ್ಯ ವೈ ಶ್ಲೋಕಂ ಯಶ್ಶೃಣೋತಿ ನರೋತ್ತಮಃ ॥ ೮ ॥

---

೪. ಆ ಧರ್ಮಿಷ್ಠನಾದ ವೇನನು ವಿಷ್ಣುವಿನೊಡನೆಯೇ ಇರುತ್ತಿರುವನು. ಆ ರಾಜನ ಚರಿತ್ರೆಯೆಲ್ಲವನ್ನೂ ನಿನಗೆ ಹೇಳಿದುದಾಯಿತು.

೫. ಆ ಕಥೆಯು ಸರ್ವಪಾಪಗಳನ್ನೂ, ಸರ್ವದುಃಖಗಳನ್ನೂ ನಾಶಮಾಡುತ್ತದೆ. ಅನಂತರ ಪೃಥುವು ರಾಜ್ಯಭಾರವನ್ನು ಮತ್ತೆ ಮಾಡಲು ಆರಂಭಿಸಿದನು.

೬. ಭೂಮಿಯನ್ನು ಆಳುತ್ತ, ಭೂಮಿಯನ್ನು ಸ್ವರ್ಗಪಾತಾಳಗಳೊಡನೆ ಸಮನಾಗಿರುವಂತೆ ಮಾಡಿದನು. ಪುಣ್ಯವನ್ನೂ ಧರ್ಮವನ್ನೂ ಮಾಡುತ್ತ ಪ್ರಜೆಗಳನ್ನು ರಂಜಿಸಿದನು.

೭. ಉತ್ತಮವಾದ ಭೂಮಿಖಂಡವೆಲ್ಲವನ್ನೂ ಹೇಳಿದೆನು. ಮೊದಲನೆಯದು ಸೃಷ್ಟಿಖಂಡವು. ಎರಡನೆಯದು ಭೂಮಿಖಂಡವು.

೮. ಭೂಮಿಖಂಡದ ಮಹಿಮೆಯನ್ನು ಹೇಳುತ್ತೇನೆ. ಭಕ್ತಿಯಿಂದ ಈ ಖಂದದ ಒಂದು ಶ್ಲೋಕವನ್ನು ಕೇಳಿದರೂ ಒಂದು ದಿನದ ಪಾಪವು ನಾಶವಾಗುತ್ತದೆ.

ದಿನಸ್ಯೈಕಸ್ಯ ವೈ ಪಾಪಂ ತಸ್ಯ ಚೈವ ಪ್ರಣಶ್ಯತಿ ।
ಯೋ ನರೋ ಭಾವಸಂಯುಕ್ತೋ ಹ್ಯಧ್ಯಾಯಂ ಶೃಣುತೇ ಸುಧೀಃ ॥ ೯ ॥

ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ಶ್ರೂಯತಾಂ ದ್ವಿಜಸತ್ತಮಾಃ ।
ದತ್ತಸ್ಯ ಗೋಸಹಸ್ರಸ್ಯ ಬ್ರಾಹ್ಮಣೇಭ್ಯಸ್ಸುಪರ್ವಣಿ ॥ ೧೦ ॥

ಯತ್ಫಲಂ ತತ್ಪ್ರಜಾಯೇತ ವಿಷ್ಣುಶ್ಚೈವ ಪ್ರಸೀದತಿ ।
ಅಸ್ಯ ಪದ್ಮಪುರಾಣಸ್ಯ ಪಠಮಾನಸ್ಯ ನಿತ್ಯಶಃ ॥ ೧೧ ॥

ಕಲೌ ಯುಗೇ ಸುವಿಘ್ನಾಶ್ಚ ಜಾಯಂತೇ ತಸ್ಯ ನೋ ಕದಾ ॥ ೧೨ ॥

॥ ವ್ಯಾಸ ಉವಾಚ ॥

ಕಸ್ಮಾತ್ಕಲೌ ಪ್ರಜಾಯಂತೇ ಶೃಣ್ವಾನಸ್ಯ ಚ ಪದ್ಮಜ ।
ನರಸ್ಯ ಪುಣ್ಯಪಕ್ವಸ್ಯ ನಾನಾವಿಘ್ನಾಸ್ಸುದಾರುಣಾಃ ॥ ೧೩ ॥

॥ ಬ್ರಹ್ಮೋವಾಚ ॥

ಮುಖಸ್ಯಾಪ್ಯಶ್ವಮೇಧಸ್ಯ ಯತ್ಫಲಂ ಪರಿಕಥ್ಯತೇ ।
ತತ್ಫಲಂ ದೃಶ್ಯತೇ ವಿಪ್ರಾಃ ಪುರಾಣೇ ಪಂದ್ಮಸಂಜ್ಞಕೇ ॥ ೧೪ ॥

---

೯-೧೦. ಯಾವನು ಭಕ್ತಿಯಿಂದ ಒಂದು ಅಧ್ಯಾಯವನ್ನು ಕೇಳುತ್ತಾನೋ ಅವನಿಗೆ ಪರ್ವಕಾಲದಲ್ಲಿ ಸಾವಿರ ಗೋವುಗಳನ್ನು ದಾನಮಾಡಿದ ಫಲವು ಬರುತ್ತದೆ. ವಿಷ್ಣುವೂ ಪ್ರಸನ್ನನಾಗುತ್ತಾನೆ.

೧೧-೧೨. ನಿತ್ಯವೂ ಈ ಪದ್ಮಪುರಾಣವನ್ನು ಓದುತ್ತಿದ್ದರೆ, ಕಲಿಯುಗದಲ್ಲಿ ಅವನಿಗೆ ವಿಘ್ನಗಳೇ ಯಾವಾಗಲೂ ಉಂಟಾಗುವುದಿಲ್ಲ.

೧೩. ವ್ಯಾಸನು ಹೇಳಿದನು :—ಪುರಾಣಗಳನ್ನು ಕೇಳುವವರಿಗೆ ಕಲಿಯುಗದಲ್ಲಿ ವಿಘ್ನಗಳುಂಟಾಗಲು ಕಾರಣವೇನು ? ಎಲೈ ಬ್ರಹ್ಮನೇ, ಹೇಳು.

೧೪. ಬ್ರಹ್ಮನು ಹೇಳಿದನು :—ಪದ್ಮಪುರಾಣವನ್ನು ಓದಿದರೂ, ಕೇಳಿದರೂ ಅಶ್ವಮೇಧಯಾಗದ ಫಲವು ಲಭಿಸುತ್ತದೆ.

ಅಶ್ವಮೇಧಮುಖಾಃ ಪುಣ್ಯಾಃ ಕಲೌ ನೈವ ಪ್ರವರ್ತತೇ ।
ಪುರಾಣಂ ಚಾಪಿ ಯತ್ತದ್ವದಶ್ವಮೇಧಸಮಂ ಕಿಲ ॥ ೧೫ ॥

ಅಶ್ವಮೇಧಸ್ಯ ಯತ್ಪುಣ್ಯಂ ಸ್ವರ್ಗಮೋಕ್ಷಫಲಪ್ರದಂ ।
ನ ಭುಂಜಂತಿ ನರಾಃ ಪಾಪಾಃ ಪಾಪಮಾರ್ಗೇಷು ಸಂಸ್ಥಿತಾಃ ॥ ೧೬ ॥

ಪುರಾಣಸ್ಯಾಸ್ಯ ಚ ಫಲಂ ಪದ್ಮಸಂಜ್ಞಸ್ಯ ಸತ್ತಮಾಃ ।
ಅಶ್ವಮೇಧಸ್ಯ ಯತ್ಪುಣ್ಯಂ ಸ್ವರ್ಗಮೋಕ್ಷಫಲಪ್ರದಂ ॥ ೧೭ ॥

ನ ಭುಂಜಂತಿ ನರಾಃ ಪಾಪಾಃ ಪಾಪಮಾರ್ಗೇಷು ಸಂಸ್ಥಿತಾಃ ।
ಪುರಾಣಸ್ಯಾಸ್ಯ ಪುಣ್ಯಸ್ಯ ಪದ್ಮಸಂಜ್ಞಸ್ಯ ಸತ್ತಮ ॥ ೧೮ ॥

ಕಲೌ ಯುಗೇ ನರೈಃ ಪಾಪೈರ್ಗಂತವ್ಯಂ ನರಕಾರ್ಣವಂ ।
ತಸ್ಮಾಚ್ಛ್ರೋಷ್ಯಂತಿ ತತ್ಪುಣ್ಯಂ ಚತುರ್ವರ್ಗಪ್ರಸಾಧಕಂ ॥ ೧೯ ॥

---

೧೫. ಪುಣ್ಯಪ್ರದವಾದ ಅಶ್ವಮೇಧವನ್ನು ಕಲಿಯುಗದಲ್ಲಿ ಮಾಡಲಾರರು. ಪುರಾಣವು ಆ ಅಶ್ವಮೇಧಯಾಗಕ್ಕೆ ಸಮವಾದುದು. ಆದ್ದರಿಂದ ಆ ಫಲವನ್ನು ಹೇಳಿದೆ.

೧೬. ಅಶ್ವಮೇಧದ ಫಲವು ಸ್ವರ್ಗಮೋಕ್ಷಗಳನ್ನು ಕೊಡತಕ್ಕದು. ಪಾಪದ ದಾರಿಯಲ್ಲೇ ಯಾವಾಗಲೂ ನಡೆಯುವ ನರರು ಆ ಅಶ್ವಮೇಧದ ಫಲವನ್ನು ಅನುಭವಿಸಲಾರರು.

೧೭. ಈ ಪದ್ಮಪುರಾಣದ ಫಲವು ಅಶ್ವಮೇಧದ ಪುಣ್ಯವು. ಸ್ವರ್ಗಮೋಕ್ಷಗಳನ್ನು ಕೊಡತಕ್ಕದು.

೧೮. ಪಾಪಮಾರ್ಗದಲ್ಲಿ ಪ್ರವೃತ್ತಿಯುಳ್ಳ ಈ ನರರು ಪದ್ಮಪುರಾಣದ ಫಲವನ್ನು ಅನುಭವಿಸಲಾರರು.

೧೯. ಕಲಿಯುಗದಲ್ಲಿ ಪಾಪಿಗಳಾದ ಮನುಜರು ನರಕಕ್ಕೆ ಹೋಗಬೇಕು. ಆದುದರಿಂದ ಪದ್ಮಪುರಾಣವನ್ನು ಕೇಳಿದರೆ ಸ್ವರ್ಗಾದಿಗಳು ಲಭಿಸುತ್ತವೆ.

**ಯೇನ ಶ್ರುತಮಿದಂ ಪುಣ್ಯಂ ಪುರಾಣಂ ಪದ್ಮಸಂಜ್ಞಕಂ ।**
**ಸರ್ವಂ ಹಿ ಸಾಧಿತಂ ತೇನ ಚತುರ್ವರ್ಗಸ್ಯ ಕಾರಣಂ ॥ ೨೦ ॥**

**ಅಶ್ವಮೇಧಸ್ಯ ಯಜ್ಞಸ್ಯ ಫಲಂ ತಸ್ಯ ಪ್ರಜಾಯತೇ ।**
**ಶೃಣ್ವಾನಸ್ಯ ನರಸ್ಯಾಪಿ ಮಹಾವಿಘ್ನೋ ನ ಸಂಚರೇತ್ ॥ ೨೧ ॥**

**ಅಶ್ರದ್ಧಾ ಜಾಯತೇ ಚಾಪಿ ಪಾಠಕಸ್ಯ ನರಸ್ಯ ಚ ।**
**ಲೋಭಶ್ಚ ಜಾಯತೇ ತಸ್ಯ ಶ್ರಾವಕಸ್ಯ ದ್ವಿಜೋತ್ತಮಾಃ ॥ ೨೨ ॥**

**ಪ್ರೇಷಿತಾ ದೇವದೇವೇನ ಮಹಾಮೋಹಾಸ್ಸುದಾರುಣಾಃ ।**
**ಅಕರೋತ್ಸವಿನಾಶಂ ತು ಶೃಣ್ವತಶ್ಚಾಸ್ಯ ನಿತ್ಯಶಃ ॥ ೨೩ ॥**

**ದೂಷಕಾಃ ಕುತ್ಸಕಾಃ ಪಾಪಾಃ ಸಂಭವಂತಿ ದಿನೇ ದಿನೇ ।**
**ಜ್ಞಾತವ್ಯಂ ತು ಸುಬುದ್ಧೇನ ವಿಘ್ನರೂಪಂ ಮಮಾಧುನಾ ॥ ೨೪ ॥**

**ಸಂಜಾತಂ ದೃಶ್ಯತೇ ವ್ಯಾಸ ತಥಾ ಹೋಮಂ ಸಮಾಚರೇತ್ ।**
**ವೈಷ್ಣವೈಶ್ಚ ಮಹಾಮಂತ್ರೈರ್ವಿಷ್ಣುಸೂಕ್ತೈಸ್ಸುಪುಣ್ಯದೈಃ ॥ ೨೫ ॥**

---

೨೦. ಪುಣ್ಯವಾದ ಈ ಪದ್ಮಪುರಾಣವನ್ನು ಕೇಳಿದರೆ ಮೋಕ್ಷಾದಿಗಳಿಗೆ ಕಾರಣವಾದ ಎಲ್ಲವೂ ಸಿಕ್ಕುತ್ತವೆ.

೨೧. ಅವನಿಗೆ ಅಶ್ವಮೇಧದ ಫಲವು ಬರುತ್ತದೆ. ಕೇಳುವವನಿಗೂ ಕೂಡ ವಿಘ್ನಗಳುಂಟಾಗುವುದಿಲ್ಲ.

೨೨. ಓದುವವನಿಗೂ ಅಶ್ರದ್ಧೆಯುಂಟಾದರೆ ಕೇಳುವವನಿಗೂ ಕೂಡ ಲೋಭ ಉಂಟಾಗುತ್ತದೆ.

೨೩. ವಿಷ್ಣುವು ಕಳುಹಿಸಿರುವ ದಾರುಣವಾದ ಮಹಾಮೋಹಗಳು ವಿಘ್ನವನ್ನುಂಟುಮಾಡುತ್ತವೆ. ಕೇಳುತ್ತಿದ್ದರೆ ಅವು ವಿಘ್ನಗಳನ್ನು ಮಾಡುತ್ತವೆ.

೨೪. ಆ ಪುರಾಣವನ್ನು ದೂಷಿಸುವವರೂ, ಹಳಿಯುವವರೂ ಆದ ಇಂತಹ ಪಾಪಿಗಳು ದಿನದಿನಕ್ಕೆ ಹುಟ್ಟುತ್ತಿದ್ದಾರೆ. ಆದ್ದರಿಂದ ಆ ವಿಘ್ನರೂಪವನ್ನು ತಿಳಿಯಬೇಕು.

೨೫-೨೮. ವಿಷ್ಣುವಿನ ಮಹಾಮಂತ್ರಗಳಿಂದಲೂ, ವಿಷ್ಣುಸೂಕ್ತ, ಸಹಸ್ರ ಶೀರ್ಷ (ಪುರುಷಸೂಕ್ತ), ಇದಂ ವಿಷ್ಣುಃ, ಅಬ್ರಹ್ಮ, ತ್ರ್ಯಂಬಕಂ ಯಜಾಮಹೇ,

ವಿಷ್ಣ್ವಾರಾಧನಮಂತ್ರೇಣ ಸಹಸ್ರಶೀರ್ಷಕೇಣ ಚ ।
ಇದಂ ವಿಷ್ಣುರಿತ್ಯನೇನ ಅಬ್ರಹ್ಮಣೇನ ಪುನಃ ಪುನಃ ॥ ೨೬ ॥

ತ್ರ್ಯಂಬಕೇಣ ಚ ಮಂತ್ರೇಣ ಹೋಮಮೇವ ಸಮಾಚರೇತ್ ।
ಬೃಹತ್ಸಾಮ್ನಾ ಸುಮಂತ್ರೇಣ ದ್ವಾದಶಾಕ್ಷರಕೇಣ ವಾ ॥ ೨೭ ॥

ಯಸ್ಯ ದೇವಸ್ಯ ಯೋ ಹೋಮಸ್ತಸ್ಯ ಮಂತ್ರೇಣ ಹೋಮಯೇತ್ ।
ಅಷ್ಟೋತ್ತರತಿಲಾಜ್ಯೈಶ್ಚ ಪಾಲಾಶೈಸ್ಸಮಿಧೈರಪಿ ॥ ೨೮ ॥

ವಿಘ್ನೇಶಂ ಪೂಜಯೇತ್ಪೂರ್ವಂ ಶಾರದಾಂ ಚ ಸುರೇಶ್ವರೀಂ ।
ಗ್ರಹಾಣಾಮಪಿ ಕರ್ತವ್ಯಂ ಸ್ಥಾಪನಂ ಪೂಜನಂ ದ್ವಿಜಾಃ ॥ ೨೯ ॥

ಜಾತವೇದೋ ಮಹಾಮಾಯಾಂ ಚಂಡಿಕಾಂ ಕ್ಷೇತ್ರನಾಯಕಂ ।
ತಿಲೈಶ್ಚ ತಂಡುಲೈರಾಜ್ಯೈಸ್ತೇಷಾಮನ್ನಸಮುದ್ಭವೈಃ ॥ ೩೦ ॥

ಏವಂ ಹೋಮಃ ಪ್ರಕರ್ತವ್ಯೋ ಬ್ರಾಹ್ಮಣೇಭ್ಯೋ ಧನಾರ್ಪಣಂ ।
ಯಥಾಸಾಮರ್ಥ್ಯಮೇವಾಪಿ ದಕ್ಷಿಣಾ ಧೇನುಸಂಯುತಾಃ ॥ ೩೧ ॥

---

ಬೃಹತ್ಸಾಮ, ದ್ವಾದಶಾಕ್ಷರ ಇವಲ್ಲದೆ ಯಾವ ಯಾವ ದೇವತೆಗೆ ಯಾವ ಯಾವ ಮಂತ್ರಗಳು ಹೇಳಲ್ಪಟ್ಟಿವೆಯೋ, ಅವವುಗಳಿಂದ ಅವರವರಿಗೆ ಹೋಮಮಾಡಬೇಕು. ನೂರೆಂಟು ಬಾರಿ ಎಳ್ಳು, ತುಪ್ಪ, ಮುತ್ತುಗದ ಕಡ್ಡಿಗಳಿಂದ ಹೋಮಮಾಡಬೇಕು.

೨೯. ಮೊದಲು ವಿಘ್ನೇಶ್ವರನ ಪೂಜೆಯನ್ನು ಮಾಡಬೇಕು. ಅನಂತರ ಶಾರದೆಯನ್ನೂ, ದುರ್ಗಿಯನ್ನೂ ಪೂಜೆಮಾಡಬೇಕು. ನವಗ್ರಹಗಳನ್ನು ಸ್ಥಾಪಿಸಿ ಪೂಜಿಸಬೇಕು.

೩೦. ಅಗ್ನಿ, ದುರ್ಗೆ, ಚಂಡಿಕೆ, ಕ್ಷೇತ್ರಪಾಲ ಇವರನ್ನು ಸ್ಥಾಪಿಸಿ, ಅನ್ನದಿಂದಲೂ, ಎಳ್ಳು, ಅಕ್ಕಿಗಳಿಂದಲೂ, ತುಪ್ಪದಿಂದಲೂ ಹೋಮಮಾಡಬೇಕು.

೩೧. ಹೀಗೆ ಹೋಮಮಾಡಿ ಬ್ರಾಹ್ಮಣರಿಗೆ ಶಕ್ತಿಯಿದ್ದಷ್ಟು ದಕ್ಷಿಣೆಯನ್ನು ಕೊಟ್ಟು, ಗೋದಾನವನ್ನು ಮಾಡಬೇಕು.

ತತೋ ವಿಘ್ನಾಃ ಪ್ರಣಶ್ಯಂತಿ ಪುರಾಣಂ ಸಿದ್ಧಿಮಾಪ್ನುಯಾತ್ ।
ಏವಂ ನ ಕುರುತೇ ಯಸ್ತು ತಸ್ಯ ವಿಘ್ನಂ ವದಾಮ್ಯಹಂ ॥ ೩೨ ॥

ತಸ್ಯಾಂಗೇ ಜಾಯತೇ ರೋಗೋ ಬಹುಪೀಡಾಪ್ರದಾಯಕಃ ।
ಭಾರ್ಯಾಶೋಕಃ ಪುತ್ರಶೋಕೋ ಧನಹಾನಿಃ ಪ್ರಜಾಯತೇ ॥ ೩೩ ॥

ನಾನಾವಿಧಾನ್ಮಹಾರೋಗಾನ್ಭುಂಜತೇ ನಾತ್ರ ಸಂಶಯಃ ।
ಯಸ್ಯ ಗೇಹೇ ನಾಸ್ತಿ ವಿತ್ತಮುಪವಾಸಂ ಸಮಾಚರೇತ್ ॥ ೩೪ ॥

ಏಕಾದಶೀಂ ಸ ಸಂಪ್ರಾಪ್ಯ ಪೂಜಯೇನ್ಮಧುಸೂದನಂ ।
ಉಪಚಾರೈಷ್ಷೋಡಶಭಿರ್ಭಾವಯುಕ್ತೇನ ಚೇತಸಾ ॥ ೩೫ ॥

ಬ್ರಾಹ್ಮಣಾನ್ಭೋಜಯೇದ್ಯಸ್ತು ಯಥಾವಿತ್ತಾನುಸಾರತಃ ।
ಕೇಶವಾಯ ತತೋ ದತ್ವಾ ಸಂಕಲ್ಪ್ಯ ಹವಿಷಾನ್ವಿತಂ ॥ ೩೬ ॥

ಸ್ವಯಂ ಕುರ್ಯಾತ್ತತಃ ಪ್ರಾಜ್ಞೋ ಭೋಜನಂ ಸಹ ಬಾಂಧವೈಃ ।
ಪುತ್ರೈಶ್ಚ ಭಾರ್ಯಯಾ ಯುಕ್ತಸ್ತತಸ್ಸಿದ್ಧಿಮವಾಪ್ನುಯಾತ್ ॥ ೩೭ ॥

---

೩೨. ಹಾಗೆ ಮಾಡಿದರೆ ವಿಘ್ನಗಳೆಲ್ಲಾ ಹೋಗಿ ಪುರಾಣವು ಸಿದ್ಧಿಯನ್ನು ಹೊಂದುತ್ತದೆ. ಹೀಗೆ ಮಾಡದವನಿಗೆ ಬರುವ ವಿಘ್ನಗಳನ್ನು ಹೇಳುತ್ತೇನೆ.

೩೩. ಅಂತಹವನಿಗೆ ದೇಹದಲ್ಲಿ ಬಹು ಕಷ್ಟಪ್ರದವಾದ ರೋಗವು ಬರುತ್ತದೆ. ಹೆಂಡತಿ, ಮಕ್ಕಳುಗಳ ದುಃಖವುಂಟಾಗುತ್ತದೆ. ಹಣ ನಾಶವಾಗುತ್ತದೆ. ಅನೇಕ ಬಗೆಯಾದ ಮಹಾರೋಗವನ್ನು ಅನುಭವಿಸುತ್ತಾನೆ.

೩೪-೩೫. ಧನವಿಲ್ಲದವನು ಏಕಾದಶಿಯಲ್ಲಿ ಉಪವಾಸಮಾಡಿ ವಿಷ್ಣುವನ್ನು ಭಕ್ತಿಯಿಂದ ಷೋಡಶೋಪಚಾರಪೂಜೆಯಿಂದ ಪೂಜಿಸಬೇಕು.

೩೬. ಶಕ್ತಿಗೆ ಅನುಸಾರವಾಗಿ ಬ್ರಾಹ್ಮಣರನ್ನು ಭೋಜನಮಾಡಿಸಬೇಕು.

೩೭. ಮೊದಲು ಹವಿಸ್ಸಿನಿಂದ ಕೇಶವನನ್ನು ಪೂಜಿಸಿ ಆ ಮೇಲೆ ಅನ್ನ ಹಾಕಬೇಕು. ಅನಂತರ ಹೆಂಡತಿ, ಮಕ್ಕಳು, ಬಾಂಧವರೊಡನೆ ತಾನು ಊಟಮಾಡಬೇಕು. ಹಾಗಾದರೆ ಸಿದ್ಧಿಯುಂಟಾಗುತ್ತದೆ.

ಪುರಾಣಸಂಹಿತಾ ಪೂರ್ಣಾ ಶ್ರೋತವ್ಯಾ ಧರ್ಮತತ್ಪರೈಃ ।
ಚತುರ್ವರ್ಗಸ್ಯ ವೈ ಸಿದ್ಧಿರ್ಜಾಯತೇ ತಸ್ಯ ನಾನ್ಯಥಾ ॥ ೩೮ ॥

ಸಪಾದಂ ಲಕ್ಷಮೇಕಂ ತು ಬ್ರಹ್ಮಾಖ್ಯಂ ಪುಷ್ಕರಂ ಶೃಣು ।
ಕೃತೇ ಯುಗೇ ತು ನಿಷ್ಪಾಪಾಃ ಶೃಣ್ವಂತಿ ಮನುಜಾ ದ್ವಿಜಾಃ ॥ ೩೯ ॥

ಲಕ್ಷಸ್ಯಾರ್ಧಂ ತತಃ ಕೃತ್ಸ್ನಂ ಪುರಾಣಂ ಪದ್ಮಸಂಜ್ಞಕಂ ।
ಶ್ಲೋಕಾನಾಂ ತು ಸಹಸ್ರಾಭ್ಯಾಂ ದ್ವಾಭ್ಯಾಮೇವ ತಥಾಧಿಕಂ ॥

ತ್ರೇತಾಯುಗೇ ತಥಾ ಪ್ರಾಪ್ತೇ ಶೃಣ್ವಂತಿ ಮನುಜಾ ದ್ವಿಜಾಃ ।
ಚತುರ್ವರ್ಗಫಲಂ ಭುಕ್ತ್ವಾ ತೇ ಯಾಸ್ಯಂತಿ ಹರಿಂ ಪುನಃ ॥ ೪೧ ॥

ದ್ವಾವಿಂಶತಿಸಹಸ್ರಾಣಾಂ ಸಂಹಿತಾ ಪದ್ಮಸಂಜ್ಞಕಾ ।
ದ್ವಾಪರೇ ಕಥಿತಾ ವಿಪ್ರ ಬ್ರಹ್ಮಣಾ ಪರಮಾತ್ಮನಾ ॥ ೪೨ ॥

ದ್ವಾದಶೈವ ಸಹಸ್ರಾಣಾಂ ಪದ್ಮಾಖ್ಯಾಂ ಚ ಸುಸಂಹಿತಾಂ ।
ಕಲೌ ಯುಗೇ ಪಠಿಷ್ಯಂತಿ ಮಾನುಷಾ ವಿಷ್ಣುತತ್ಪರಾಃ ॥ ೪೩ ॥

---

೩೮. ಆ ಪುರಾಣದ ಸಂಹಿತೆಯನ್ನು ಧರ್ಮತತ್ಪರರಾಗಿ ಪೂರ್ಣವಾಗಿ ಕೇಳಬೇಕು. ಹಾಗಾದರೆ ಧರ್ಮಾರ್ಥಕಾಮಮೋಕ್ಷಗಳ ಸಿದ್ಧಿಯೂ ಆಗುತ್ತದೆ.

೩೯. ಬ್ರಹ್ಮನು ಹೇಳಿದ ಪದ್ಮಪುರಾಣವು ಒಂದೂಕಾಲು ಲಕ್ಷ ಗ್ರಂಥಗಳಿವೆ. ಅವೆಲ್ಲವನ್ನೂ ಕೃತಯುಗದಲ್ಲಿ ಪಾಪರಹಿತರು ಕೇಳುತ್ತಿದ್ದರು.

೪೦-೪೧. ತ್ರೇತಾಯುಗದಲ್ಲಿ ಅರ್ಧಲಕ್ಷವೂ ಎರಡುಸಾವಿರವೂ ಇರುವ ಗ್ರಂಥ ಉಳ್ಳವಾಗುತ್ತದೆ. ಅದನ್ನು ಅವರು ಕೇಳಿ ಚತುರ್ವರ್ಗಗಳನ್ನು ಅನುಭವಿಸಿ ಹರಿಯ ಪದವನ್ನು ಹೊಂದುತ್ತಾರೆ.

೪೨. ದ್ವಾಪರಯುಗದಲ್ಲಿ ಬ್ರಹ್ಮನಿಂದ ನಿರ್ಮಿತವಾದ ಆ ಪದ್ಮಪುರಾಣವು ಇಪ್ಪತ್ತೆರಡು ಸಾವಿರವಾಗಿ ಉಳಿಯುತ್ತದೆ.

೪೩. ಕಲಿಯುಗದಲ್ಲಿ ವೈಷ್ಣವರು ಹನ್ನೆರಡು ಸಾವಿರ ಗ್ರಂಥಗಳನ್ನೇ ಪಠಿಸುತ್ತಾರೆ.

